ನೆಲದೊಡಲ ಚಿಗುರು

ನಾಡೋಜ ಡಾ|| ಎಲ್. ನಾರಾಯಣ ರೆಡ್ಡಿ ಅವರ ಬದುಕು, ಚಿಂತನೆ





ಎನ್ ಎಲ್ ಆನಂದ್
ಗುಂಡಪ್ಪ ದೇವಿಕೇರಿ

**168 ಪುಟಗಳು** **₹ 140**

"ರೆಡ್ಡಿಯವರೇ, ಗಾಂಧೀನಾಡಿನಿಂದ ನೀವೊಬ್ಬ ಕೃಷಿಋಷಿಯಾಗಿ ಮೇಲೆ ಬರುತ್ತಿರುವುದರಿಂದ ಮತ್ತು ನಾನೊಬ್ಬ ಕೃಷಿಋಷಿಯಾದುದರಿಂದ ನಿಮ್ಮ ಪಾದಕ್ಕೆ ಮನಸ್ಫೂರ್ತಿಯಾಗಿ ನಮಸ್ಕರಿಸಿದೆ"
–ಇದು 'ಒಂದು ಹುಲ್ಲಿನ ಕ್ರಾಂತಿ' ಕೃತಿಯ ಲೇಖಕ ಜಪಾನಿನ ಫುಕುವೊಕಾ, ರೆಡ್ಡಿಯವರ ಭೇಟಿಯ ಸಂದರ್ಭದಲ್ಲಿ ಆಡಿದ ಮಾತು!

ಮೂರು ವರ್ಷದ
**ಹೊಸತು**
ಚಂದಾದಾರರಿಗೆ
20% ರಿಯಾಯಿತಿ

ಎಲ್ಲ ಹುಡುಗರಂತೆ ಸಾಮಾನ್ಯ ಚಟುವಟಿಕೆಗಳಿಂದ ಕೂಡಿದ್ದ ಇವರು ಎಲ್ಲರೂ ಹುಬ್ಬೇರಿಸಿ ನೋಡುವಂತೆ ಎತ್ತರವಾಗಿ ಬೆಳೆದು ನಿಂತಿದ್ದೇ ಒಂದು ಸೋಜಿಗದ ಕಥಾನಕ...

## ನಾಡೋಜ ಡಾ|| ಎಲ್. ನಾರಾಯಣರೆಡ್ಡಿ ಅವರ ಬದುಕು – ಚಿಂತನೆ

# ನೆಲದೊಡಲ ಚಿಗುರು

ಇಂದು ಸಹಜ ಕೃಷಿಯ ಬಗ್ಗೆ ಮಾತು ಪ್ರಾರಂಭಿಸುವುದಾದರೆ ಅಲ್ಲಿ ಮೊದಲು ನಾಡೋಜ ಡಾ|| ಎಲ್. ನಾರಾಯಣ ರೆಡ್ಡಿಯವರ ಹೆಸರು ಬಂದೇ ಬರುತ್ತದೆ. ಈ ಪುಸ್ತಕ ಅವರ ಜೀವನ ಕಥನ ಮತ್ತು ಕೃಷಿಕರಿಗೆ ಅವರ ಮಾರ್ಗದರ್ಶನ ಎರಡನ್ನೂ ಒಳಗೊಂಡ ವಿಶಿಷ್ಟ ಕೃತಿ. ಸಾಮಾನ್ಯ ರೈತಕುಟುಂಬದಲ್ಲೊಬ್ಬರಾಗಿ, ಹತ್ತರಲ್ಲೊಬ್ಬ ಸಾಮಾನ್ಯ ಹುಡುಗನಂತೆ ಬಾಲ್ಯ ಕಳೆದು, ವಿದ್ಯೆ ಕಲಿತು, ಪಟ್ಟಣ ಸೇರಿ, ನೌಕರಿ ಗಳಿಸಿ, ಅಲ್ಲಿಯೂ ಒಳ್ಳೆಯ ಹೆಸರು ಗಳಿಸಿದ್ದು ಜೀವನದ ಮೊದಲರ್ಧ ಭಾಗದಲ್ಲಿ. ಮುಂದೆ ನಡೆದದ್ದೇ ಬೇರೆ. ಮನೆಗೆ ಮರಳಿ ಎಲ್ಲರಂತೆ ಕೃಷಿಕರಾಗಿ ಸ್ವಾನುಭವದಿಂದ ಕಲಿತ ಕೃಷಿಯ ಪಾಠಗಳನ್ನು ಎಲ್ಲ ರೈತರಿಗೂ ಕಲಿಸುತ್ತ ಸಹಜ ಕೃಷಿಯ ಆಂದೋಲನವನ್ನೇ ಈಗ ಕೈಗೊಂಡಿದ್ದಾರೆ. ಹೆಚ್ಚು ಫಸಲು ಬರಲೆಂಬ ಆಸೆಯಿಂದ ಭೂಮಿಗೆ ಬೇಕಿಲ್ಲದ ರಸಗೊಬ್ಬರ, ಕೀಟನಾಶಕ ಸುರಿದು ಭೂಮಿಯನ್ನು ಬರಡು ಮಾಡಬೇಡಿರೆಂದು ಕರೆ ನೀಡುತ್ತಾರೆ. ಕೃಷಿಗೆ ಮಾರಕವಾದ ಕೀಟಬಾಧೆಯನ್ನು ಪರಿಸರಸ್ನೇಹಿ ಉಪಾಯದಿಂದ ನೀಗಿಸುತ್ತಾರೆ. ಇವರ ಮಾತು, ಸಲಹೆ, ಸೂಚನೆ ಇಂದು ಮಹತ್ವದ್ದಾಗಿ ದೇಶ-ವಿದೇಶಗಳಲ್ಲಿ ಮನ್ನಣೆ ಪಡೆದಿವೆ. ವಿದೇಶಗಳಿಂದ ಕೃಷಿ ವಿದ್ಯಾರ್ಥಿಗಳು ಸೋರಹುಣಸೆ ಗ್ರಾಮಕ್ಕೆ ಬಂದು ಇವರ ಕೃಷಿಯ ಅನುಭವಗಳನ್ನು ಆಲಿಸಿ, ಕಲಿತು ಹೋಗುತ್ತಾರೆ. ನಾರಾಯಣ ರೆಡ್ಡಿಯವರ ಕೃಷಿ ವಿಚಾರಗಳೆಂದರೆ ಅಗ್ರಮಾನ್ಯ ಸಂಗತಿಗಳೆಂದು ಹೆಸರು ಪಡೆದಿವೆ. ಭೂಮಿಯಲ್ಲೇನೂ ಬೆಳೆಯುತ್ತಿಲ್ಲ, ಆತ್ಮಹತ್ಯೆಯೊಂದೇ ದಾರಿ ಎಂದು ಹತಾಶರಾದ ರೈತರಿಗೆ ಇವರ ಅಮೂಲ್ಯ ಸಲಹೆಗಳು ಜೀವದಾನ ನೀಡುತ್ತವೆ.

ಪುಸ್ತಕದ ಬೆಲೆಯೊಂದಿಗೆ ಅಂಚೆ/ಕೊರಿಯರ್ ವೆಚ್ಚ ರೂ. 20 ಸೇರಿಸಿ ಎಂ. ಓ. ಅಥವಾ ಡಿ. ಡಿ. ಕಳಿಸಿ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com URL : www.navakarnataka.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ಕಮಲಂ ಅರಸು, ತನು, ಪ್ರತೀಕ್ ಸಿನ್ಹಾ, ವಿ. ಗೋಪಾಲ್, ಶ್ರೀಹರಿ, ರವಿಹೆಗ್ಗಡಿ, ಸುವರ್ಣ, ಉಮೇಶ್ ಹಿರೇಮಠ, ಗೋಪಿ, ವಿವೇಕಾನಂದ

**ಮುಖಚಿತ್ರ :** ಅಂತರ್ಜಾಲದಿಂದ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

ಮಾಧ್ಯಮಗಳು 'ಕರ್ನಾಟಕದ ಕುರುಕ್ಷೇತ್ರ' ಎಂದು ಅಬ್ಬರದಿಂದ ಬಣ್ಣಿಸುತ್ತಿದ್ದ ಕರ್ನಾಟಕ ರಾಜ್ಯದ ಮಹಾಚುನಾವಣೆ ಮುಗಿದಿದೆ. ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಸ್ಥಾನ ಗಳಿಸಿ ರಾಜ್ಯದಲ್ಲಿ ಕಾಂಗ್ರೆಸ್ ಅಧಿಕಾರದ ಚುಕ್ಕಾಣಿ ಹಿಡಿದಿದೆ. ಮುಖ್ಯಮಂತ್ರಿಯಾಗಿ ಸಿದ್ದರಾಮಯ್ಯ ಅಧಿಕಾರ ವಹಿಸಿಕೊಂಡಿದ್ದಾರೆ. ಹತ್ತು ವರ್ಷಗಳ ನಂತರ ಮತ್ತೆ ಕಾಂಗ್ರೆಸ್ ಆಡಳಿತ ಪ್ರಾರಂಭವಾಗುತ್ತಿದೆ. ಅಂದ ಹಾಗೆ ಈ ಸಲ ಚುನಾವಣೆಗಳಲ್ಲಿ ಜಯಗಳಿಸಿರುವ ೨೨೩ ಮಂದಿ ಶಾಸಕರ ಪೈಕಿ ೨೦೩ ಶಾಸಕರು ಹಲವು ಕೋಟಿಗಳ ಒಡೆಯರು. ಇನ್ನು ಒಬ್ಬೊಬ್ಬರೂ ಮುಂದಿನ ಐದು ವರ್ಷಗಳಲ್ಲಿ ಇನ್ನೆಷ್ಟು ಕೋಟಿ ಕಮಾಯಿಸುವರೋ ನೋಡಬೇಕು. ಇದಕ್ಕೆ ನಾವಂತೂ ಐದು ವರ್ಷ ಕಾಯಲೇಬೇಕು. ಇದನ್ನು ಬರೆಯುತ್ತಿರುವಾಗ ದೆಹಲಿಯಲ್ಲಿ ಸಚಿವ ಸಂಪುಟದ ಪಟ್ಟಿ ತಯಾರಿಕೆಯ ಕಸರತ್ತು ನಡೆಯುತ್ತಿದೆ. ನೂರ ಇಪ್ಪತ್ತೊಂದರಲ್ಲಿ ತೊಂಬತ್ತು ಕಾಂಗ್ರೆಸ್ ಶಾಸಕರು ದೆಹಲಿಯಲ್ಲಿ ಬೀಡು ಬಿಟ್ಟಿದ್ದಾರೆ ಎಂದರೆ ಪರಿಸ್ಥಿತಿ ಏನೆಂದು ಊಹಿಸಿಕೊಂಡುಬಿಡಿ.

ಹೆಗಲಮೇಲೆ ಅಂಗವಸ್ತ್ರ ಎಸೆದುಕೊಂಡು ಮುಖ್ಯಮಂತ್ರಿ ಸತ್ಯದ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸಿದ್ದಾರೆ. ಅದು ಎಷ್ಟು ಮಟ್ಟಿಗೆ ಸಾಧ್ಯವಾದೀತೊ ನೋಡಬೇಕು ಮುಂದಿನ ದಿನಗಳಲ್ಲಿ. ತಮ್ಮದೇ ಆದ ಶೈಲಿಯಲ್ಲಿ ಸಿದ್ದರಾಮಯ್ಯ ಸಾಹಿತಿಗಳನ್ನು ಪ್ರಮುಖರನ್ನು ಕಂಡು 'ಸಮಾಲೋಚನೆ' ನಡೆಸಿದ್ದಾರೆ. ಬಡವರಿಗೆ ಒಂದು ರೂಪಾಯಿಗೆ ಕೆಜಿ ಅಕ್ಕಿಗೆ ಫರ್ಮಾನು ಆಗಿದೆ. ಇದು ಎಷ್ಟು ಕಾಲ ಹೇಗೆ ನಡೆದೀತು ನೋಡೋಣ. ಹೊಸ ಬಜೆಟ್‌ನಲ್ಲಿ ಏನೇನು ಮಾಡುತ್ತಾರೋ ನೋಡೋಣ. ಈಗಂತೂ ಅವರಿಗೆ ಸಂಪುಟ ರಚನೆಯಾಗುವವರೆಗೆ ಬಿಡುವಿಲ್ಲ. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ದೊರೆಸ್ವಾಮಿಯವರನ್ನು ಖುದ್ದಾಗಿ ಮುಖ್ಯಮಂತ್ರಿಗಳು ಭೆಟ್ಟಿಯಾಗಿದ್ದರು ಮನೆ ಬಾಗಿಲಿಗೇ ಹೋಗಿ. ಕಳಂಕಿತರನ್ನು ಸಚಿವ ಸಂಪುಟದಲ್ಲಿ ಸೇರಿಸಿಕೊಳ್ಳಬೇಡಿ ಎಂದು ಅವರು ಒಂದು ಪಟ್ಟಿಯನ್ನೂ ನೀಡಿದ್ದಾರೆ. ಇವರ ಪೈಕಿ ಡಿ. ಕೆ. ಶಿವಕುಮಾರ್, ಬಳ್ಳಾರಿಯ ಅನಿಲ್ ಲಾಡ್, ಭೂಕಬಳಿಕೆ ಸರದಾರ ಕೃಷ್ಣಪ್ಪ ಮೊದಲಾದವರ ಹೆಸರುಗಳು ಸೇರಿವೆ. ದೆಹಲಿ ಸೇರಿದ ಸಿದ್ದರಾಮಯ್ಯ ಈ ಪತ್ರ ತಮ್ಮ ಕೈಸೇರಿಲ್ಲ ಎಂದು ಹೇಳಿ ಜಾರಿಕೊಂಡಿದ್ದಾರೆ. 'ಕಳಂಕಿತರು' ಎಂದರೆ ಕ್ರಿಮಿನಲ್ ಮೊಕದ್ದಮೆಗಳನ್ನು ಎದುರಿಸುತ್ತಿರುವವರು ಎಂದು ವಿವರಿಸಿ ಹೇಳಬೇಕಿಲ್ಲ. ಚುನಾಯಿತ ಶಾಸಕರ ಪೈಕಿ ೭೩ ಜನರ ಮೇಲೆ ಗಂಭೀರವಾದ ಕ್ರಿಮಿನಲ್ ಮೊಕದ್ದಮೆಗಳಿವೆಯಂತೆ! ಇದು ಚುನಾವಣಾ ಆಯೋಗದ ಮುಂದೆ ಅವರೇ ಸಲ್ಲಿಸಿರುವ ಪ್ರಮಾಣ ಪತ್ರದಿಂದ ತಿಳಿದುಬಂದಿರುವುದು. ಪರಿಸ್ಥಿತಿ ಹಾಗಿರುವಾಗ ಶುದ್ಧಹಸ್ತರನ್ನು ಹೆಕ್ಕಿ ತೆಗೆಯುವುದು ಸಾಹಸವೆ. ಕಳಂಕಿತರನ್ನು ಬಿಟ್ಟು ಸಂಪುಟ ರಚಿಸಿದರೆ ಸರಕಾರಕ್ಕೆ ಉಳಿಗಾಲವೆಲ್ಲಿಂದ ಬಂತು ? ಇದೇ ಮುಖ್ಯಮಂತ್ರಿಯನ್ನು ಕಾಡುತ್ತಿರುವ ಪ್ರಶ್ನೆ. (ಬರೆದು ಮುಗಿಸಿದಾಗ ಬಂದ ಸುದ್ದಿ: ಕಳಂಕಿತರನ್ನು ಸದ್ಯಕ್ಕೆ ಸಂಪುಟಕ್ಕೆ ಸೇರಿಸಿಕೊಳ್ಳಲಿಲ್ಲ, ಮುಂದೇನಾಗುತ್ತೊ ನೋಡೋಣ.) ಜನ ಬಯಸುವುದು ಶುದ್ಧ, ಪಾರದರ್ಶಕ ಸರಕಾರ. ಅದನ್ನೆಲ್ಲಿ ತರುವುದು ಎಂದು ಹುಡುಕಬೇಕಷ್ಟೆ.

* * *

ಚುನಾವಣೆ ಮುಗಿದ ಮೇಲೆ ಗೆದ್ದವರು ಬೀಗುವುದು ಸೋತವರು ಆತ್ಮಾವಲೋಕನ ಮಾಡಿಕೊಳ್ಳುವುದು ಇದ್ದದ್ದೆ. ಹಾಗೂ ಹೀಗೂ ಹಿಗ್ಗಾಮುಗ್ಗಾ ಕಿತ್ತಾಡಿ, ಮೂರು ಮೂರು ಮುಖ್ಯಮಂತ್ರಿಗಳನ್ನು ನಾಡಿಗೆ ನೀಡಿ, ಭ್ರಷ್ಟಾಚಾರದಲ್ಲಿ ಮುಳುಗಿ ತೇಲಿ, ಮೊದಲ ಬಾರಿಗೆ ದಕ್ಷಿಣ ಭಾರತದಲ್ಲಿ ಭಾಜಪ ಅರಳಿಸಿದ ಕಮಲ ಕಮರಿಹೋಗಲು ಐದು ವರ್ಷ ಹಿಡಿಯಿತು. ಹೀನಾಯ ಸೋಲನ್ನು ಅನುಭವಿಸಿರುವ ಭಾಜಪ ಜೆಡಿಎಸ್‌ನಷ್ಟೇ ಸ್ಥಾನಗಳನ್ನು ಪಡೆದುಕೊಂಡಿದೆ. ಈ ಎರಡೂ ಪಕ್ಷಗಳು ಸೇರಿ ವರ್ಷ ಚಿಲ್ಲರೆ ಆಡಳಿತ ನಡೆಸಿದ್ದನ್ನು ಜನ ಮರೆತಿಲ್ಲ. ಪಡೆದಿರುವ ಮತಗಳ ಸಂಖ್ಯೆ ಗಮನಿಸಿದಲ್ಲಿ ಭಾಜಪ ವಿರೋಧ ಪಕ್ಷದ ಸ್ಥಾನವನ್ನು ಕಳೆದುಕೊಳ್ಳುತ್ತಿದೆ. ಇನ್ನು ಭಾಜಪಗೆ ಬುದ್ಧಿ ಕಲಿಸಲು ಹೊರಟ ಯಡಿಯೂರಪ್ಪ ಮತ್ತು ಶ್ರೀರಾಮುಲು ಪಾರ್ಟಿಗಳಿಗೆ ಬಾಲಗ್ರಹ ಪೀಡೆ ತಟ್ಟಿದೆ. ಒಂದಂಕಿ ದಾಟಲು ಆಗಲೇ ಇಲ್ಲ ಅವಕ್ಕೆ. ಕಾಂಗ್ರೆಸ್ಸಿಗೆ ಸ್ಪಷ್ಟ ಬಹುಮತ ಬಂದದ್ದರಿಂದ ಇತರರ ನಸೀಬು ಕುದುರುವುದಕ್ಕೆ ಅವಕಾಶವೇ ಇಲ್ಲ.

ಆತ್ಮಾವಲೋಕನದ ಬಗ್ಗೆ ಹೇಳಹೊರಟಿದ್ದು ವಿಷಯ ಎಲ್ಲೆಲ್ಲಿಗೋ ಹೋಯಿತು. ರಾಜ್ಯದಲ್ಲಿ ಭಾಜಪ ನಾಯಕರು ಕಿಮಕ್ ಕಮಕ್ ಎನ್ನದೆ ಸೋಲನ್ನು ಒಪ್ಪಿಕೊಂಡಿದ್ದಾರೆ. ತಮ್ಮ

(೬ನೇ ಪುಟಕ್ಕೆ)




ಸಂಪುಟ-೧೪ ಸಂಚಿಕೆ-೧೧ ಜೂನ್ ೨೦೧೩

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**





# ಅಂಚಿಗೆ ಸರಿದ ಚಳುವಳಿಯ ರಾಜಕಾರಣ

ಕರ್ನಾಟಕದಲ್ಲಿ ಬಿ.ಜೆ.ಪಿ.ಯ ದುರಾಡಳಿತ ಕೊನೆಗೊಂಡಿದೆ. ನಿರ್ಣಾಯಕವಾಗಿಯೇ ರಾಜ್ಯದ ಮತದಾರರು ಕೋಮುವಾದ ಮತ್ತು ಕೋಮುವಾದದ ಗರ್ಭದಲ್ಲಿ ಕಡು ಭ್ರಷ್ಟ ಭ್ರೂಣವನ್ನು ಹೊತ್ತು ತಂದಿದ್ದ ಭ್ರಷ್ಟ ಜನರ ಪಕ್ಷ(ಬಿ.ಜೆ.ಪಿ.)ವನ್ನು ತಿರಸ್ಕರಿಸಿದ್ದಾರೆ. ಕಳೆದ ಐದು ವರ್ಷಗಳ ಕಾಲ ಆಡಳಿತ ಮಾಡಿದ ಪಕ್ಷವನ್ನು ವಿರೋಧ ಪಕ್ಷದ ಸ್ಥಾನಕ್ಕೂ ಅನರ್ಹ ಎಂಬ ರೀತಿಯಲ್ಲಿ ಜನಾದೇಶ ಬಂದಿದೆ. ಬಿ.ಜೆ.ಪಿ. ಪರವಾಗಿದ್ದ ಸಿದ್ಧಾಂತಿಗಳು ಇದು ಬಿ.ಜೆ.ಪಿ.ಯ ಒಡಕಿನ ಪರಿಣಾಮವೆಂದು ಮುಖ ಉಳಿಸಿಕೊಳ್ಳುವ ಪ್ರಯತ್ನ ನಡೆಸಿದ್ದಾರೆ. ಆದರೆ ಇದು ವಾಸ್ತವವಲ್ಲ. ಬಿ.ಜೆ.ಪಿ.ಯ ದುರಾಡಳಿತಕ್ಕೆ, ಕೋಮುವಾದಕ್ಕೆ ಜನತೆ ಕೊಟ್ಟ ತೀರ್ಪು ಇದು ಎಂಬುದಕ್ಕೆ ಸಾಕಷ್ಟು ಉದಾಹರಣೆಗಳಿವೆ. ರಾಜ್ಯದ ಕರಾವಳಿ ಪ್ರದೇಶದ ಫಲಿತಾಂಶವೇ ಇದನ್ನು ಸಾಬೀತುಪಡಿಸುತ್ತದೆ. ಸಂಘಪರಿವಾರದವರು ಕೇಸರಿ ಕಾರಿಡಾರ್ ಎಂದೇ ನಂಬಿದ್ದ, ಕರಾವಳಿ ಪ್ರದೇಶದ ಜನ ಕೇಸರಿಯನ್ನು ತಿರಸ್ಕರಿಸಿದ್ದಾರೆ. ಎಷ್ಟೇ ಕೋಮು ಸಂಘರ್ಷಗಳನ್ನು ನಡೆಸಿದರೂ, ಪ್ರಚೋದನೆಯ ಚಟುವಟಿಕೆಗಳನ್ನು ನಡೆಸಿದರೂ ಅಲ್ಲಿ ಜನತೆ ಬಿ.ಜೆ.ಪಿ.ಯನ್ನು ಸೋಲಿಸಿದ್ದಾರೆ. ಈ ಸೋಲಿಗೆ ಬಿ.ಜೆ.ಪಿ.ಯಿಂದ ಸಿಡಿದು ಹೋದ ಕೆ.ಜೆ.ಪಿ.ಯಾಗಲೀ, ಬಿ.ಎಸ್.ಆರ್.ಸಿ.ಯಾಗಲೀ ಎಳ್ಳಷ್ಟೂ ಕಾರಣವಲ್ಲ. ಅಲ್ಲಿ ಬಿ.ಜೆ.ಪಿ. ಸೋಲಿನ ಅಂತರ ಈ ಸಿಡಿದು ಹೋದ ಪಕ್ಷಗಳು ಪಡೆದ ಮತಗಳಿಗಿಂತಲೂ ಹೆಚ್ಚಿದೆ. ಅಲ್ಲಿಗೆ ಬಿ.ಜೆ.ಪಿ.ಯಲ್ಲಿನ ಒಡಕು ಆ ಪಕ್ಷದ ಸೋಲಿಗೆ ಕಾರಣವಲ್ಲ. ಬಿ.ಜೆ.ಪಿ.ಯನ್ನು ಸೋಲಿಸುವುದೇ ಜನತೆಯ ಉದ್ದೇಶವಾಗಿತ್ತೆಂಬುದು ಸಾಬೀತಾಗಿದೆ. ಕರಾವಳಿಯ ಸೌಹಾರ್ದ ಕಂಟಕರನ್ನೂ, ಬಳ್ಳಾರಿ ರಿಪಬ್ಲಿಕ್ ಮಾಡಲು ಹೊರಟ ಗಣಿಗಳ್ಳರನ್ನೂ ಅಧಿಕಾರದಿಂದ ದೂರವಿಟ್ಟದ್ದು ಗುಣಾತ್ಮಕ ಬೆಳವಣಿಗೆ.

ಕಾಂಗ್ರೆಸ್‌ನ ಗೆಲುವಿಗೆ ಕಾರಣ ಬಿ.ಜೆ.ಪಿ.ಯ ದುರಾಡಳಿತವೇ ಹೊರತು ಆ ಪಕ್ಷದ ಕ್ರಿಯಾಶೀಲತೆ, ಕಾರ್ಯಕ್ರಮವಲ್ಲ. ವಿರೋಧ ಪಕ್ಷವಾಗಿ ವಿಫಲವಾದರೂ ಇಂದು ಆಡಳಿತ ಪಕ್ಷವಾಗಿ ಕಾಂಗ್ರೆಸ್ ಹೊರಹೊಮ್ಮಿದೆ. ವಾಸ್ತವವಾಗಿ ಕರ್ನಾಟಕದಲ್ಲಿ ಬಿ.ಜೆ.ಪಿ. ಎದುರಿಸಿದ ಭ್ರಷ್ಟಾಚಾರದ ಆರೋಪಗಳನ್ನೇ ಇಂದು ಕಾಂಗ್ರೆಸ್ ನಾಯಕತ್ವದ ಕೇಂದ್ರ ಸರಕಾರ ಎದುರಿಸುತ್ತಿದೆ. ಪ್ರಧಾನಿ ಕಾರ್ಯಾಲಯವನ್ನೂ ಒಳಗೊಂಡು ಭ್ರಷ್ಟತೆಯ ಜಾಲ ಕೇಂದ್ರದ ಮಂತ್ರಿ ಮಂಡಲವನ್ನೂ ವ್ಯಾಪಿಸಿದೆ. ಹೀಗಿದ್ದೂ ಪರ್ಯಾಯವಿಲ್ಲದೆ ಕರ್ನಾಟಕದ ಜನತೆ ಕಾಂಗ್ರೆಸ್‌ಅನ್ನು ಅಧಿಕಾರಕ್ಕೆ ತಂದಿದ್ದಾರೆ. ಇದು ಅಪೇಕ್ಷಿತ ಆಯ್ಕೆಯಲ್ಲ, ಅನಿವಾರ್ಯ ಆಯ್ಕೆ. ಅದೇನಿದ್ದರೂ ಕೋಮುವಾದಿ ಭ್ರಷ್ಟರಿಗಿಂತ, ಕಾಂಗ್ರೆಸ್ ಭ್ರಷ್ಟರನ್ನು ಎದುರಿಸುವುದು ವಾಸಿ. ಮುಖ್ಯಮಂತ್ರಿ ಸಿದ್ದರಾಮಯ್ಯನವರು ಕಳಂಕಿತರನ್ನು ದೂರವಿಡುವ ಮಾತುಗಳನ್ನಾಡುತ್ತಿದ್ದಾರೆ. ಮಂತ್ರಿಮಂಡಲ ರಚನೆಯಲ್ಲಿ ಸ್ವಲ್ಪಮಟ್ಟಿನ ಯಶಸ್ಸನ್ನೂ ಪಡೆದಿದ್ದಾರೆ. ಹಾಗಂತ ಈಗ ರಾಜ್ಯದ ಮಂತ್ರಿಮಂಡಲದಲ್ಲಿ ಇರುವವರೆಲ್ಲರೂ ಶುದ್ಧಹಸ್ತರೆಂದೇನೂ ಅಲ್ಲ. ಸಮಾಜವಾದಿ ಹಿನ್ನೆಲೆಯ, ಭ್ರಷ್ಟಾಚಾರದ ಆರೋಪಗಳಿಲ್ಲದ ಸಿದ್ದರಾಮಯ್ಯನವರ ಮಾತುಗಳನ್ನು ಕಾಂಗ್ರೆಸ್ ಹೈಕಮಾಂಡ್ ಮುಂಬರುವ ಲೋಕಸಭಾ ಚುನಾವಣೆಯವರೆಗೂ ಆಲಿಸುತ್ತದೆ. ಈಗ ಭ್ರಷ್ಟಾಚಾರದ ಹಗರಣಗಳಲ್ಲಿ ಸಿಲುಕಿರುವ ಕಾಂಗ್ರೆಸ್‌ಗೆ ಬರುವ ಲೋಕಸಭಾ ಚುನಾವಣೆಯಲ್ಲಿ ರಾಜ್ಯದ ೨೮ ಸಂಸದ ಸ್ಥಾನಗಳಲ್ಲಿ ಸಾಧ್ಯವಾದಷ್ಟೂ ಹೆಚ್ಚು ಸ್ಥಾನ ಪಡೆವ ಅನಿವಾರ್ಯತೆ ಇದೆ. ಇದು ಕೇಂದ್ರದಲ್ಲಿ ಕಾಂಗ್ರೆಸ್ ಪಕ್ಷದ ಅಳಿವು ಉಳಿವಿನ ಪ್ರಶ್ನೆ. ಸೋನಿಯಾ, ರಾಹುಲ್, ಮನಮೋಹನ ಸಿಂಗ್ ಅವರ ಭವಿಷ್ಯದ ಪ್ರಶ್ನೆ. ಆ ಕಾರಣಕ್ಕಾಗಿಯೇ ಲೋಕಸಭಾ ಚುನಾವಣೆವರೆಗೆ ರಾಜ್ಯದಲ್ಲಿ ಕಾಂಗ್ರೆಸ್ ಸರಕಾರ ಜನಪ್ರಿಯ ಕಾರ್ಯಕ್ರಮಗಳಿಗೆ ಆದ್ಯತೆ ನೀಡುತ್ತದೆ. ಆದರೆ ಆರ್ಥಿಕ, ಕೃಷಿ, ಕೈಗಾರಿಕಾ ನೀತಿಗಳಂತಹ ಮೂಲಭೂತ ವಿಷಯಗಳಲ್ಲಿ ಕಾಂಗ್ರೆಸ್ ಬಿ.ಜೆ.ಪಿ.ಗಿಂತ ಭಿನ್ನವೇನಲ್ಲ ಎಂಬುದು ಈಗಾಗಲೇ ಸಾಬೀತಾಗಿದೆ.

ಬಿ.ಜೆ.ಪಿ. ಮತ್ತು ಕಾಂಗ್ರೆಸ್‌ಗೆ ಪರ್ಯಾಯವಾಗಿ ಜನಪರ ಚಳುವಳಿಯ ರಾಜಕಾರಣ ಬಲವಾಗಿ ಬೆಳೆಯಬೇಕಾದದ್ದು ರಾಜ್ಯದ ಹಿತದ ದೃಷ್ಟಿಯಿಂದ ಅಪೇಕ್ಷಿತವಾದದ್ದು. ಆದರೆ ಕಳೆದ ಎರಡು ದಶಕಗಳಿಂದ ಜನಪರ ಚಳುವಳಿಗಳ ರಾಜಕೀಯ ಶಕ್ತಿ ಕುಂದತೊಡಗಿದೆ. ಕಳೆದ ಶಾಸನಸಭೆಯಲ್ಲಿ ಜನಪರ ಚಳುವಳಿಗಳ ಪ್ರಾತಿನಿಧ್ಯವೇ ಇರಲಿಲ್ಲ. ರಾಜ್ಯದಲ್ಲಿ ಕಾರ್ಮಿಕ ಚಳುವಳಿ, ರೈತ ಚಳುವಳಿ, ಮಹಿಳಾ ಚಳುವಳಿ, ದಲಿತ ಚಳುವಳಿಗಳು ನಿರಂತರವಾಗಿ ಹೋರಾಟಗಳನ್ನು ನಡೆಸಿದ್ದರೂ ಒಂದು ರಾಜಕೀಯ ಶಕ್ತಿಯಾಗುವಲ್ಲಿ ವಿಫಲವಾಗಿವೆ. ದೇಶದ ಮೊದಲ ಚುನಾವಣೆ ೧೯೫೨ರಿಂದ ನಿರಂತರವಾಗಿ ಕನಿಷ್ಠ ಸಂಖ್ಯೆಯಲ್ಲಾದರೂ ಪ್ರಾತಿನಿಧ್ಯ ಪಡೆದಿದ್ದ ಕಮ್ಯುನಿಸ್ಟರು ಇತ್ತೀಚಿನ ಚುನಾವಣೆಗಳಲ್ಲಿ ಶಾಸನಸಭೆಯಲ್ಲಿ ಗೈರುಹಾಜರಾಗಿದ್ದಾರೆ. ಅದೇ ರೀತಿ ದಲಿತ ಸಂಘಟನೆಗಳು ಈ ರಾಜ್ಯದಲ್ಲಿ ೮೦ರ ದಶಕದಲ್ಲಿ ಒಂದು ರಾಜಕೀಯ ಶಕ್ತಿಯಾಗಿ ರೂಪಗೊಳ್ಳಲು ಅವಕಾಶಗಳಿದ್ದರೂ ಅನೈಕ್ಯತೆ, ಕೆಲವು ಸಂಘಟನೆಗಳ ನಾಯಕರ ಸಮಯ ಸಾಧಕ ನಿಲುವಿನಿಂದ ಸಾಧ್ಯವಾಗಲಿಲ್ಲ. ಬಿ.ಎಸ್.ಪಿ. ಕರ್ನಾಟಕದಲ್ಲಿ ದಲಿತರ ಪ್ರಾತಿನಿಧಿಕ ಪಕ್ಷವಾಗಿ ಬೆಳೆಯಲೇ ಇಲ್ಲ. ಹಲವು ದಲಿತ ಸಂಘಟನೆಗಳ ಗುಂಪುಗಳಲ್ಲಿ ಬಿ.ಎಸ್.ಪಿ. ಸಹ ಒಂದು ಗುಂಪು ಮಾತ್ರ. ಸರ್ವೋದಯ ಪಕ್ಷವಾಗಿ ರೂಪಗೊಂಡ ರೈತಸಂಘ ಆಂತರಿಕ ಭಿನ್ನಾಭಿಪ್ರಾಯದಿಂದ ವಿಘಟನೆಗೊಂಡಿದ್ದರೂ ಅತಿ ಪ್ರಯಾಸದಿಂದ ಈ ಬಾರಿ ಒಂದು ಸ್ಥಾನ ಗಳಿಸುವಲ್ಲಿ ಯಶಸ್ವಿಯಾಗಿದೆ. ಸರ್ವೋದಯ ಪಕ್ಷದ ನಾಯಕ, ರೈತ ಹೋರಾಟಗಾರ ಕೆ. ಎಸ್. ಪುಟ್ಟಣ್ಣಯ್ಯ ಶಾಸಕರಾಗಿ ಆಯ್ಕೆಯಾಗಿರುವುದು ಸಮಾಧಾನದ ಸಂಗತಿ. ರಾಜ್ಯದ ಎಲ್ಲ ಜನಪರ ಚಳುವಳಿಗಳ ಪ್ರತಿನಿಧಿಯಾಗಿ ಪುಟ್ಟಣ್ಣಯ್ಯನವರು ಜನಧ್ವನಿಯಾಗಿ ಕೆಲಸ ಮಾಡಲಿ. ಆ ಶಕ್ತಿ ಅವರಿಗಿದೆ. ಆದರೆ ಎಲ್ಲ ಜನಪರ ಚಳುವಳಿಗಳ ನಾಯಕರು ಇಂದು ಗಂಭೀರವಾಗಿ ಚಿಂತಿಸುವ ಸಂದರ್ಭ ಬಂದಿದೆ. ಕಾರ್ಮಿಕರ, ರೈತರ, ದಲಿತರ ಸಮಸ್ಯೆಗಳ ಕುರಿತು ವರ್ಷಪೂರ್ತಿ ಹೋರಾಟ ಮಾಡುವ ಇವರು ಚುನಾವಣೆಯ ಸಂದರ್ಭದಲ್ಲಿ ಲೆಕ್ಕಕ್ಕುಂಟು ಆಟಕ್ಕಿಲ್ಲದಂತಿರುತ್ತಾರೆ. ಈ ಬಾರಿ ಎಡಪಕ್ಷಗಳು ೩೦ ಕ್ಷೇತ್ರಗಳಲ್ಲಿ, ಸರ್ವೋದಯ ಪಕ್ಷ ೨ ಕ್ಷೇತ್ರಗಳಲ್ಲಿ ಸ್ಪರ್ಧಿಸಿದ್ದವು. ದಲಿತ ಹೋರಾಟಗಾರರು ಬಿ.ಎಸ್.ಪಿ., ಆರ್.ಪಿ.ಐ. ಪಕ್ಷಗಳ

ಮೂಲಕ, ಇತರ ಪಕ್ಷಗಳಲ್ಲಿ ಕೆಲವರು ಸ್ಪರ್ಧಿಸಿದರೂ ಸರ್ವೋದಯ ಪಕ್ಷದ ಪುಟ್ಟಣ್ಣಯ್ಯನವರನ್ನು ಹೊರತುಪಡಿಸಿ ಯಾರೂ ಆಯ್ಕೆ ಆಗಲಿಲ್ಲ. ಇದರರ್ಥ ಚುನಾವಣೆಯಲ್ಲಿ ಗೆದ್ದರೆ ಮಾತ್ರ ಸಾರ್ಥಕ ಎಂಬುದಲ್ಲ. ಸಾಮಾಜಿಕ ಬದಲಾವಣೆಗಾಗಿ ಎಲ್ಲ ರೀತಿಯ ಹೋರಾಟದಂತೆ ಚುನಾವಣೆಯೂ ಒಂದು ಹೋರಾಟವೆ. ಪ್ರಜಾ ಪ್ರತಿನಿಧಿ ವೇದಿಕೆಯಲ್ಲಿ ಜನಪರವಾಗಿ ಧ್ವನಿಯೆತ್ತುವುದೂ ಒಂದು ಪ್ರಮುಖ ಹೋರಾಟವೇ. ಜನಪ್ರತಿನಿಧಿ ವೇದಿಕೆಯಲ್ಲಿ ಪ್ರಾತಿನಿಧ್ಯ ಪಡೆಯುವುದು ನಿತ್ಯ ಸಂಪರ್ಕಿಸುವ, ಸಂಘಟಿಸುವ ಜನರ ರಾಜಕೀಯ ಪ್ರಜ್ಞೆಯನ್ನು, ಅವರಲ್ಲಾದ ಗುಣಾತ್ಮಕ ಬದಲಾವಣೆಯನ್ನು, ಅಂಥ ಗುಣಾತ್ಮಕ ಬದಲಾವಣೆಗಾಗಿ ಸಂಘಟಕರು ಮಾಡಿದ ಪ್ರಯತ್ನವನ್ನು ಸೂಚಿಸುತ್ತದೆ. ಸಂಘಟನೆಗಳ ಜೊತೆಗಿರುವ ಜನರನ್ನು ಕೇವಲ ಪ್ರದರ್ಶನಕ್ಕೆ, ರ್‍ಯಾಲಿಗಳಿಗೆ, ಚಂದಾ ವಸೂಲಿಗೆ ಬಳಸಿ ಕೈಬಿಟ್ಟರೆ ಅವರು ತಮ್ಮ ತಕ್ಷಣದ ಅವಶ್ಯಕತೆಗಳಿಗಾಗಿ ಸಂಘಟನೆಗಳನ್ನು ಸಂಘಟನೆಯ ನಾಯಕರುಗಳನ್ನು ಬಳಸಿ ಕೈಬಿಡುತ್ತಾರೆ. ಹೋರಾಟಕ್ಕೆ ಒಬ್ಬರು, ಓಟು ಮಾರಾಟಕ್ಕೆ ಮತ್ತೊಬ್ಬರು ಎಂಬ ನೀತಿ ಅನುಸರಿಸುತ್ತಾರೆ.

ಇಂದು ಫ್ಯಾಸಿಸ್ಟ ಪಕ್ಷವಾದ ಬಿ.ಜೆ.ಪಿ. ಅಧಿಕಾರದಿಂದ ದೂರವಿದೆ. ಐದು ವರ್ಷಗಳ ಒಂದು ಮುದ್ದತ್ತು ಜನಪರ ಚಳುವಳಿಗಾರರಿಗೆ ಸಿಕ್ಕಿದೆ. ಖಂಡಿತ ಕಾಂಗ್ರೆಸ್ ತನ್ನ ಆರ್ಥಿಕ ನೀತಿಗಳಿಂದಾಗಿಯೇ ಜನವಿರೋಧಿಯಾಗುತ್ತದೆ. ಸಿದ್ದರಾಮಯ್ಯ ವೈಯಕ್ತಿಕವಾಗಿ ಏನೇ ಇದ್ದರೂ ಅವರು ನಡೆಸುತ್ತಿರುವುದು ಕಾಂಗ್ರೆಸ್ ಎಂಬ ಬಸ್‌ನ್ನು. ಅವರು ಚಾಲಕ ಮಾತ್ರ. ಚಾಲಕ ಮಾಲಿಕ ಹೇಳಿದ ಮಾರ್ಗದಲ್ಲಿ ಬಸ್ ಓಡಿಸಬೇಕಾಗುತ್ತದೆ. ಬಿ.ಜೆ.ಪಿ. ಸರಕಾರದಲ್ಲಿ ಮೂಲಭೂತ ಸಮಸ್ಯೆಗಳಿಗಿಂತ, ದತ್ತಪೀಠ ವಿವಾದ, ಗೋಹತ್ಯಾ ನಿಷೇಧ, ಶಿಕ್ಷಣದ ಕೇಸರೀಕರಣ, ನೈತಿಕ ಪೊಲೀಸ್‌ಗಿರಿ, ಅಲ್ಪಸಂಖ್ಯಾತರ ಮೇಲಿನ ದಾಳಿ, ಚರ್ಚ್ ಮೇಲಿನ ದಾಳಿ ಇಂಥ ವಿಷಯಗಳ ಕುರಿತ ಪ್ರತಿಕ್ರಿಯೆ, ಪ್ರತಿಭಟನೆಗೆ ಜನಪರ, ಪ್ರಗತಿಪರ ಸಂಘಟನೆಗಳು ಹೆಚ್ಚಿನ ಸಮಯ ಕಳೆಯಬೇಕಾಯಿತು. ಈಗಿನ ಕಾಂಗ್ರೆಸ್ ಸರಕಾರದಲ್ಲಿ ಅಂಥ ಪರಿಸ್ಥಿತಿ ಬರಲಾರದು. ಆದರೆ ರಾಜ್ಯದ ಕೃಷಿ , ಕಾರ್ಮಿಕ, ಕೂಲಿಕಾರರ ಸಮಸ್ಯೆಗಳು, ಕುಡಿವ ನೀರಿನ ಬವಣೆ, ಆರೋಗ್ಯ ಸಮಸ್ಯೆ, ನಿರುದ್ಯೋಗ, ಶಿಕ್ಷಣ, ಮಹಿಳೆ - ಹೆಣ್ಣು ಮಕ್ಕಳ ಮೇಲಿನ ಅತ್ಯಾಚಾರ, ದಲಿತರ, ಹಿಂದುಳಿದವರ, ಅಲ್ಪಸಂಖ್ಯಾತರ ಸಮಸ್ಯೆಗಳು ಇಂಥ ಹಲವಾರು ಮೂಲಭೂತ ವಿಷಯಗಳ ಕುರಿತು ಜನಾಂದೋಲನ ನಡೆಸಲು ಅವಕಾಶವಿದೆ. ಸದ್ಯದ ಪರಿಸ್ಥಿತಿಯಲ್ಲಿ ಯಾರು ಏನೇ ಬೆನ್ನು ತಟ್ಟಿಕೊಂಡರೂ ಕಮ್ಯುನಿಸ್ಟರು, ದಲಿತರು, ರೈತರು ಏಕಾಂಗಿಯಾಗಿ ಈ ಪ್ರಭುತ್ವವನ್ನು, ಪ್ರಭುತ್ವಗಳ ಜನವಿರೋಧಿ ನೀತಿಗಳನ್ನು ಎದುರಿಸುವ ಶಕ್ತಿ ಪಡೆದಿಲ್ಲ, ಅಥವಾ ಗಂಭೀರ ಸಮಸ್ಯೆಗಳುಂಟಾದಾಗ ಮಧ್ಯಪ್ರವೇಶ ಮಾಡುವ ಶಕ್ತಿ ಪಡೆದಿಲ್ಲ ಎಂಬ ವಾಸ್ತವವನ್ನು ಅರ್ಥಮಾಡಿಕೊಳ್ಳಬೇಕು. ಎಲ್ಲ ಜನಪರ, ಪ್ರಗತಿಪರ ಸಂಘಟನೆಗಳೂ ಸೇರಿ ಮೊದಲು ಐಕ್ಯ ಹೋರಾಟಗಳನ್ನು ನಡೆಸಬೇಕು. ಈ ಹೋರಾಟಗಳು ಬರೀ ಸಂಖ್ಯಾ ಪ್ರದರ್ಶನದ, ಸ್ವಯಂ ಪ್ರತಿಷ್ಠೆಯ ಕಾರ್ಯಕ್ರಮಗಳಾಗದೆ, ಪ್ರಭುತ್ವವನ್ನು ತಲ್ಲಣಗೊಳಿಸುವ ಮಾದರಿಯಲ್ಲಿರಬೇಕು. ಹೋರಾಟಗಳನ್ನು ನಡೆಸುತ್ತಲೇ ಹೋರಾಟದಲ್ಲಿ ಪಾಲ್ಗೊಂಡ ಜನತೆಯ ಚಿಂತನೆಯಲ್ಲಿ ಗುಣಾತ್ಮಕ ಬದಲಾವಣೆಯನ್ನೂ, ರಾಜಕೀಯ ಪ್ರಜ್ಞೆಯನ್ನೂ ಬಿತ್ತುವ ಕೆಲಸವಾಗಬೇಕು. ಕನಿಷ್ಠ ಈ ಐದು ವರ್ಷಗಳಲ್ಲಿ ಚಳುವಳಿಗಾರರನ್ನು ರಾಜಕೀಯ ಕ್ಷೇತ್ರದಲ್ಲಿ ಗಂಭೀರವಾಗಿ ಪರಿಗಣಿಸುವ ವಾತಾವರಣ ನಿರ್ಮಾಣವಾಗಬೇಕು. ಪ್ರಗತಿಪರರ ನೀತಿ ಪರ್ಯಾಯ ಮೂರ್ತರೂಪ ಪಡೆಯಬೇಕು. ಅಂದಾಗ ಮಾತ್ರ ಅಂಚಿನಲ್ಲಿರುವ, ನಿಷ್ಪಕ್ಷಪಾತ ಧೋರಣೆಯ ಜನಸಮೂಹ ಇಂಥ ಪರ್ಯಾಯವನ್ನು ಗಂಭೀರವಾಗಿ ಪರಿಗಣಿಸುತ್ತದೆ. ಇಲ್ಲವಾದರೆ ಕಡುಭ್ರಷ್ಟನ ಮುಂದೆ ಭ್ರಷ್ಟ, ಸಂಭಾವಿತನಂತೆ ಗೋಚರಿಸುತ್ತಾನೆ. ಕೋಮುವಾದಿಗಳ ಮುಂದೆ ಭ್ರಷ್ಟಾಚಾರಿಗಳು ಸಹನೀಯವಾಗುತ್ತಾರೆ. ಈ ಸಲದ ವಿಧಾನಸಭಾ ಚುನಾವಣೆಯಲ್ಲಿ ಈ ನಾಡಿನ ಕೆಲವು ಸಾಹಿತಿಗಳು, ಜ್ಞಾನಪೀಠಸ್ಥರು ಬಿ.ಜೆ.ಪಿ.ಯನ್ನು ಸೋಲಿಸಲು ಕಾಂಗ್ರೆಸ್‌ಗೆ ಬಹಿರಂಗವಾಗಿ ಬೆಂಬಲಿಸಿದರು. ಅವರು ಚಳುವಳಿಯ ಹಿನ್ನೆಲೆಯ ಅಭ್ಯರ್ಥಿಗಳನ್ನು ಬೆಂಬಲಿಸಲಿಲ್ಲ. ಕಾರಣ ಅವರಿಗೆ ಬಿ.ಜೆ.ಪಿ.ಯನ್ನು ತಡೆಯಲು ಕಾಂಗ್ರೆಸ್‌ಗೆ ಮಾತ್ರ ಸಾಧ್ಯ ಎಂಬ ನಂಬಿಕೆ ಇತ್ತು. ತುರ್ತು ಪರಿಸ್ಥಿತಿಯಲ್ಲಿ ಕಾಂಗ್ರೆಸ್ ವಿರುದ್ಧ, ಜನಸಂಘವನ್ನೂ ಒಳಗೊಂಡಿದ್ದ ಜನತಾಪಕ್ಷದ ಜೊತೆಗಿದ್ದವರು ಇಂದು ಅದೇ ಕಾಂಗ್ರೆಸ್ ಪರವಾಗಿದ್ದಾರೆ. ಹಾಗಂತ ಅವರು ಕೇಂದ್ರದ ಕಾಂಗ್ರೆಸ್‌ನ ಭ್ರಷ್ಟಾಚಾರವನ್ನೇನೂ ಬೆಂಬಲಿಸಿಲ್ಲ (ಕೆಲವರದು ಸಮಯಸಾಧಕ, ದೂರದೃಷ್ಟಿ ಇರಬಹುದು). ಇಂಥ ಸಂದರ್ಭದಲ್ಲಿ ಚಳುವಳಿಗಾರರು ಮೂಲಭೂತ ಸಮಸ್ಯೆಗಳನ್ನೆತ್ತಿ ಐಕ್ಯ ಹೋರಾಟ ನಡೆಸಿ ನೀತಿ ಪರ್ಯಾಯದ, ಜನಪರ ರಾಜಕಾರಣವನ್ನು ಬಲಪಡಿಸಬೇಕು. ಅದಕ್ಕೆ ಸಾಕಷ್ಟು ಸಮಯವಿದೆ, ಅವಕಾಶವಿದೆ.

ಸಿದ್ದನಗೌಡ ಪಾಟೀಲ

## ಸರಕಾರದಿಂದ ಈ ತೇಪೆ ಕೆಲಸ ಇನ್ನೆಷ್ಟು ದಿನ !

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಅರವತ್ತೈದು ವರ್ಷವಾಗಿದೆ. ಅಂದಿನಿಂದ ಇಂದಿನವರೆಗೆ ಕೇಂದ್ರ ಮತ್ತು ರಾಜ್ಯಗಳಲ್ಲಿ ಆಗಿರುವ ಹಗರಣಗಳು, ಭ್ರಷ್ಟಾಚಾರ ಪ್ರಕರಣಗಳು ಸಾವಿರಾರು. ಇವೆಲ್ಲವುಗಳ ಕುರಿತು ಸರಕಾರ ನೇಮಿಸಿದ ಆಯೋಗಗಳು, ಸಂವಿಧಾನ ರೀತ್ಯಾ ಸ್ಥಾಪಿತವಾಗಿರುವ ತನಿಖಾ ಸಮಿತಿಗಳು ಸಲ್ಲಿಸಿರುವ ವರದಿಗಳು ಎಲ್ಲ ಕಪಾಟುಗಳನ್ನು ಸೇರಿ ಗೆದ್ದಲು ಹಿಡಿದು ಕೂತಿವೆ. ಅಲ್ಲೊಂದು ಇಲ್ಲೊಂದು ಪ್ರಕರಣಗಳಲ್ಲಿ ಶಿಕ್ಷೆಯೂ ಆಗಿದೆ. ಇವೆಲ್ಲ ಜನರ ಕಣ್ಣಿಗೆ ಮಣ್ಣೆರಚುವ, ಮರೆಮಾಚುವ, ಸತ್ಯವನ್ನು ಮುಚ್ಚಿಹಾಕಿ ಗೋಡೆ ಸಾರಿಸುವ ಪ್ರಯತ್ನಗಳು ಎನ್ನುವುದು ಅಧಿಕಾರದಲ್ಲಿರುವ ಸರಕಾರಕ್ಕೂ ಗೊತ್ತು, ಜನರಿಗೂ ಗೊತ್ತು. ಪ್ರಕರಣಗಳಲ್ಲಿ ಪ್ರಮುಖ ರಾಜಕಾರಣಿಗಳು ಸಿಕ್ಕಿಕೊಂಡಿದ್ದರಂತೂ ಮುಗಿದೇ ಹೋಯಿತು. ಹತ್ತಾರು ವರ್ಷಗಳು ಕಳೆದರೂ ಅದು ಇತ್ಯರ್ಥವಾಗುವುದೇ ಇಲ್ಲ. ಉದಾಹರಣೆಗೆ ಪ್ರಧಾನಿ ಇಂದಿರಾ ಗಾಂಧಿ ಕೊಲೆಯಾದ ನಂತರ ಜರುಗಿದ ಸಿಖ್ ಸಮುದಾಯದ ಹತ್ಯೆ ಪ್ರಕರಣ, ಬಾಬ್ರಿ ಮಸೀದಿ ಧ್ವಂಸದ ದುಷ್ಕೃತ್ಯ, ಗುಜರಾತ್‌ನ ನರಮೇಧ ಇವೆಲ್ಲ ಕೊನೆಮುಟ್ಟುವುದು ಯಾವಾಗಲೋ ! ತನಿಖೆ, ವಿಚಾರಣೆ, ಕಾನೂನಿನ ಅಡಚಣೆಗಳು, ಹೀಗೆ ಏನೇನೋ ಅಡ್ಡಿಗಳು ಎಳೆದಾಡುತ್ತಲೇ ಹೋಗುತ್ತವೆ. ಇದಕ್ಕೆ ಸರಕಾರ, ನ್ಯಾಯಾಂಗ ವ್ಯವಸ್ಥೆ ಎರಡೂ ಕಾರಣ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಈ ಮಂದಗೆರೆ, ಆಡಳಿತಗಾರರ ಅಸಡ್ಡೆ ಎಲ್ಲವೂ ಜನಸಾಮಾನ್ಯರಲ್ಲಿ ಒಂದು ರೀತಿಯ ಸಿನಿಕತೆಯನ್ನು ತಂದಿದೆ. ಒಂದು ಪ್ರಕರಣ ಸಂಭವಿಸಿತೆಂದರೆ ಅದರ ಹಿಂದೆಯೇ ಒಂದು ವಿಚಾರಣಾ ಆಯೋಗ, ತನಿಖೆ ಎಲ್ಲ ಬರುತ್ತದೆ. ಮುಗಿಯುವ ಹೊತ್ತಿಗೆ ಪ್ರಕರಣವೇ ಮರೆತುಹೋಗಿರುತ್ತದೆ.

ಕೇಂದ್ರ ತನಿಖಾ ತಂಡ (ಸಿಬಿಐ-ಸೆಂಟ್ರಲ್ ಬ್ಯೂರೋ ಆಫ್ ಇನ್ವೆಸ್ಟಿಗೇಶನ್) ಸಂವಿಧಾನದಡಿಯಲ್ಲಿ ಸ್ಥಾಪಿತವಾಗಿರುವ


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಸ್ವತಂತ್ರ ಸಂಸ್ಥೆ ಎಂಬ ಪರಿಕಲ್ಪನೆ ಇತ್ತು. ಕೇಂದ್ರ ಸರಕಾರದಿಂದ ನೇಮಕವಾಗಿರುವ ಈ ಸಂಸ್ಥೆ ನಡೆಸುವ ತನಿಖೆ ಎಲ್ಲವೂ ನಿಷ್ಪಕ್ಷಪಾತವಾಗಿರುತ್ತದೆ ಎಂಬ ವಿಶ್ವಾಸವಿತ್ತು. ಸಂವಿಧಾನಬದ್ಧವಾಗಿ ಸ್ಥಾಪಿತಗೊಂಡಿರುವ ಇತರ ಸಂಸ್ಥೆಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವಂತೆಯೇ ಸರಕಾರ ಸಿಬಿಐ ಅನ್ನೂ ತನ್ನ ಅಧೀನಕ್ಕೊಳಗಾಗಿಸಿಕೊಳ್ಳಲು ನಡೆಸಿದ ಪ್ರಯತ್ನ ಈಚೆಗೆ ಬೆಳಕಿಗೆ ಬಂದಿದೆ. ಸರಕಾರ ಸಿಬಿಐ ಅನ್ನು ತನ್ನ ಪ್ರಯೋಜನಕ್ಕಾಗಿ ಇದುವರೆಗೆ ಬಳಸಿ ಕೊಂಡಿಲ್ಲ ಎಂದೇನಲ್ಲ. ಆದರೆ ಅದು ಮಗುಮ್ಮಾಗಿ ನಡೆಯುತ್ತಿತ್ತೇ ಹೊರತು ಬೆಳಕಿಗೆ ಬರುತ್ತಿರಲಿಲ್ಲ. ಸರಕಾರ ವಿರೋಧಿಗಳನ್ನು ಮಟ್ಟಹಾಕಲು ಸಿಬಿಐ ಅನ್ನು ಬಳಸಿಕೊಂಡಿರುವ ಪ್ರಕರಣಗಳು ಬೇಕಾದಷ್ಟಿವೆ. ಇದಲ್ಲದೆ ಸರಕಾರ ಸಂವಿಧಾನಬದ್ಧವಾಗಿ ಸ್ಥಾಪಿತವಾಗಿರುವ ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಮೊದಲಿನಿಂದಲೂ ಕ್ರಮಬದ್ಧವಾಗಿ ದುರ್ಬಲಗೊಳಿಸುತ್ತ ಬಂದಿದೆ. ಇದಕ್ಕೆ ನಿದರ್ಶನಗಳು ಬೇಕಾದಷ್ಟಿವೆ. ಆದರೆ ಅವು ಇಲ್ಲಿ ಅಪ್ರಸ್ತುತ.

ಇತ್ತೀಚೆಗೆ, ಸಂಬಂಧಪಟ್ಟ ಸಚಿವರ ಅಚಾತುರ್ಯದಿಂದಲೋ ಇಲ್ಲ ಸಿಬಿಐ ಅಧಿಕಾರಿಗಳ ಅಲಕ್ಷ್ಯದಿಂದಲೋ ಅವಾಂತರದಿಂದಲೋ ಅಕ್ರಮ ನಡವಳಿಕೆ ದೇಶದ ಸರ್ವೋಚ್ಚ ನ್ಯಾಯಾಲಯ (ಸುಪ್ರೀಮ್ ಕೋರ್ಟ್)ದ ಗಮನಕ್ಕೆ ಬಂದಿತು. ಅದೂ ಹಲವು ಸಹಸ್ರ ಕೋಟಿ ಕಲ್ಲಿದ್ದಲ ಗಣಿಗಾರಿಕೆಗೆ ಸಂಬಂಧಪಟ್ಟ ಹಗರಣದಲ್ಲಿ. ಈ ಪ್ರಕರಣದ ತನಿಖೆ ನಡೆಸುತ್ತಿದ್ದ ಸಿಬಿಐ ಅಧಿಕಾರಿ ವರದಿಯನ್ನು ಸಚಿವರಿಗೆ ತೋರಿಸಿ ತಿದ್ದಿದ ವಿಷಯಕ್ಕೆ ಸಂಬಂಧಿಸಿದ್ದಾಗಿತ್ತು. ಈ ಕಲ್ಲಿದ್ದಲ ಗಣಿಗಾರಿಕೆ ಪರವಾನಗಿ ವಿತರಣೆಯಲ್ಲಿ ನಡೆದಿರುವ ಭ್ರಷ್ಟಾಚಾರ ಬೆಳಕಿಗೆ ಬಂದು ಹಲವು ತಿಂಗಳುಗಳೇ ಕಳೆದುಹೋಗಿವೆ. ಸರಕಾರ ತನಿಖೆಯನ್ನು ಸಿಬಿಐಗೆ ಒಪ್ಪಿಸಿ ಹಾಯಾಗಿ ಕುಳಿತಿತ್ತು. ಸಿಬಿಐ ಅಧಿಕಾರಿ ವರದಿಯನ್ನು ಸಚಿವರಿಗೆ ತೋರಿಸಿ ತಿದ್ದಿದ್ದನ್ನು ಸುಪ್ರೀಮ್ ಕೋರ್ಟು ತರಾಟೆಗೆ ತೆಗೆದುಕೊಂಡಿದೆ. ಈಗಾಗಲೇ ಸಚಿವರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದ್ದಾರೆ. ನ್ಯಾಯಾಲಯದ ಛೀಮಾರಿಯಿಂದ ಮನಮೋಹನ ಸಿಂಗ್ ಯುಪಿಎ ಸರಕಾರ ತತ್ತರಿಸಿದೆ. ಈಗ ಸುಪ್ರೀಮ್ ಕೋರ್ಟ್ ಹಗರಣದ ಕುರಿತು ತನಿಖೆಗೆ ಅನಿರ್ಬಂಧಿತ ಅವಕಾಶ ನೀಡಿದೆ. ಈ ಪ್ರಕರಣ ಸರ್ವೋಚ್ಚ ನ್ಯಾಯಾಲಯದ ಗಮನಕ್ಕೆ ಬಾರದೇ ಹೋಗಿದ್ದಲ್ಲಿ, ಸಿಬಿಐ ಕಾರ್ಯನಿರ್ವಹಣೆಯಲ್ಲಿ ಸರಕಾರದ ಹಸ್ತಕ್ಷೇಪ ಬೆಳಕಿಗೆ ಬರುತ್ತಲೇ ಇರಲಿಲ್ಲ. ಇನ್ನಾದರೂ ಕಲ್ಲಿದ್ದಲ ಹಗರಣದ ತನಿಖೆ ಸ್ವತಂತ್ರವಾಗಿ ನಡೆಯಲೆಂದು ಆಶಿಸೋಣ.

ಒಂದಲ್ಲ ಒಂದು ಹಗರಣ ಪಾರ್ಲಿಯಮೆಂಟ್ ಸಭೆ ಸೇರಿದಾಗಲೇ ಬೆಳಕಿಗೆ ಬರುತ್ತಿದೆ. ಈಗ ಎರಡು ವರ್ಷದಿಂದ ಪ್ರತಿಸಲ ಪಾರ್ಲಿಯಮೆಂಟ್ ಸಮಾವೇಶಗೊಂಡಾಗಲೂ ಏನಾದರೊಂದು ಕಾರಣದಿಂದ ಕಲಾಪಗಳು ಸ್ಥಗಿತಗೊಳ್ಳುತ್ತ ಬಂದಿವೆ. ಇದು ಒಂದು ರೀತಿ ಕ್ರಿಕೆಟ್‌ನ ಮ್ಯಾಚ್ ಫಿಕ್ಸಿಂಗ್‌ನಂತೆ ನಡೆಯುತ್ತಲೇ ಇದೆ. ಮುಂದುವರಿದ ಈ ಸಲದ ಬಜೆಟ್ ಅಧಿವೇಶನವೂ ಹಾಗೆಯೇ ಆಗಿದೆ. ಇಂಥ ಅಡ್ಡಿಗಳಿಂದಾಗಿ ಜನರಿಗೆ ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿಯೇ ವಿಶ್ವಾಸ ಕಳೆದುಹೋಗುತ್ತಿದೆ. ಈ ಹಿಂದೆ 'ಹೊಸತು' ಪಾರ್ಲಿಮೆಂಟ್ ಕಲಾಪಗಳಿಗೆ ಅಡಚಣೆ ಮಾಡುವ ಕುರಿತು ಸುದೀರ್ಘವಾದ ಸಂಪಾದಕೀಯ ಬರೆದಿದ್ದುದನ್ನು ಇಲ್ಲಿ ನೆನಪಿಸಬಹುದು. ಕಲಾಪಗಳಿಗೆ ಅಡ್ಡಿಯೊಡ್ಡುವುದು ನಮ್ಮ ಪಾರ್ಲಿಯಮೆಂಟರಿ ವ್ಯವಸ್ಥೆಯ ಭಾಗವಾಗಿದೆಯೋ ಎನ್ನುವಷ್ಟುಮಟ್ಟಿಗೆ ಪ್ರತಿಸಲ ನಡೆಯುತ್ತಿದೆ. ಇದಕ್ಕೆ ಸರಕಾರ ಎಷ್ಟು ಹೊಣೆಯೋ ಪ್ರತಿಪಕ್ಷಗಳು ಅಷ್ಟೇ ಹೊಣೆಯಾಗಿವೆ. ಭ್ರಷ್ಟಾಚಾರದ ಸುಳಿಯಲ್ಲಿ ಮುಳುಗಿರುವ ರೈಲ್ವೆ ಸಚಿವರ ತಲೆದಂಡ ಆಗಿದೆ. ಇನ್ನಾದರೂ ಪಾರ್ಲಿಮೆಂಟ್ ಕಲಾಪಗಳು ಸುಗಮವಾಗಿ ನಡೆಯಲಿ.

ಯುಪಿಎ-೨ರ ನೇತೃತ್ವ ವಹಿಸಿರುವ ಕಾಂಗ್ರೆಸ್ಸಿನ ಮನಮೋಹನ ಸಿಂಗ್ ಸರಕಾರ ಇನ್ನು ಕೆಲವೇ ತಿಂಗಳುಗಳಲ್ಲಿ ಚುನಾವಣೆ ಎದುರಿಸಲಿದೆ. ಐದು ವರ್ಷಗಳಲ್ಲಿ ಆಗಿರುವ ಹಗರಣ ಗಳಿಗೇನೂ ಕಮ್ಮಿ ಇಲ್ಲ. ಅವನ್ನು ಮುಚ್ಚಿಹಾಕುವ ಪ್ರಯತ್ನವನ್ನು ಸರಕಾರ ಕೈಬಿಡಲಿ. ತೇಪೆ ಹಾಕುವ ಕೆಲಸ ಇನ್ನು ಸಾಕು. ಜನ ಎಚ್ಚೆತ್ತಿದ್ದಾರೆ.

---

*ಈ ತಿಂಗಳು (೩ನೇ ಪುಟದಿಂದ)*

ದುರಾಡಳಿತವನ್ನು ಒಪ್ಪಿಕೊಳ್ಳುವ ಬದಲು ಯಡಿಯೂರಪ್ಪ ಮತ್ತು ಶ್ರೀರಾಮುಲು ಅವರನ್ನು ಸೋಲಿಗೆ ದೂರಿದ್ದಾರೆ. ಲೆಕ್ಕಾಚಾರ ಹಾಕಿ ೨೩ ಸ್ಥಾನಗಳಲ್ಲಿ ಸೋಲಿಗೆ ಅವರಿಬ್ಬರೇ ಹೊಣೆ ಎಂದಿದ್ದಾರೆ. ಈಗಿದೆಲ್ಲ ಹಳೆಯದಾಯಿತು. ಲೋಕ ಸಭಾ ಚುನಾವಣೆಗಳ ಮೇಲೇ ರಾಜಕಾರಣಿಗಳೆಲ್ಲರ ಕಣ್ಣು. ಅದನ್ನಿಟ್ಟುಕೊಂಡೇ ಭಾಜಪ ಹೈಕಮಾಂಡ್‌ನಲ್ಲಿ ಪರಸ್ಪರ ದೂರಾಟ ನಡೆದಿದೆ. ಪ್ರಧಾನಿ ಪಟ್ಟದ ಆಸೆ ಇನ್ನೂ ಇರಿಸಿ ಕೊಂಡಿರುವ ಅದ್ವಾನಿ ಯಡಿಯೂರಪ್ಪ ಪ್ರಕರಣದಲ್ಲಿ ಮೊದಲೇ ಕ್ರಮ ಕೈಗೊಳ್ಳದೇ ಹೋದದ್ದೇ ಅನಾಹುತಕ್ಕೆ ಕಾರಣ ಎಂದಿದ್ದಾರೆ. ಇದಕ್ಕೆ ವಿರುದ್ಧವಾಗಿ ಅರುಣ್ ಜೆಟ್ಲಿ ಮತ್ತು ನರೇಂದ್ರ ಮೋದಿಯದು ಬೇರೆಯೇ ವಾದ. ಯಡಿಯೂರಪ್ಪ ಹೋದದ್ದರಿಂದ ಆಗಿರುವ ನಷ್ಟವನ್ನು ಕಡೆಗಣಿಸಿದ್ದಾರೆ. ಹೈಕಮಾಂಡ್ ತೆಗೆದುಕೊಂಡ ಕೆಲವು ಕಠಿಣ ನಿರ್ಧಾರಗಳು ಪಾರ್ಟಿಯ ಕಾರ್ಯಕರ್ತರಲ್ಲಿ ಹತಾಶೆಯನ್ನು ತಂದಿದೆ ಎಂದಿದ್ದಾರೆ. ಲೋಕಸಭೆಯ ವಿರೋಧ ಪಕ್ಷದ ನಾಯಕಿ ಸುಷ್ಮಾ ಸ್ವರಾಜ್ ಮಾತ್ರ ತೆಪ್ಪಗಿದ್ದಾರೆ. ಬಳ್ಳಾರಿ ಸೋದರರ ಫಜೀತಿಯಿಂದ ಆಕೆಗಾಗಿರುವ ನಷ್ಟ ಅಪಾರ. ಅದ್ವಾನಿ ಹೇಳಿಕೆಯಲ್ಲಿ ಮಾಜಿ ಅಧ್ಯಕ್ಷ ಗಡ್ಕರಿ, ಹಾಲಿ ಅಧ್ಯಕ್ಷ ರಾಜನಾಥಸಿಂಗ್ ಅನ್ನೂ ಪರೋಕ್ಷವಾಗಿ ಕುಟುಕಿದ್ದಾರೆ. ಅಂತೂ ಭಾಜಪ ನಾಯಕತ್ವದಲ್ಲಿರುವ ಬಿರುಕನ್ನು ಕರ್ನಾಟಕದ ಚುನಾವಣಾ ಫಲಿತಾಂಶ ಇನ್ನಷ್ಟು ಹೆಚ್ಚಿಸಿದೆ. ಕರ್ನಾಟಕದಲ್ಲಂತೂ ಮಾಜಿ ಅಧ್ಯಕ್ಷ, ಮಾಜಿ ಉಪ ಮುಖ್ಯಮಂತ್ರಿ ಈಶ್ವರಪ್ಪನವರ ಬಾಯಿ ಮುಚ್ಚಿದೆ ಭದ್ರವಾಗಿ. ಸದ್ಯಕ್ಕಂತೂ ಭಾಜಪ ಮೇಲೇಳುವಂತಿಲ್ಲ. ಇದುವರೆಗೆ ಉಂಡದ್ದೇ ಲಾಭ.

✶ ✶ ✶

ಪ್ರಧಾನಿ ಹುದ್ದೆ ಅಲಂಕರಿಸಲು ಸವಾರಿ ಹೊರಟಿರುವ ಸರದಾರ ನರೇಂದ್ರ ಮೋದಿಗೆ ಬೆನ್ನು ಹತ್ತಿರುವ ೨೦೦೨ರ ನರಹತ್ಯೆಯ ಬೇತಾಳವನ್ನು ಕೊಡವಿಕೊಳ್ಳಲಾಗಿಲ್ಲ. ತಮ್ಮ ಹಾವಭಾವಗಳಿಂದ ಅಬ್ಬರದ ಮಾತುಗಳಿಂದ ಜನರನ್ನು ಆಕರ್ಷಿಸಿದರೂ ಈತನಿಗೆ ಹತ್ತಿರುವ ಕಳಂಕ ಮಾತ್ರ ಆಗಾಗ ತಪ್ಪದೇ ತಲೆ ಎತ್ತುತ್ತಿರುತ್ತದೆ. ಸಂಘಪರಿವಾರದ ಮಾತೃ ಸಂಸ್ಥೆ ಆರೆಸ್ಸೆಸ್‌ಗೆ ಈತ ಒಂದು ಬಗೆಯಲ್ಲಿ ಲಯಬಿಲಿಟಿ. ಸರ್ವಾಧಿಕಾರಿ ಹಿಟ್ಲರ್‌ನನ್ನು ಆರಾಧಿಸುವ ಆರೆಸ್ಸೆಸ್‌ಗೆ ಮೋದಿ ಸರ್ವಾಧಿಕಾರಿ ಧೋರಣೆ ಅಪಥ್ಯ. ಏಕೆಂದರೆ ಮೋದಿ ಒಂದುತರಹ ಕುಪ್ಪಿಯೊಳಗಿಂದ ಹೊರಬಂದ 'ಜೀನಿ'ಯಂತೆ. ಹಿಡಿತಕ್ಕೆ ಸಿಗದ ವ್ಯಕ್ತಿ.

ಈಗ ಈ ನರೇಂದ್ರ ಮೋದಿ ಇನ್ನೊಂದು ಸಿಕ್ಕಲಿನಲ್ಲಿ ಇದ್ದಾನೆ. ಮೋದಿ ಸರಕಾರದಲ್ಲಿ ಸಚಿವೆಯಾಗಿದ್ದ ಮಾಯಾಬೆನ್ ಕೊಡ್ನಾನಿ ಮತ್ತು ಬಜರಂಗ ದಳದ ನಾಯಕ ಬಾಬು ಬಜ್ರಂಗಿ ಇಬ್ಬರೂ ೨೦೦೨ರ ಹತ್ಯಾಕಾಂಡದಲ್ಲಿ ೯೧ ಜನರನ್ನು ಕೊಲೆಗೆ ಕುಮ್ಮಕ್ಕು ಕೊಟ್ಟ ಆಪಾದನೆಗೆ ಗುರಿಯಾಗಿ ಕಾರಾಗೃಹದಲ್ಲಿ ಶಿಕ್ಷೆ ಅನುಭವಿಸುತ್ತಿದ್ದಾರೆ. ಈ ಪ್ರಕರಣವನ್ನು ಕುರಿತು ತನಿಖೆ ನಡೆಸಿದ ಗುಜರಾತ್‌ನ ವಿಶೇಷ ನ್ಯಾಯಾಲಯ ಈ ಇಬ್ಬರಿಗೂ ಮರಣದಂಡನೆ ವಿಧಿಸಬೇಕು ಎನ್ನುವುದು ಸ್ಪೆಷಲ್ ಪ್ರಾಸಿಕ್ಯೂಟರ್ ಅಭಿಮತ. ಮೋದಿ ಸರಕಾರ ಕೂಡ ಇದುವರೆಗೆ ಅದರ ಪರವಾಗಿಯೇ ಇತ್ತು. ಆದರೆ ಈಗ ಸಂಘಪರಿವಾರದ ಒತ್ತಡದಿಂದ ಮೋದಿ ಸರಕಾರ ಪಲ್ಟಿ ಹೊಡೆಯಬೇಕಾಗಿ ಬಂದಿದೆ. ಸೆಶನ್ಸ್ ನ್ಯಾಯಾಲಯ ನೀಡಿರುವ ಶಿಕ್ಷೆಯ ವಿರುದ್ಧ ಹೈಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸಿ ಮರಣದಂಡನೆಗೆ ಒತ್ತಾಯಿಸ ಬೇಕೆಂಬುದು ಸರಕಾರಿ ಪ್ರಾಸಿಕ್ಯೂಟರ್ ಅಭಿಮತ. ಇದಕ್ಕೆ ಮೋದಿ ಸರಕಾರವೂ ಸಮ್ಮತಿಸಿತ್ತು. ಈಗ ತೀರ್ಮಾನ ತಡೆಹಿಡಿಯಲಾಗಿದೆ. ಕಾಣದ ಕೈ ಕೈವಾಡ ಹೇಗಿದೆ ನೋಡಿ.

✶ ✶ ✶

ಗಣಿಗಾರಿಕೆಯಲ್ಲಿ ತೋಡಿದಷ್ಟೂ ಹಣದ ಹೊರೆ ಹರಿಯುತ್ತವೆಂಬುದು ಎಷ್ಟು ನಿಜ. ಇದು ಗೊತ್ತಾದದ್ದು ಬಳ್ಳಾರಿ ಸೋದರರ ದಿಢೀರ್ ಶ್ರೀಮಂತಿಕೆಯಿಂದ. ಕೇಂದ್ರದಲ್ಲಿ ಕಲ್ಲಿದ್ದಲ ಗಣಿಧನಿಗಳಿಂದ. ಲಕ್ಷಾಂತರ ಕೋಟಿ ಸಂಪಾದನೆ. ಲೂಟಿ ಮಾಡಿದ ಹಣ. ಖರ್ಚು ಹೇಗೆ ಮಾಡುವುದು ? ಆಂಧ್ರಪ್ರದೇಶದ ಜೈಲಿನಲ್ಲಿರುವ ರೆಡ್ಡಿ ಸೋದರರು ಬಂಗಾರದ ಕುರ್ಚಿ ಮೇಲೆ ಕೂರುತ್ತಿದ್ದರೆಂದು ಅಂತೆ ಕಂತೆ. ಇದು ನಿಜವೋ ಸುಳ್ಳೋ ಗೊತ್ತಿಲ್ಲ. ಆದರೆ ಅವರ ಬಳಿ ನೂರಾರು ಸಾವಿರ ಕೋಟಿ ಹಣ ಇದೆ ಎನ್ನುವುದಂತೂ ನಿಜ. ಹೋಗಲಿ ಬಿಡಿ.

ಬಳ್ಳಾರಿ ಗಣಿ ದೊರೆಗಳ ಅಟ್ಟಹಾಸ ಪಾಳೆಯಗಾರಿ ಸಂಸ್ಕೃತಿಯ ರಾಜ ಮಹಾರಾಜರುಗಳ ಅಟ್ಟಹಾಸವನ್ನು ಮೀರಿಸುವಂಥದ್ದು. ಬಳ್ಳಾರಿಯ ಜೆಡಿಎಸ್ ಮುಖಂಡ ಗ್ರಾನೈಟ್ ದೊರೆ ಎನ್. ಸೂರ್ಯನಾರಾಯಣ ರೆಡ್ಡಿ ಪುತ್ರನ ವಿವಾಹ ಸದ್ಯದಲ್ಲೆ. ಬಂಗಾರದ ಲೇಪ, ಹರಳುಗಳಿಂದ ಅಲಂಕೃತವಾದ ಒಂದು ಲಗ್ನಪತ್ರಿಕೆಯ ಬೆಲೆ ೧೫ ಸಾವಿರ ರೂಪಾಯಿ. ಮುಂಬೈನಲ್ಲಿ ಇದರ ಮುದ್ರಣ. ಪತ್ರಿಕೆಯ ಜೊತೆಗೆ ಬೇರೆ ಲವಾಜಮೆ-ಡ್ರೈಫ್ರೂಟ್ಸ್, ಚಾಕಲೇಟ್, ವಗೈರೆ, ವಗೈರೆ. ಇದನ್ನು ಹಂಚಲು ಹೊರಟಿರುವ ರೆಡ್ಡಿ ದಂಪತಿಗಳಿಗೆ ನೆರವಾಗಲು ಒಬ್ಬ ಆಳು. ಇನ್ನೂ ಮದುವೆಗೆ ಆಗುವ ಖರ್ಚೆಷ್ಟೋ - ನೀವೇ ಊಹಿಸಿಕೊಳ್ಳಿ. ಅತಿ ಶ್ರೀಮಂತಿಕೆಯ ಅಸಹ್ಯಕರ ಅಟ್ಟಹಾಸಕ್ಕೆ ಇದೊಂದು ನಿದರ್ಶನ. ಭಾರತ ಬಡರಾಷ್ಟ್ರವೆ ? ಖಂಡಿತ ಅಲ್ಲ. ಜನ ಬಡವರಿದ್ದಾರೆ ಅಷ್ಟೆ!

✶ ✶ ✶

ಇದೇ ಏಪ್ರಿಲ್ ೨೮ರಂದು ಗತಿಸಿದ ಡಾ|| ಸಂಜಯ ಕುಮಾರ್ ಬಿಸ್ವಾಸ್ ಆರಂಭದಿಂದಲೂ 'ಹೊಸತು' ಪತ್ರಿಕೆ ಯೊಡನೆ ನಿಕಟ ಸಂಪರ್ಕ ಇರಿಸಿಕೊಂಡಿದ್ದರು. ಮೂರು ವರ್ಷಗಳ ಹಿಂದೆ ಪತ್ರಿಕೆಯ ವಾರ್ಷಿಕ ಸಂಚಿಕೆಯಲ್ಲಿ ಅವರ ಸಂದರ್ಶನ ಲೇಖನ ಪ್ರಕಟವಾಗಿತ್ತು. ಅನೇಕ ವಿಜ್ಞಾನ ಮತ್ತು ತಂತ್ರಜ್ಞಾನ ಸಂಬಂಧಿ ಲೇಖನಗಳು ಮತ್ತು ಸಂದರ್ಶನಗಳು ಅವರ ಸೂಚನೆ-ಸಹಕಾರಗಳಿಂದ ಸಾಧ್ಯವಾಗುತ್ತಿದ್ದವು. ಬೇರೆಯಂತೆಯೂ ಪತ್ರಿಕೆಗೆ ಅವರ ಬೆಂಬಲ ಸಾಕಷ್ಟಿತ್ತು. 'ಹೊಸತು' ಮತ್ತು ನವಕರ್ನಾಟಕ ಪ್ರಕಾಶನ ಆತ್ಮೀಯ ಸಂಜಯ್ ಅವರನ್ನು ಗೌರವದಿಂದ ನೆನೆಯುತ್ತವೆ. ಸಂಜಯ್ ಮತ್ತು ಜಿ. ರಾಮಕೃಷ್ಣ ಸಂಪಾದಿಸಿ ಕೊಟ್ಟ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರ ಕೆಲವು ಆಂಗ್ಲ ಲೇಖನಗಳನ್ನು ''ಮ್ಯೂಸಿಂಗ್ಸ್ ಇನ್ ಐಡಿಯಾಲಜಿ'' ಎಂಬ ಶೀರ್ಷಿಕೆಯಡಿ ನವಕರ್ನಾಟಕ ಪ್ರಕಾಶನ ಹೊರ ತಂದಿದೆ. ಅದೇ ಸಂಪಾದಕರು ದೇವಿಪ್ರಸಾದರ ಇನ್ನಷ್ಟು ಲೇಖನಗಳನ್ನು ''ಸಂ ಪ್ರಾಬ್ಲಮ್ಸ್ ಆಫ್ ಮಾರ್ಕ್ಸಿಸಂ'' ಎಂಬ ಶೀರ್ಷಿಕೆಯಡಿ ಸಂಕಲನ ಮಾಡಿದ್ದಾರೆ. ಅದನ್ನು ಮಾ-ಲೆ ಪ್ರಕಾಶನ ಹೊರತಂದಿದೆ. ಸಂಜಯ್ ವ್ಯಾಸಂಗ ಮಾಡಿದ್ದು ಖರಗ್‌ಪುರದ ಐ.ಐ.ಟಿ.ಯಲ್ಲಿ, ನಂತರ ಸ್ಕಾಟ್ಲೆಂಡಿನಲ್ಲಿ ಪಿಎಚ್.ಡಿ. ಪದವಿ ಪಡೆದು, ಬರ್ಮಿಂಗ್ ಹ್ಯಾಮ್‌ನಲ್ಲಿ ತಮ್ಮ ಸಂಶೋಧನೆ ಮುಂದುವರಿಸಿ, ಅಧ್ಯಾಪಕ ವೃತ್ತಿಗೆ ಪ್ರವೇಶಿಸಿದರು. ೧೯೭೦ರ ದಶಕದ ಆರಂಭದಲ್ಲಿ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗದಲ್ಲಿ ಅಧ್ಯಾಪಕ-ಸಂಶೋಧಕರಾಗಿ ಸೇರಿ ಕೊನೆಯವರೆಗೂ ಅಲ್ಲೇ ಕೆಲಸ ಮಾಡಿದರು. ಆ ವಿಭಾಗದ ಮುಖ್ಯಸ್ಥರಾಗಿಯೂ ಹಲವು ವರ್ಷಗಳ ಕಾಲ ಕೆಲಸ ಮಾಡಿದ ಸಂಜಯ್ ಅನೇಕ ವಿದ್ಯಾರ್ಥಿಗಳಿಗೆ ಪಿಎಚ್.ಡಿ. ಮಾರ್ಗದರ್ಶಕ ರಾಗಿದ್ದರು. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನಿಯತಕಾಲಿಕೆಗಳಲ್ಲಿ ತಮ್ಮ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿ ತಂತ್ರಜ್ಞಾನದ ಕ್ಷೇತ್ರದಲ್ಲಿ ಖ್ಯಾತಿ ಪಡೆದಿದ್ದರು. ವಿಶ್ವದ ಹಲವು ವಿಶ್ವವಿದ್ಯಾನಿಲಯಗಳಲ್ಲಿ ಬೋಧನೆ, ಸಂಶೋಧನೆ, ವಿಚಾರಗೋಷ್ಠಿ ಹೀಗೆ ವಿವಿಧ ರೀತಿಗಳಲ್ಲಿ ಪಾಲ್ಗೊಂಡು ಅಪಾರ ಕೀರ್ತಿ ಸಂಪಾದಿಸಿಕೊಂಡಿದ್ದರು. ಗತಿಸಿದ ಮೂರು ದಿನಗಳ ಮುಂಚೆಯಷ್ಟೇ ಅವರು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಒಂದು ಸಂಶೋಧನಾ ಮಹಾಪ್ರಬಂಧದ ಮಾಪನ ಮಾಡಿ ಉಪನ್ಯಾಸವೊಂದನ್ನು ನೀಡಿ ಹಿಂದಿರುಗಿದ್ದರು.

ಇಂತಹ ವ್ಯಕ್ತಿಯ ಪೂರ್ಣ ಪರಿಚಯ ಮಾಡಿ ಕೊಡುವುದು ಕಷ್ಟ. ಪ್ರಸ್ತುತ ಲೇಖಕ ಅವರನ್ನು ಮೊದಲು ಭೇಟಿಯಾದ್ದು ಕಲ್ಕತ್ತೆಯಲ್ಲಿ, ಆಗ ತಾನೆ ಆತ ಬೆಂಗಳೂರಿನ ವಿಜ್ಞಾನ ಸಂಸ್ಥೆಯಲ್ಲಿ ಹುದ್ದೆ ದೊರಕಿಸಿಕೊಂಡು ನಗರಕ್ಕೆ ತೆರಳಿ ನೆಲೆಸುವ ಸಿದ್ಧತೆಯಲ್ಲಿದ್ದ. ಬೆಂಗಳೂರಿನಲ್ಲಿ ಯಾರ ಸಂಪರ್ಕ ಉಪಯುಕ್ತವೆಂದು ಮೊದಲೇ ಕೇಳಿ ತಿಳಿದ ಸಂಜಯ್ ಇಲ್ಲಿಗೆ ಬಂದ ತರುವಾಯದಲ್ಲಿ ಪ್ರೊ|| ಎಂ. ಎ. ಸೇತುರಾವ್, ಡಾ|| ಎ. ಕೆ. ಎನ್. ರೆಡ್ಡಿ, ಡಾ|| ಎ. ಆರ್. ವಾಸುದೇವಮೂರ್ತಿ, ಡಾ|| ಸತೀಶ ಧಾವನ್, ಡಾ|| ರೊದ್ದಂ ನರಸಿಂಹ, ಡಾ|| ದೇವಿಪ್ರಸಾದ್ ಸೇನ್‌ಗುಪ್ತ, ಪ್ರೊ|| ಎಂ.ಆರ್.ಎನ್. ಮೂರ್ತಿ ಅವರನ್ನೆಲ್ಲಾ ಸಂಧಿಸಿ ಒಡನಾಟ ಆರಂಭಿಸಿದರು. ವೈಜ್ಞಾನಿಕ ಮನೋಭಾವಕ್ಕೆ ಮೀಸಲಾಗಿದ್ದ ಮಾಸಪತ್ರಿಕೆಯೊಂದನ್ನು ಪ್ರಕಟಿಸುವುದರಿಂದ ಮೊದಲ್ಗೊಂಡು ಸಂಜಯ್ ಹತ್ತಾರು ಕಾರ್ಯಕ್ರಮಗಳನ್ನು ರೂಪಿಸಿಕೊಂಡರು. ಯಾವುದೇ ಗೋಷ್ಠಿ, ಚಳುವಳಿ, ಉಪನ್ಯಾಸ, ಅಧ್ಯಯನ ಕೂಟ, ಸಭೆಗಳ ಸಂಯೋಜನೆ, ಇತ್ಯಾದಿಗಳಿರಲಿ, ಸಂಜಯ್ ಅದರಲ್ಲಿ ಭಾಗವಹಿಸಲು ಮತ್ತು ಸಾಮಾನ್ಯ ಕಾರ್ಯಕರ್ತನಂತೆ ಕೆಲಸ ಮಾಡಲು ಸಿದ್ಧರಿರುತ್ತಿದ್ದರು. ಬೆಂಗಳೂರಿನ ಅದೆಷ್ಟು ಮೆರವಣಿಗೆಗಳಲ್ಲಿ ಆತ ಪಾಲ್ಗೊಂಡಿದ್ದರೆಂಬುದನ್ನು ಲೆಕ್ಕ ಹಾಕಿದರೆ ಬಹುಶಃ ಆತನ ಮಟ್ಟದ ತಂತ್ರಜ್ಞರು ಬೇರೆ ಯಾರೂ ಅಷ್ಟು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿರಲಿಲ್ಲವೆಂಬುದು ಸ್ಪಷ್ಟ ವಾಗುತ್ತದೆ. ರಾಜಾಜಿನಗರದ ಒಂದು ಕೊಳಚೆ ಪ್ರದೇಶದಲ್ಲಿ ಸಂಜಯ್ ಮುಂದಾಳತ್ವದಲ್ಲಿ ಎಲ್.ಐ.ಸಿ.ಯ ಕೆಲವು ಮಿತ್ರರು ಅನಕ್ಷರಸ್ಥರಿಗೆ ಅಕ್ಷರಾಭ್ಯಾಸದ ತರಗತಿಗಳನ್ನು ನಡೆಸಿದ್ದುದೂ ಉಂಟು. ಕಳೆದ ಮೂರು-ನಾಲ್ಕು ವರ್ಷಗಳಲ್ಲಿ ಅಖಿಲ ಭಾರತ ಪ್ರಗತಿಪರ ವೇದಿಕೆಯ ಸಂಯೋಜಕ-ಸಂಸ್ಥಾಪಕ-ಅಧ್ಯಕ್ಷ ಎಲ್ಲಾ ಆಗಿದ್ದು, ದೇಶದ ಉದ್ದಗಲಕ್ಕೂ ಸಂಚರಿಸಿ ಎಲ್ಲ ರಾಜ್ಯಗಳಲ್ಲೂ ವೇದಿಕೆಯ ಘಟಕಗಳನ್ನು ಆಯೋಜಿಸುವುದರಲ್ಲಿ ಸಂಜಯ್ ಮಗ್ನರಾಗಿದ್ದರು. ನೀರು, ವಿದ್ಯುಚ್ಛಕ್ತಿ, ಚುನಾವಣಾ ಪದ್ಧತಿಯ ಸುಧಾರಣೆ, ಪರಿಸರ, ಆರೋಗ್ಯ, ಪ್ರಾಥಮಿಕ ಶಿಕ್ಷಣ, ಹೀಗೆ ಹತ್ತು ಹಲವು ವಿಷಯಗಳ ಬಗ್ಗೆ ಖ್ಯಾತ ಪರಿಣತರನ್ನು ಒಟ್ಟು ಮಾಡಿ ಅವರ ಆಳವಾದ ಅಧ್ಯಯನಗಳಿಂದ ಮೂಡಿಬಂದ ವರದಿಗಳನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸುವ ಕೆಲಸವನ್ನು ಕೈಗೊಂಡಿದ್ದರು. ದೇಶೀಯ ವಿಜ್ಞಾನ ಅವರ ಮೂಲ ಸ್ಫೂರ್ತಿಯ ಸೆಲೆ. ಜಗದೀಶ ಚಂದ್ರ ಬೋಸರನ್ನು ಕುರಿತಂತೆ ವಿಶೇಷ ಅಧ್ಯಯನ ಮಾಡಿದ್ದ ಸಂಜಯ್ ಎಲ್ಲ ವಿಜ್ಞಾನ-ತಂತ್ರಜ್ಞಾನ ಕ್ಷೇತ್ರಗಳಲ್ಲೂ ಭಾರತದ ಪರಿಣತರು ದೇಶೀಯ ಪರಂಪರೆಯ ಮೌಲ್ಯಗಳನ್ನು ಸ್ವೀಕರಿಸಿ ಜನಪರವಾದ ಸಂಶೋಧನೆಗಳನ್ನು ಮಾಡಬೇಕೆಂದು ಆಗ್ರಹಿಸುತ್ತಿದ್ದರು. ಕಳೆದ ಎರಡು ವರ್ಷಗಳಲ್ಲಿ ಅವರು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಒಂದು ಯೋಜನೆಯನ್ನು ರೂಪಿಸಿ ಅದನ್ನು ಕಾರ್ಯಗತಗೊಳಿಸುವ ಕೆಲಸದಲ್ಲಿ ನಿರತರಾಗಿದ್ದರು. ಸಂಸ್ಥೆಯ ನಿರ್ದೇಶಕರಾದ ಡಾ|| ಪಿ. ಬಲರಾಂ ಅದನ್ನು ಇತ್ತೀಚೆಗೆ ಪ್ರಸ್ತಾಪಿಸಿದ್ದರು : ಸಂಜಯ್ ನಿಧನಕ್ಕೆ ಸಂತಾಪ ಸೂಚಿಸುವ ಸಂದರ್ಭದಲ್ಲಿ, ಆ ಯೋಜನೆಯು ಸಂಜಯ್ ಅವರ ಸೈದ್ಧಾಂತಿಕ ತಿಳುವಳಿಕೆಗೆ ಒಂದು ಉಜ್ವಲ ಪ್ರತೀಕ. ಏನದು ಯೋಜನೆ ? ವೈದ್ಯಕೀಯ ಕ್ಷೇತ್ರದಲ್ಲಿ ಅನೇಕ ಹೊಸ ಆವಿಷ್ಕಾರಗಳಾಗುತ್ತಿರುತ್ತವೆ, ಆದರೆ ಅದರ ಫಲ ಜನಸಾಮಾನ್ಯರಿಗೆ ದಕ್ಕುವುದಿಲ್ಲ, ನಮ್ಮ ವ್ಯವಸ್ಥೆ ಅಂಥದು. ಇದಕ್ಕೆ ಪರಿಹಾರ ಕಂಡುಕೊಳ್ಳಲು ಸಂಜಯ್ ಒಂದು ಯೋಜನೆ ರೂಪಿಸಿದರು. ಭಾರತೀಯ ವಿಜ್ಞಾನ ಸಂಸ್ಥೆಯ ವಿವಿಧ ವಿಭಾಗಗಳು ಜನಸಾಮಾನ್ಯರಿಗೆ ತಲುಪುವಂತಹ ಸಂಶೋಧನೆಗಳನ್ನು ಕೈಗೊಳ್ಳುವುದು, ವಿಜ್ಞಾನ ಸಂಸ್ಥೆಯೇ ಒಂದು ಆಸ್ಪತ್ರೆಯನ್ನು ನಡೆಸುವುದು, ಅಲ್ಲಿಗೆ ಬರುವ ರೋಗಿಗಳಿಗೆ ಸಂಶೋಧನೆಯ ಫಲವನ್ನು ಮುಟ್ಟಿಸುವುದು. ಇಂತಹ ಕೆಲಸ ಮಾಡದಿದ್ದರೆ ವಿಜ್ಞಾನ ಸಂಸ್ಥೆ ಇದ್ದು ಏನು ಪ್ರಯೋಜನ ಮತ್ತು ಸಂಶೋಧನೆ ನಡೆಸಿ ಏನು ಪ್ರಯೋಜನ ? ಅದು ಸಂಜಯ್ ನಿಲುವು ಮತ್ತು ಕ್ರಿಯಾಶೀಲತೆ. ಅವರು ಆರಂಭಿಸಿದ ಯೋಜನೆಯನ್ನು ವಿಜ್ಞಾನ ಸಂಸ್ಥೆಯು ಮುಂದುವರಿಸಿ ದಡ ಮುಟ್ಟುತ್ತದೆಂದು ಆಶಿಸಬೇಕಾಗಿದೆ. ಸ್ವತಃ ಸಂಜಯ್ ಕೈಗೊಂಡಿದ್ದ ಇನ್ನೊಂದು ಸಂಶೋಧನೆ ವಾಹನಗಳಲ್ಲಿ ಇಂಧನಕ್ಕೆ ಸಂಬಂಧಿಸಿದ್ದು. ಒಂದು ಲೀಟರು ಪೆಟ್ರೋಲು ಒಂದು ಕಾರಿಗೆ ಇಂತಿಷ್ಟು ದೂರ ಹೋಗಲು ಸಾಲುತ್ತದೆ ಎಂದಿಟ್ಟುಕೊಳ್ಳಿ. ಇಂಧನದ ಕೊರತೆ ಇರುವ ನಮ್ಮ ದೇಶದಲ್ಲಿ ಆ ದೂರವನ್ನು ಹೆಚ್ಚಿಸುವ ಅವಶ್ಯಕತೆ ಇದೆ ಎಂಬುದು ಸಂಜಯ್ ಆಶಯ. ಅದಕ್ಕಾಗಿ ಇಂಜಿನ್‌ಗೆ ಸಂಬಂಧಿಸಿದಂತೆ ತಾಂತ್ರಿಕ ಸಂಶೋಧನೆ ನಡೆಸುವುದು ಅವರ ಕಾರ್ಯಕ್ಷೇತ್ರದ ವ್ಯಾಪ್ತಿಯಲ್ಲಿತ್ತು. ಕಾರು ತಯಾರಿಸುವ ಕಾರ್ಖಾನೆಯ ಮಾಲೀಕನಿಗೆ ಇದರಿಂದ ಲಾಭ ಹೆಚ್ಚುತ್ತದೆ, ನಿಜ. ಆದರೆ ದೇಶದಲ್ಲಿ ಇಂಧನದ ಅತಿ ಹೆಚ್ಚಿನ ಉಪಯೋಗ ಪಡೆಯುವ ರೀತಿಯಲ್ಲಿ ಬಳಕೆ ಸಾಧ್ಯವಾಗುತ್ತದೆ. ಇಂಥವೇ ಯೋಜನೆಗಳನ್ನು ನೀರಿನ ಬಳಕೆ, ಪರಿಸರದ ರಕ್ಷಣೆ, ಮುಂತಾದ ಕ್ಷೇತ್ರಗಳಿಗೆ ವಿಸ್ತರಿಸಲು ಅಖಿಲ ಭಾರತ ಮಟ್ಟದಲ್ಲಿ ಪರಿಣತರ ಗುಂಪುಗಳನ್ನು ಮಾಡಿ ಅಧ್ಯಯನ ನಡೆಸಲು ಸಂಜಯ್ ನಿಯೋಜಿಸಿದ್ದರು. ಮೂರು-ನಾಲ್ಕು ವರದಿಗಳು ಅವರ ಜೀವಿತ ಕಾಲದಲ್ಲೇ ಸಿದ್ಧವಾಗಿದ್ದವು. ಕೇಂದ್ರ ಸರ್ಕಾರಕ್ಕೆ ಅವನ್ನು ಸಲ್ಲಿಸಿದ್ದರು ಕೂಡ. ಅಂತಹ ಅವರ ಯೋಜನೆ ಗಳನ್ನು ನಮ್ಮ ಪರಿಣತರು ಮುಂದುವರಿಸಬೇಕಾಗಿದೆ. ಕೇಂದ್ರ ಸರ್ಕಾರದ ರಕ್ಷಣಾ ಸಚಿವಾಲಯದ ಕೆಲವು ಉನ್ನತ ಸಮಿತಿಗಳಲ್ಲಿ ಸಂಜಯ್ ಸದಸ್ಯರಾಗಿದ್ದರೆಂಬುದು ಬಹಳ ಜನರಿಗೆ ಗೊತ್ತಿಲ್ಲ. ಅಲ್ಲಿಯೂ ದೇಶದ ಸ್ವಾವಲಂಬನೆಗೆ ಪೂರಕವಾದ ಯೋಜನೆಗಳನ್ನು ರೂಪಿಸಿ ಅವನ್ನು ಕಾರ್ಯಗತಗೊಳಿಸುವುದರಲ್ಲಿ ಸಂಜಯ್ ನಿರತರಾಗಿದ್ದರು. ಹೀಗೆ ''ಜನಸಾಮಾನ್ಯರಿಗೆ ವಿಜ್ಞಾನ-ತಂತ್ರಜ್ಞಾನ'' ಮತ್ತು ''ಸ್ವಾವಲಂಬನೆಗಾಗಿ ಸ್ವದೇಶಿ ವೈಜ್ಞಾನಿಕ ಮತ್ತು ತಾಂತ್ರಿಕ ಸಂಶೋಧನೆ'' ಇವು ಸಂಜಯ್ ಉಸಿರಾಗಿದ್ದವು. ಅವರ ಉಸಿರಾಟ ಸ್ತಬ್ಧವಾಗಿದೆ, ಆದರೆ ಅವರು ಆರಂಭಿಸಿದ ಯೋಜನೆಗಳ ಉಸಿರಾಟ ನಿಲ್ಲಬಾರದು. ಅದಕ್ಕೆ ವಿಜ್ಞಾನಿಗಳ ಮತ್ತು ತಂತ್ರಜ್ಞರ ಪೂರ್ಣ ಬದ್ಧತೆ ಮತ್ತು ಸಹಕಾರ ಅಗತ್ಯ.

ಸಂಜಯ್ ಅವರ ಚಿಂತನೆ, ಯೋಜನೆ ಮತ್ತು ಕ್ರಿಯೆ ಗಳಿಗೆ ವಿಶಿಷ್ಟ ಪ್ರೇರಣೆ ದೊರಕಿದ್ದು ಮಾರ್ಕ್ಸ್‌ವಾದದಿಂದ. ಸ್ಕಾಟ್ಲೆಂಡ್‌ನಲ್ಲಿ ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲೇ ಅವರು ಬ್ರಿಟನ್ನಿನ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿದ್ದರು, ಬರ್ಮಿಂಗ್ ಹ್ಯಾಮ್‌ನಲ್ಲಿ ಪಕ್ಷದ ಸಕ್ರಿಯ ಕಾರ್ಯಕರ್ತರಾಗಿದ್ದರು. ಬೆಂಗಳೂರಿಗೆ ಬರುವ ಮೊದಲು ಮತ್ತು ನಂತರ ಅವರು ಭಾರತೀಯ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿದ್ದರು. ಬೆಂಗಳೂರಿನಲ್ಲಿ ವಿಶ್ವ ಶಾಂತಿ ಮಂಡಲಿಯ ಆಶ್ರಯದಲ್ಲಿ ಒಂದು ಅಂತರರಾಷ್ಟ್ರೀಯ ಸಮ್ಮೇಳನ ನಡೆದಾಗ ಸಂಜಯ್ ಮತ್ತು ಸೇತುರಾವ್ ವಿಜ್ಞಾನಿಗಳ ಹಲವು ಗೋಷ್ಠಿಗಳನ್ನು ಆಯೋಜಿಸಿದ್ದರು. ಆಗಿನ ವರದಿಗಳು ಶಾಂತಿ ಮತ್ತು ಸ್ವಾವಲಂಬನೆಯ ಗುರಿಗಳನ್ನು ಸಾಧಿಸಲು ಎಲ್ಲ ದೇಶಗಳಿಗೂ ಕರೆ ಕೊಟ್ಟಿದ್ದವು ಮತ್ತು ಅದರ ಸಾಧನೆಗೆ ಅಗತ್ಯವಾದ ಹಾದಿಗಳನ್ನು ವಿಸ್ತಾರವಾಗಿ ವಿವರಿಸಿದ್ದವು. ಸತೀಶ ಧಾವನ್, ಸಂಜಯ್ ಮತ್ತು ಸೇತುರಾವ್ ಈ ಗೋಷ್ಠಿಗಳನ್ನು ಆಯೋಜಿಸಿದ ರೂವಾರಿಗಳು. ಕಲ್ಕತ್ತೆಯಲ್ಲಿ ಸಂಜಯ್‌ಗೆ ಆಪ್ತ ಮಾರ್ಗದರ್ಶಿಯೆಂದರೆ ದೇವಿಪ್ರಸಾದ ಚಟ್ಟೋಪಾಧ್ಯಾಯ. ೧೯೭೦ರ ದಶಕದ ಆದಿಭಾಗದಲ್ಲಿ

ದೇವಿಪ್ರಸಾದರ ಮನೆಯು ಉದ್ದಾಮ ಮಾರ್ಕ್ಸ್‌ವಾದಿಗಳಿಗೆಲ್ಲಾ ಒಂದು ಚರ್ಚೆಯ ತಾಣ. ಪ್ರತಿ ವಾರವೂ ಅವರ ಮನೆಯಲ್ಲಿ ಸಭೆ ಮತ್ತು ಚರ್ಚೆ. ಪ್ರಸ್ತುತ ಲೇಖಕನಿಗೆ ಸಂಜಯ್ ಪರಿಚಯವಾದದ್ದು ಅಂತಹ ಗೋಷ್ಠಿಯೊಂದರ ಸಂದರ್ಭದಲ್ಲಿ. ಬೆಂಗಳೂರಿನಲ್ಲಿ ಸಂಜಯ್ ಮನೆ ಸಹ ಚಿಂತನಾ ಶಿಬಿರಗಳಿಗೆ ಪ್ರಸಿದ್ಧವಾಗಿತ್ತು. ಆತನೊಟ್ಟಿಗೆ ಬೇರೆ ಬೇರೆ ರೀತಿಗಳಲ್ಲಿ ಕೆಲಸ ಮಾಡಿದ ಪ್ರಸ್ತುತ ಲೇಖಕನಿಗೆ ಸಂಜಯ್ ನೆನಪು ಗಾಢವಾಗಿದೆ, ಆತ್ಮೀಯ ಸಂಗಾತಿಯೊಬ್ಬನನ್ನು ಅಕಾಲಿಕವಾಗಿ ಕಳೆದುಕೊಂಡ ನೋವು ತೀವ್ರವಾಗಿದೆ. ಆತನ ಕ್ರಿಯಾಶಕ್ತಿ ಎಷ್ಟು ವಿಪುಲವಾಗಿತ್ತೆಂದರೆ ಅದನ್ನು ಅನುಕರಿಸುವುದು ಬಹಳ ಕಷ್ಟ. ಆದರೆ ಆತನ ಧ್ಯೇಯವಾಕ್ಯ ನಮ್ಮ ಧ್ಯೇಯವಾಕ್ಯವೂ ಆಗಿರುವಂತೆ ಮಾಡಿಕೊಳ್ಳುವ ಜವಾಬ್ದಾರಿ ನಮ್ಮ ಮೇಲಿದೆ. ಮತ್ತೊಮ್ಮೆ ಸಂಜಯ್‌ಗೆ ಆತ್ಮೀಯ ವಂದನೆ ಮತ್ತು ವಿದಾಯ.

✶ ✶ ✶

ಜರ್ಮನಿ ಕುತೂಹಲ ಹುಟ್ಟಿಸುವ ದೇಶ. ಕಳೆದ ಒಂದು ಶತಮಾನದ ಯೂರೋಪಿನ ಚರಿತ್ರೆಯಲ್ಲಿ ಅದರದ್ದು ಮಹತ್ವದ ಪಾತ್ರವಿದೆ. ಎರಡು ಬಾರಿ ಮುಗ್ಗರಿಸಿ ತನ್ನನ್ನು ಮತ್ತು ಯೂರೋಪನ್ನು ಪ್ರಪಾತಕ್ಕೆ ನೂಕುವ ಕೆಲಸ ಜರ್ಮನಿ ಮಾಡಿದೆ. ಎರಡು ಮಹಾಯುದ್ಧಗಳಿಗೂ ಜರ್ಮನಿ ಮಾತ್ರವೇ ಕಾರಣವೆಂದು ಹೇಳುವುದು ಸರ್ವಥಾ ಸರಿಯಲ್ಲ. ಹಿಟ್ಲರ್ ಆಕಾಶದಿಂದ ಉದುರಿದ ಧೂಮಕೇತುವಲ್ಲ. ಅವನನ್ನು ಸೃಷ್ಟಿಸಿದ್ದು, ಪೋಷಿಸಿದ್ದು, ಆಮೇಲೆ ದೈತ್ಯಸಂಹಾರ ಮಾಡಿದ್ದು, ಎಲ್ಲದರಲ್ಲೂ ಬೇರೆ ಯೂರೋಪಿನ ದೇಶಗಳು ಹಾಗೂ ಅಮೇರಿಕಾ ಪಾತ್ರ ವಹಿಸಿವೆ. ಮೊದಲ ಯುದ್ಧ ಮುಗಿದ ಮೇಲೆ ಯುದ್ಧದ ಬಾಬ್ತು ಪರಿಹಾರ ಕಟ್ಟಿಕೊಡಬೇಕೆಂಬ ಒತ್ತಾಯವು ಜರ್ಮನಿಯನ್ನು ಆರ್ಥಿಕ ವಿನಾಶದ ಅಂಚಿಗೆ ತಳ್ಳಿತು. ಯಹೂದಿಗಳು ಜರ್ಮನಿಯ ಪ್ರಗತಿಗೆ ಶತ್ರುಗಳೆಂಬ ಐತಿಹ್ಯ ಹುಟ್ಟಿಕೊಂಡಿದ್ದು ಆ ಹಿನ್ನೆಲೆಯಲ್ಲಿ. ಥೈಸೆನ್, ಕ್ರುಪ್, ಮೊದಲಾದ ಕಂಪನಿಗಳು ಹಿಟ್ಲರನ ಬೆಂಬಲಕ್ಕೆ ನಿಂತವು. ಹಿಟ್ಲರ್ ಯಹೂದಿಗಳ ಸಂಹಾರ ಆರಂಭಿಸಿದ ನಂತರವೂ ಅಮೇರಿಕಾ ಈ ಕಂಪನಿಗಳ ಜೊತೆ ನಿಕಟ ವ್ಯಾಪಾರೀ ಸಂಬಂಧ ಹೊಂದಿತ್ತು. ಹಿಟ್ಲರ್ ಕೇವಲ ಯಹೂದಿಗಳನ್ನು ಕೊಚ್ಚಿ ಕೊಲ್ಲಲಿಲ್ಲ. ದುಡಿಯುವ ಜನರ ಪ್ರತಿನಿಧಿಗಳನ್ನೂ ಅವನು ಸದೆಬಡಿದ. ಕಮ್ಯುನಿಸ್ಟರು ಮತ್ತು ಸೋಷಿಯಲ್ ಡೆಮಾಕ್ರಾಟರು ಸಹಸ್ರ ಸಂಖ್ಯೆಯಲ್ಲಿ ಕೊಲ್ಲಲ್ಪಟ್ಟರು. ಆಗೆಲ್ಲಾ ಯೂರೋಪ್ ಮತ್ತು ಅಮೇರಿಕಾ ಕಣ್ಣುಮುಚ್ಚಿ ಬಕಧ್ಯಾನದಲ್ಲಿ ತೊಡಗಿದ್ದವು. ಆಮೇಲೆ ಕೂಡುದೊಡ್ಡಿಗಳು, ಉಗ್ರ ಹಿಂಸೆ, ಮಹಾಯುದ್ಧ, ಎಲ್ಲಾ ಚರಿತ್ರೆಯಲ್ಲಿ ದಾಖಲಾಗಿವೆ. ೧೯೩೦ರಿಂದ ೧೯೪೫ರ ವರೆಗಿನ ವರ್ಷಗಳ ಘಟನೆಗಳು ಇವು. ಜರ್ಮನಿಯ ಇಂದಿನ ಜನ ಆ ಕಾಲದ ಚರಿತ್ರೆ ಬಗ್ಗೆ, ತಮ್ಮ ದೇಶದ ನಾಗರಿಕತೆ ಮತ್ತು ಸಂಸ್ಕೃತಿ ಬಗ್ಗೆ, ತಮ್ಮ ದೇಶದ ಸೋಲಿನ ಬಗ್ಗೆ ಮತ್ತು ಕಡೆಗೆ ತಮ್ಮ ದೇಶವು ಅಮೇರಿಕಾದ ತೊತ್ತಿನಂತೆ ನಡೆಯುವಂತಾದುದರ ಬಗ್ಗೆ ಒಳಗೊಳಗೆ ಎಂತಹ ಭಾವನೆಗಳನ್ನಿರಿಸಿಕೊಂಡಿರಬಹುದು? ಅವರ ವ್ಯಕ್ತಿತ್ವವು ನಿಗೂಢವಾಗಿರಬಹುದಲ್ಲವೆ? ತಮ್ಮ ಕುಟುಂಬದವರನ್ನು ಕಳೆದುಕೊಳ್ಳದ ಕುಟುಂಬವೇ ಇಲ್ಲದ ದೇಶದಲ್ಲಿ ಎಂಭತ್ತು ವರ್ಷಗಳ ಹಿಂದಿನ ಸಂಗತಿಗಳನ್ನು ಇಂದಿನ ಜನ ಹೇಗೆ ಪರಾಮರ್ಶಿಸುತ್ತಿರಬಹುದು? ಬಹಿರಂಗದ ಅಭಿವ್ಯಕ್ತಿಯು ಅಂತರಂಗದ ಭಾವನೆಗಳನ್ನೆಲ್ಲಾ ತೆರೆದಿಡುವುದು ಅಸಂಭವವೆನಿಸುತ್ತದೆ. ನಮ್ಮ ದೇಶದಲ್ಲಿ ಗುಟ್ಟಾಗಿ ಇಲ್ಲವೆ ಕುತರ್ಕದಿಂದ ಹಿಂದಿನ ಕಾಲದ ಅಸ್ಪೃಶ್ಯತೆಯ ಆಚರಣೆಯನ್ನು ಸಮರ್ಥಿಸುವವರಿದ್ದಾರೆ. ಆದರೆ ಜರ್ಮನಿಯಲ್ಲಿ ಹಿಟ್ಲರನ ಪಾತಕಗಳನ್ನು ಹಾಗೆ ಬಹಿರಂಗವಾಗಿ ಸಮರ್ಥಿಸುವ ಸನ್ನಿವೇಶವಿಲ್ಲ. ಆದರೆ ಆ ಪಾತಕಗಳಿಗೆ ತಾವು ವಾರಸುದಾರರೆಂಬುದನ್ನು ಅವರು ಅಲ್ಲಗಳೆಯುವಂತೆಯೂ ಇಲ್ಲ. ಹೀಗಾಗಿ ಜರ್ಮನಿಯ ವ್ಯಕ್ತಿತ್ವವು ಇಮ್ಮುಖವಾದ್ದು: ಪ್ರದರ್ಶನಗೊಳ್ಳುವುದು ಒಂದು, ಅಂತರ್ವಾಹಿನಿ ಮತ್ತೊಂದು. ಕೂಡುದೊಡ್ಡಿಗಳು, ಅಲ್ಲಿಯ ಹಿಂಸೆ ಮತ್ತು ಕೊಲೆಗಳ ಬಗ್ಗೆ ಜರ್ಮನರು ಬಹಿರಂಗವಾಗಿ ಚರ್ಚಿಸುವುದು ಇಲ್ಲವೇ ಇಲ್ಲವೆಂಬ ಮಟ್ಟದ್ದು. ಅಲ್ಲಿಯ ಮಾಧ್ಯಮಗಳು ಮತ್ತು ಸ್ಮಾರಕಗಳು ಬಹಳ ಬುದ್ಧಿವಂತಿಕೆಯಿಂದ ಸಂಗತಿಗಳನ್ನು ಪರಾಮರ್ಶಿಸುವ ಅಗತ್ಯವಿದೆ. ಅದನ್ನೆಲ್ಲಾ ವ್ಯವಸ್ಥಿತವಾಗಿ ಆಯೋಜಿಸಿರುವುದು ಅಮೇರಿಕಾ ಎಂಬುದರಲ್ಲಿ ಸಂಶಯವಿಲ್ಲ. ಅಮೇರಿಕಾದ ಈ ಪ್ರಾಬಲ್ಯವೂ ಒಂದು ನುಂಗಲಾರದ ತುತ್ತೇ. ಸಹಿಸಲು ಕಷ್ಟ, ಆದರೆ ನಿರಾಕರಿಸುವುದು ಅಸಾಧ್ಯ. ವ್ಯಕ್ತಿತ್ವವನ್ನು ಒಡೆಯಲು ಅದೂ ಒಂದು ಪೂರಕಾಂಶ. ಹೊರಗೇನೋ ನಾಟಕ, ಸಾಹಿತ್ಯ, ಸಂಗೀತ, ಇವುಗಳಲ್ಲಿ ತಮ್ಮನ್ನು ತಾವು ಮರೆಯಬಹುದು; ಆದರೆ ಒಳಗಿನ ತುಮುಲದ ಅಭಿವ್ಯಕ್ತಿ ಹೇಗೆ? ಮುಸುಕು ಧರಿಸಿ ಜೀವನ ಸಾಗಿಸಲು ಜರ್ಮನಿ ಕಂಡುಕೊಂಡಿರುವ ವಿಧಾನವೆಂದರೆ ಮೂಕವಾಗಿರುವುದು, ಹಿಂದಿನದನ್ನು ನೋಡಹೋಗಿಲ್ಲವೇನೋ ಎಂಬಂತೆ ನಟಿಸುವುದು. ಅನಿವಾರ್ಯವಾಗಿ ಅದನ್ನು ನೋಡಲೇಬೇಕಾದಾಗ ಕಮ್ಯುನಿಸ್ಟರನ್ನು ಮತ್ತು ಸೋಷಿಯಲ್ ಡೆಮೊಕ್ರಾಟರನ್ನು ನಿಂದಿಸುವುದು ಒಂದು ಮಾರ್ಗ; ಹಿಂದಿನ ಜರ್ಮನಿಯ ಡೆಮಾಕ್ರಟಿಕ್ ರಿಪಬ್ಲಿಕ್ ಅನ್ನು ನಿರರ್ಗಳವಾಗಿ ದೂಷಿಸುವುದು ಮತ್ತು ಖಂಡಿಸುವುದು ಇನ್ನೊಂದು ಮಾರ್ಗ. ಔದ್ಯಮಿಕ ಉತ್ಪಾದನೆಯು ಇಂತಹ ಇಬ್ಬಂದಿಗಳನ್ನೆಲ್ಲಾ ಚಾಪೆಯ ಕೆಳಕ್ಕೆ ನೂಕಿಬಿಡುತ್ತದೆ.

✶ ✶ ✶

ಜರ್ಮನಿಯ ರಾಜಧಾನಿ ಬರ್ಲಿನ್. ಅಲ್ಲಿಯ ಭಾರತೀಯ ದೂತಾವಾಸದ ಒಂದು ಭಾಗವು ಸಾಂಸ್ಕೃತಿಕ ಕೇಂದ್ರ. ಅದಕ್ಕೆ ರವೀಂದ್ರನಾಥ ಟಾಗೋರರ ಹೆಸರನ್ನು ಇಟ್ಟಿದ್ದಾರೆ. ಬರ್ಲಿನ್ನಿನಲ್ಲಿ 'ಟಾಗೋರ್ ಸ್ಟ್ರಾಸ್' ಒಂದಿದೆ. ಅಂದರೆ, ಅವರ ಹೆಸರಿನ ರಸ್ತೆ. ಅದಕ್ಕೆ ಆ ಹೆಸರು ಬರಲು ವಾಲ್ಟರ್ ರೂಬೆನ್ ಕಾರಣ. ಆತನ ಮನೆ ಆ ರಸ್ತೆಯಲ್ಲಿದೆ. ಆತ ಗತಿಸಿದ್ದಾನೆ, ಆದರೆ ಅವನ ಮಕ್ಕಳು ಈಗಲೂ ಅಲ್ಲಿದ್ದಾರೆ. ರೂಬೆನ್ ಒಬ್ಬ ಪ್ರಖ್ಯಾತ ಸಂಸ್ಕೃತ ವಿದ್ವಾಂಸ. ಅವನ ಮೌಲಿಕ ಗ್ರಂಥಗಳು ಹಲವಿವೆ. ಟಾಗೋರ್ ಕೇಂದ್ರವು ಕೆಲವು ತಿಂಗಳುಗಳ ಹಿಂದೆ ಜರ್ಮನಿಯ ಹಲವು ವಿದ್ವಾಂಸರಿಗೆ , ಸಾಂಸ್ಕೃತಿಕ ಕಾರ್ಯಕರ್ತರಿಗೆ, ಒಂದು ಪತ್ರ ಬರೆದು ಸಲಹೆ ಕೋರಿತು : ಟಾಗೋರ್ ಕೇಂದ್ರದಲ್ಲಿ ಯೋಗಾಭ್ಯಾಸವನ್ನು ಹೇಳಿಕೊಟ್ಟರೆ ಚೆನ್ನಾಗಿ ಇರುತ್ತದಲ್ಲವೆ, ಅದಕ್ಕೆ ಪ್ರಯತ್ನ ಮಾಡಬಹುದೆ, ಎಂದು. ಭಾರತ - ಜರ್ಮನಿ ಸ್ನೇಹ ಸಂಸ್ಥೆಯ ಒಬ್ಬ ಕಾರ್ಯಕರ್ತೆ ಅದಕ್ಕೆ ಉತ್ತರ ಬರೆದರು : ಟಾಗೋರ್ ಕೇಂದ್ರ ಅದನ್ನೇಕೆ ಮಾಡಬೇಕು? ಜರ್ಮನರು ಹಣ ಕೊಟ್ಟು ಯೋಗ ಕಲಿಯಬಹುದು, ಕಲಿಯುತ್ತಿದ್ದಾರೆ. ಆದ್ದರಿಂದ ಆ ಯೋಚನೆ ಬಿಡಿ. ಭಾರತದ ವಿಜ್ಞಾನದ ಪರಂಪರೆ ಮಹತ್ವದ್ದಾಗಿದೆ. ಅದನ್ನು ಜರ್ಮನರಿಗೆ ತಿಳಿಸಿಕೊಡುವ ಕೆಲಸ ಹೆಚ್ಚು ಉಪಯುಕ್ತ, ಅದನ್ನು ಮಾಡಿ, ಎಂದು. ಅದಕ್ಕೆ ಟಾಗೋರ್ ಸಂಸ್ಥೆಯ ಪ್ರತಿಕ್ರಿಯೆ ಏನು ಗೊತ್ತೆ? ಆಕೆಗೆ ಆ ನಂತರ ಕೇಂದ್ರದಿಂದ ಯಾವ ಆಹ್ವಾನ ಪತ್ರಿಕೆಯೂ ಹೋಗಲಿಲ್ಲ! ಎಷ್ಟು ಅಂದವಾಗಿದೆ ನಮ್ಮ ಸಾಂಸ್ಕೃತಿಕ ಕೇಂದ್ರದ ಕಾರ್ಯವೈಖರಿ, ಅಲ್ಲವೆ?

✶ ✶ ✶

ಅಮೇರಿಕಾದ ''ನ್ಯೂಯಾರ್ಕ್ ಟೈಂಸ್'' ಪತ್ರಿಕೆಯು ಅಂತರರಾಷ್ಟ್ರೀಯ ಪ್ರಸಾರಕ್ಕೆ ''ಇಂಟರ್‌ನ್ಯಾಷನಲ್ ಹೆರಾಲ್ಡ್ ಟ್ರಿಬ್ಯೂನ್'' ಎಂಬ ಹೆಸರಿನಲ್ಲಿ ಹೊರಬರುತ್ತದೆ. ಅದು ಸಾಮಾನ್ಯವಾಗಿ ಯೂರೋಪಿನ ಎಲ್ಲ ದೊಡ್ಡ ವಿಮಾನ ನಿಲ್ದಾಣಗಳಲ್ಲೂ ಲಭ್ಯ. ಏಪ್ರಿಲ್ ಕೊನೆಯ ವಾರದ ಒಂದು ಸಂಚಿಕೆಯಲ್ಲಿ ಪ್ರಕಟವಾಗಿದ್ದ ಸುದ್ದಿ ಇದು : ಲಂಡನ್ನಿನಲ್ಲಿ ೫೬ ವರ್ಷದ ಒಬ್ಬ ವ್ಯಾಪಾರಿ ಇದ್ದಾನೆ. ಅವನ ಹೆಸರು ಜೇಮ್ಸ್ ಮೆಕಾರ್ಮಿಕ್. ಅವನು ದೇಶ ವಿದೇಶಗಳಲ್ಲಿ ಶಸ್ತ್ರಾಸ್ತ್ರಗಳ ಮಾರಾಟ ಮಾಡುತ್ತಾನೆ. ಈಚೆಗೆ ಲಂಡನ್ನಿನ ಒಂದು ನ್ಯಾಯಾಲಯವು ಅವನಿಗೆ ಹತ್ತು ವರ್ಷಗಳ ಜೈಲುವಾಸದ ಶಿಕ್ಷೆಯನ್ನು ವಿಧಿಸಿತು. ಕಾರಣವೇನು ಗೊತ್ತೆ? ಇರಾಕ್ ಮತ್ತು ಇತರ ದೇಶಗಳಿಗೆ ಬಾಂಬುಗಳನ್ನು ಪತ್ತೆಹಚ್ಚುವ ಒಂದು ಯಂತ್ರದ ಮಾರಾಟ ಮಾಡಿದ್ದಾನೆ. ಲಕ್ಷಗಟ್ಟಲೆ ಪೌಂಡುಗಳ ಲಾಭ ಗಳಿಸಿದ್ದಾನೆ. ಆದರೆ ಅವನು ಸರಬರಾಜು ಮಾಡಿದ ಯಂತ್ರವು ಯಾವ ಬಾಂಬನ್ನೂ ಗುರುತಿಸುವ ಸಾಮರ್ಥ್ಯ ಹೊಂದಿಲ್ಲ. ಅಂದರೆ, ತನ್ನ ಲಾಭದ ಹೆಚ್ಚಳವು ಅವನಿಗೆ ಮುಖ್ಯವಾಯಿತು. ಪತ್ತೆಹಚ್ಚಲಾಗದೆ ಉಳಿದ ಬಾಂಬುಗಳಿಂದ ಜೀವಹಾನಿ ಉಂಟಾಗುವುದು ಗೌಣವಾಯಿತು. ಅವನು ಬಹಳ ಚಾಣಾಕ್ಷ. ಆದ್ದರಿಂದ ಅವನೇನು ಮಾಡಿದ್ದನೆಂದರೆ ಗಾಲ್ಫ್ ಆಡುವಾಗ ಕಳೆದುಹೋದ ಚೆಂಡುಗಳನ್ನು ಪತ್ತೆಹಚ್ಚುವ ಯಂತ್ರವನ್ನು ಬಾಂಬ್ ಪತ್ತೆಹಚ್ಚುವ ಯಂತ್ರವೆಂದು ಹೇಳಿ ಮಾರಾಟ ಮಾಡಿದ! ಹಾಗೆ ಅವನಿಗೆ ಸಂದಾಯವಾದ ಲಾಭ ಎರಡೂವರೆ ಕೋಟಿ ಪೌಂಡುಗಳು, ಅಂದರೆ ಸುಮಾರು ೧೯೦ ಕೋಟಿ ರೂಪಾಯಿಗಳು. ಅವನ ವಿಚಾರಣೆ ನಡೆದಾಗ ಅವನು ಹೇಳಿದ, ''ಇವೇ ಯಂತ್ರಗಳನ್ನು ಕೀನ್ಯಾದ ಪೊಲೀಸ್ ವಿಭಾಗಕ್ಕೆ ಮಾರಾಟ ಮಾಡಿದ್ದೇನೆ, ಹಾಂಗ್‌ಕಾಂಗಿನ ಜೈಲುಗಳಿಗೆ ಸರಬರಾಜು ಮಾಡಿದ್ದೇನೆ, ಈಜಿಪ್ಟಿನ ಸೈನ್ಯಕ್ಕೆ ಮಾರಿದ್ದೇನೆ ಮತ್ತು ಥಾಯ್ಲೆಂಡಿನ ಗಡಿಭದ್ರತಾ ಪಡೆಗೆ ಮಾರಿದ್ದೇನೆ'' ಎಂದು. ಯಂತ್ರಗಳಿಗೆ ಅವನು ನಿಗದಿಗೊಳಿಸಿದ ಬೆಲೆ ತಲಾ ೪೦,೦೦೦ ಪೌಂಡುಗಳು; ಅಂದರೆ ಒಂದಕ್ಕೆ ಮೂವತ್ತು ಲಕ್ಷ ರೂಪಾಯಿಗಳು. ಭಾರತಕ್ಕೂ ಮಾರಾಟ ಮಾಡಿದ್ದಾನೇನೋ ತಿಳಿಯದು. ಇದು ಬಂಡವಾಳಶಾಹಿಯ ನೈಜ ಮುಖ ಮತ್ತು ಮೌಲ್ಯ. ಇರಾಕಿನ ಜನರನ್ನು ಕೊಂದು ಆ ದೇಶದ ಸಂಪತ್ತು ಲೂಟಿ ಮಾಡಿದರೆ ಲಾಭ, ಅಲ್ಲಿ ಸಿಡಿಯದ ಬಾಂಬುಗಳನ್ನು ಪತ್ತೆಹಚ್ಚಲು ಮಾರುವ ಯಂತ್ರದಿಂದಲೂ ಲಾಭ! ಮಾನವ ಹಕ್ಕುಗಳ ಸಂರಕ್ಷಣೆ ಮತ್ತು ಪ್ರಜಾಪ್ರಭುತ್ವದ ಪೋಷಣೆಗೆ ಎಂಥ ಅದ್ಭುತ ವಿಧಾನ, ಅಲ್ಲವೆ? ಅಂತಹ ರಾಕ್ಷಸರೊಡನೆ ನಮ್ಮ ಪ್ರಧಾನಿ ಸಖ್ಯ ಬೆಳೆಸುತ್ತಾರೆ. ಅದು ನಮ್ಮ ಪ್ರಜಾಪ್ರಭುತ್ವದ ಪರಿ! ●




## ಮೇ ತಿಂಗಳ ಸಂಚಿಕೆ

ಸಂಪಾದಕೀಯ ವಿಚಾರಪೂರ್ಣವಾಗಿದೆ. ಪ್ರಧಾನಿ ಆಯ್ಕೆ ಬಗ್ಗೆ ನಾವ್ಯಾರೂ ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಶಾಸಕಾಂಗದ ಆಯ್ಕೆ ಅದಾಗಿದ್ದರಿಂದ ಹೆಸರು ಬಿಂಬಿಸಿ ಪ್ರಚಾರದ ಅವಶ್ಯಕತೆಯಿಲ್ಲ. ನೋವಾರ್ಟಿಸ್ ಪೇಟೆಂಟ್ ಸರ್ವೋಚ್ಚ ತೀರ್ಪಿಗಾಗಿ ನಾನು ಕೂಡ ಅಭಿನಂದಿಸುತ್ತೇನೆ. ಕೋಚೆ ಅವರ ಲೇಖನ ಸತ್ಯವಾದುದಾಗಿದೆ. ಸಾಧ್ಯತೆ ಬಗ್ಗೆ ನಂಬಿಕೆ ಇರಬೇಕಷ್ಟೆ. ವಿಷ್ಣು ನಾಯ್ಕ ಕಾವ್ಯದ ಬಗ್ಗೆ ಕಾಳಜಿ ವಹಿಸಿದ್ದು ವೇದ್ಯವಾಗಿದೆ.

ಭಾಗ್ಯನಗರ, ಕೊಪ್ಪಳ ಜಿಲ್ಲೆ **ಅಕ್ಬರ್ ಸಿ. ಕಾಲಿಮಿರ್ಚಿ**

## ಭ್ರಷ್ಟಾಚಾರ ನಿರ್ಮೂಲನೆ ಹೇಗೆ ಸಾಧ್ಯ ?

ಭ್ರಷ್ಟಾಚಾರವು ವಿಶ್ವವ್ಯಾಪಿಯಾಗಿದೆ. ಯಾರಿಂದಲೂ ನಿರ್ಮೂಲನೆ ಮಾಡಲು ಆಗದೆ ಇರುವ ಅಸಾಧ್ಯದ ಸ್ಥಿತಿ ಬಂದೊದಗಿದೆ. ಭ್ರಷ್ಟಾಚಾರದ ಪರಿಣಾಮವು ಹತ್ತು ಹಲವು. ಅಂತಿಮವಾಗಿ ಇದು ಸಾಮಾನ್ಯರ/ಬಡವರ ಬದುಕಿನ ಮೇಲೆ ದುಷ್ಪರಿಣಾಮ ಬೀರುವುದು. ದೇಶದ ಪ್ರಗತಿ ನಿಧಾನವಾಗಿ ಚಲಿಸುವುದು. ಇತ್ತೀಚೆಗೆ ಒಂದು ಸುದ್ದಿ ಪತ್ರಿಕೆಯಲ್ಲಿ ಓದಿದೆ. ಒಬ್ಬ ಸರಕಾರಿ ನೌಕರನನ್ನು ಭ್ರಷ್ಟಾಚಾರದ ಆರೋಪದ ಮೇಲೆ ಲೋಕಾಯುಕ್ತರಿಗೆ ದೂರು ನೀಡಿ, ಅವನನ್ನು ಬಂಧಿಸಲಾಗಿತ್ತು. ಇದನ್ನು ಪ್ರತಿಭಟಿಸಲು ಆರೋಪಿಯ ಕುಲಸ್ಥರ ಸಂಘಟನೆಗಳು ಮತ್ತು ಆ ಜಾತಿಯ ಮಾಜಿ ಶಾಸಕರೊಬ್ಬರು ಪ್ರತಿಭಟನೆಯ ಮೆರವಣಿಗೆಯ ನೇತೃತ್ವ ವಹಿಸಿ, ಲೋಕಾಯುಕ್ತರಿಗೆ ದೂರು ನೀಡಿದ ವಿರುದ್ಧವೂ ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿ ಮೈಸೂರು ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು. ಹಾಗಾಗಿ ಜಾತಿ-ಭ್ರಷ್ಟಾಚಾರ ನೇರ ಸಂಬಂಧವಿದೆ. ಸಾರ್ವಜನಿಕರಲ್ಲಿಯೂ ದ್ವಿಮುಖ ನೀತಿಯಿದೆ. ಕುಲಸ್ಥರು ಭ್ರಷ್ಟಾಚಾರದಲ್ಲಿ ತೊಡಗಿದರೆ ಮೌನ ಆಚರಿಸುತ್ತಾರೆ. ಬೇರೆ ಜಾತಿಯವರು ಭ್ರಷ್ಟಾಚಾರದಲ್ಲಿ ತೊಡಗಿದರೆ ಅವರ ಮೇಲೆ ಹರಿಹಾಯುತ್ತಾರೆ.

ತುಮಕೂರು **ವಾಮನ ರಾವ್**

'ಭ್ರಷ್ಟಾಚಾರ ನಿರ್ಮೂಲನೆ ಅಸಾಧ್ಯ' ಎಂಬ ಕೋ. ಚೆನ್ನಬಸಪ್ಪ ಅವರು ಬರೆದ ಲೇಖನವನ್ನು ಓದಿದೆ. ನ್ಯಾಯಾಂಗ, ಪತ್ರಿಕೋದ್ಯಮ,. ಸಾಹಿತ್ಯರಂಗದಲ್ಲಿ ದೀರ್ಘಾಯುಷ್ಯ ಕಳೆದ ಅವರು 'ಈ ಭ್ರಷ್ಟಾಚಾರ ಬ್ರಹ್ಮರಾಕ್ಷಸನಂತೆ ಸರ್ವಾಂತರ್ಯಾಮಿ ಆಗಿದೆ. ನಿರ್ಮೂಲನೆ ಅಸಾಧ್ಯ !' ಎಂದಿದ್ದಾರೆ. ಭ್ರಷ್ಟಾಚಾರ ಅದೆಷ್ಟು ಬೃಹದಾಕಾರವಾಗಿ ಬೆಳೆದಿದೆ ಎಂಬುದನ್ನು ಸರ್ವೇಸಾಮಾನ್ಯವಾಗಿ ಓರ್ವ ಭಿಕ್ಷುಕನಿಂದ ಹಿಡಿದು ಶ್ರೇಷ್ಠ ಮೇಧಾವಿತನಕ ಎಲ್ಲರೂ ಮಾತಾಡುತ್ತಾರೆ !

ಶಾಸಕ, ಸಂಸದ, ಸಚಿವ, ನೌಕರ, ಅಧಿಕಾರಿ ವರ್ಗದವರು ಎಲ್ಲರೂ ಭ್ರಷ್ಟರೆ ಎಂದು ಓರ್ವ ಸಾಮಾನ್ಯ ಕೂಲಿಕಾರನೂ ಮಾತಾಡುತ್ತಾನೆ. ಯಾಕೆಂದರೆ ಕೂಲಿಕಾರ ತಾನೂ ಕೆಲಸಕ್ಕೆ ಹಾಜರಾಗದೆ, ದುಡಿಯದೆ, ನೂರು ದಿನಗಳ ಕೂಲಿಯಲ್ಲಿ ಅರ್ಧದಷ್ಟನ್ನು ಅಧಿಕಾರಿಗಳಿಗೆ ಬಿಟ್ಟುಕೊಟ್ಟು ಹಾಜರಿಗೆ ಸಹಿಮಾಡಿ ೫೦ ದಿನಗಳ ಕೂಲಿ ಪಡೆಯುತ್ತಾನೆ. ಈಗ ಪ್ರತಿಯೊಬ್ಬ ನಾಗರಿಕನೂ ಕಾಯಕ ತತ್ವಕ್ಕೆ ವಿಮುಖನಾಗಿ ನಡೆದಿದ್ದಾನೆ. ಈಗ ಚುನಾವಣೆಗಳೂ ಆಗಾಗ ಬರುತ್ತಿರುತ್ತವೆ. ಆಗ ಸೀರೆ, ಪಂಚೆ ಪಾತ್ರೆಗಳೂ ದೊರೆಯುತ್ತವೆ. ಹೀಗಿದ್ದಾಗ ಭ್ರಷ್ಟಾಚಾರದ ವಿರುದ್ಧ ಯಾರು ಸಿಡಿದೇಳಬೇಕು ? ಇಂತಹ ನಿರ್ವೀರ್ಯ ಸಮಾಜವನ್ನು ಸರಕಾರ ನಡೆಸುವವರು ಹುಟ್ಟುಹಾಕಿದ್ದಾರೆ. ಹೀಗಿದ್ದಾಗಲೂ ಭ್ರಷ್ಟಾಚಾರದ ನಿರ್ಮೂಲನೆಗೆ ದಾರಿ ಇದ್ದೇ ಇದೆ. ಹಿಂದೊಮ್ಮೆ ಬೆಳಗಾವಿ ಜಿಲ್ಲೆಯಲ್ಲಿ ರೈತಸಂಘ ಕ್ರಾಂತಿಕಾರಿ ಕೆಲಸ ಮಾಡಿತ್ತು. ಹಳ್ಳಿ ಗ್ರಾಮವನ್ನು ಯಾರೇ ಅಧಿಕಾರಿಗಳು ಪ್ರವೇಶ ಮಾಡಿದರೂ ಅಲ್ಲಿನ ರೈತ ಸಂಘಕ್ಕೆ ತಿಳಿಸಬೇಕೆಂದು ಬೋರ್ಡು ಹಾಕಿದ್ದರು. ಯಾವುದೋ ಅಧಿಕಾರಿ, ರಾಜಕೀಯ ವ್ಯಕ್ತಿಗಳು ಲಂಚ ಪಡೆದದ್ದನ್ನು ಕಂಡುಹಿಡಿದು ಅವರ ಮನೆ ಮುಂದೆ ಧರಣಿ ಕುಳಿತು ಲಂಚ ತಿಂದದ್ದನ್ನು ಕಕ್ಕಿಸುತ್ತಿದ್ದರು. ಹೀಗಾಗಿ ಲಂಚ ತಿನ್ನುವುದಕ್ಕೆ ಕೆಲಕಾಲ ಕಡಿವಾಣ ಬಿದ್ದಿತ್ತು. ಈಗ ರೈತಸಂಘಗಳೂ ಅನೇಕ ಹೋಳಾಗಿ ಹೋಗಿ ಶಕ್ತಿ ಕಳೆದುಕೊಂಡಿವೆ. ಇಷ್ಟೇ ಈಗ ಯುವ ಶಕ್ತಿ ಎಚ್ಚರಗೊಳ್ಳಬೇಕು. ಆ ಶಕ್ತಿ ಹೋರಾಟ ನಡೆಸಿದರೆ ಭ್ರಷ್ಟಾಚಾರ ನಿಯಂತ್ರಿಸಲು ಸಾಧ್ಯ. ಅದಕ್ಕೆ ಯೋಗ್ಯ ನಾಯಕತ್ವ ಬೇಕು. ಮತ್ತೊಂದು ವಿಚಾರ : ಈಗ ಭ್ರಷ್ಟಾಚಾರ ಕೂಪದಲ್ಲಿ ಮುಳುಗಿರುವ ಅನೇಕ ಪಕ್ಷಗಳು ನಿರ್ನಾಮವಾಗಬೇಕು. ಅದಕ್ಕಾಗಿ ಕಮ್ಯುನಿಸ್ಟ್ ಧೋರಣೆಯ ಯುವಶಕ್ತಿ ಮುಂದೆ ಬರಬೇಕು. ಇದು ಸಾಧ್ಯವೇ ? ಯಾಕೆಂದರೆ ಇಂದಿನ ಜನಾಂಗದವರನ್ನೆಲ್ಲವನ್ನೂ ನಮ್ಮ ಇಂದಿನ ರಾಜಕೀಯ ಶಕ್ತಿಗಳು ನರಸತ್ತವರನ್ನಾಗಿಸಿವೆ.

ಬೆಳಗಾವಿ **ಪುಂಡಲೀಕ ಪಾಟೀಲ**




ಮೇ ತಿಂಗಳ 'ಹೊಸತು' ಸಂಚಿಕೆಯ ಮುಖಪುಟದ ವರ್ಣಚಿತ್ರಗಳನ್ನು ಮುಂಡರಗಿಯ ಛಾಯಾಗ್ರಾಹಕ **ಶ್ರೀ ಮುತ್ತು ಹಾಳಕೇರಿ** ಅವರು ಒದಗಿಸಿದ್ದಾರೆ. **- ಸಂಪಾದಕ**

ಜೀತ ಪದ್ಧತಿಯು ಗುತ್ತಿಗೆ ಕಾರ್ಮಿಕ ಪದ್ಧತಿ ರೂಪದಲ್ಲಿ, ೨೦ನೆಯ ಶತಮಾನದಲ್ಲಿ ಮರಳುತ್ತಿರುವುದು ಕಾರ್ಮಿಕ ಸಂಘಟನೆ ಹಾಗೂ ಚಳವಳಿಯ ಅಸಮರ್ಥತೆಯ ಫಲವೇ ಎಂಬುದನ್ನು ವಾಮಪಂಥೀಯ ವಿಚಾರವಂತರು ಹಾಗೂ ಮುಖಂಡರು ವಿಮರ್ಶಿಸಿ ಯೋಗ್ಯ ನಿರ್ಣಯ ದೊಂದಿಗೆ ಮುನ್ನಡೆ ಇಡುವುದು ಅವಶ್ಯ. ವಿಷ್ಣು ನಾಯ್ಕರು 'ನೋವು ಸಾಯುವವರೆಗೂ ಕವನ ಸಾಯುವುದಿಲ್ಲ' ಎಂಬ ಮಾತಿನಿಂದ ಇಂದಿನ ವಿಚಾರವಾದಿಗಳನ್ನು, ದಲಿತ, ಬಂಡಾಯ ಸಾಹಿತಿಗಳನ್ನು ಅವರ ಕರ್ತವ್ಯದ ಬಗ್ಗೆ ಎಚ್ಚರಿಸುತ್ತಿದ್ದಾರೆ. ಕೋ. ಚೆನ್ನಬಸಪ್ಪನವರು ಹಿರಿಯ ಸಾಹಿತಿ, ನ್ಯಾಯವಾದಿ, ಭ್ರಷ್ಟಾಚಾರ ನಿರ್ಮೂಲನೆ ಅಸಾಧ್ಯ ಎಂದು ಕೈ ಚೆಲ್ಲಿದ್ದನ್ನು ಕಂಡು ನನ್ನಂಥ ಸಾಮಾನ್ಯನಿಗೆ ತುಂಬ ನೋವಾಗಿದೆ. ೬ ಲಕ್ಷ ಸರಕಾರಿ ನೌಕರರಲ್ಲಿ ೫ ಲಕ್ಷ ೫೦ ಸಾವಿರ ನೌಕರರು ಭ್ರಷ್ಟರು ಎಂಬುದನ್ನು ಕಂಡು ಸಮಾಜದಲ್ಲಿ ನೈತಿಕತೆಯೇ ಇಲ್ಲವೇ ಎಂದು ದುಃಖವಾಗುತ್ತದೆ. ಇದಕ್ಕೆ ಪರಿಹಾರವಿದೆ. ಮೊದಲು ದೇಶದ ಹಿತ ಬಯಸುವ ನಾಗರಿಕ ಯಾವುದೇ ಪರಿಸ್ಥಿತಿಯಲ್ಲಿ ಲಂಚ ಕೊಡಲಾರೆ ಹಾಗೂ ಸ್ವೀಕರಿಸಲಾರೆ ಎಂದು ಪ್ರತಿಜ್ಞೆ ಮಾಡಿ, ಮೊದಲು ರಾಜಕೀಯ ಧುರೀಣರ ಹಾಗೂ ಹಿರಿಯ ನೌಕರಶಾಹಿಯಲ್ಲಿ ಅಧಿಕಾರಿಗಳ ಕಪ್ಪುಕಾರ್ಯಗಳನ್ನು ಹುಡುಕಿ ಸಾಮಾನ್ಯನ ಮುಂದಿಡಬೇಕು. ಅಲ್ಲದೆ ಮಠಾಧೀಶರು ಸ್ವಾಮಿಗಳು ಭ್ರಷ್ಟ ರಾಜಕಾರಣಿಗಳ ಹಾಗೂ ಬಂಡವಾಳಶಾಹಿಗಳ ಸೇವೆಯನ್ನು ನಿರಾಕರಿಸಬೇಕು. ಇದರಿಂದ ಸುಮಾರು ೫೦ ಪ್ರತಿಶತ ಭ್ರಷ್ಟಾಚಾರ ಕಡಿಮೆಯಾದೀತು. ನಂತರ ಕೆಳವರ್ಗದ ನೌಕರರ ಲಂಚಖೋರತನವನ್ನು ಸಹಜವಾಗಿ ನಿಯಂತ್ರಿಸಬಹುದು. ಕನಕ ವರ್ತಮಾನದ ನಿರೂಪಣೆಗಳು ಲೇಖನದಲ್ಲಿ ಲೇಖಕರು ಪೂರ್ವಗ್ರಹ ಪೀಡಿತರಾಗಿದ್ದಾರೆ ಎನ್ನುವ ಭಾವನೆ ಮೂಡದೆ ಇರದು. ಕನಕನ ಜೀವನಕ್ಕೆ ಅನೇಕ ಆಯಾಮಗಳು. ಅಂತಹ ಶ್ರೇಷ್ಠ ಸಂತಕವಿಯನ್ನು ೨೧ನೆಯ ಶತಮಾನದ ಮೌಲ್ಯ ಮಾನದಂಡನೆಯಿಂದ ನೋಡಲಾಗದು. ಹಾಗೆ ಮಾಡಿದಲ್ಲಿ ಅದು ನಾವು ಅವನಿಗೆ ಮಾಡುವ ಕ್ಷಮಿಸಲಾರದ ಅಪರಾಧವಾದೀತು. ಇನ್ನು ಗೋವಿಂದ ಪಾನ್ಸರೆಯವರ ಕಿವಿಮಾತು. ''ಅರ್ಥೈಸುವುದು ಹಾಗೂ ಬದಲಾವಣೆ'' ಬೇರೆ ಬೇರೆಯಾದರೂ ಮೊದಲನೆಯದರ ಅಭಾವದಲ್ಲಿ ಎರಡನೆಯದನ್ನು ಸಾಧಿಸುವುದು ಅಸಾಧ್ಯ ಎಂಬುದು ನಿಚ್ಚಳ ಸತ್ಯ. ಮೀಸಲಾತಿಯು ಸರಕಾರ, ಪಾರ್ಟಿ ಕೊಡುವ ಭಿಕ್ಷೆ ಅಲ್ಲ, ಅದು ಅಜೆಂಡಾವೂ ಅಲ್ಲ, ಅದು ಸಮಾಜವು ತನ್ನ ಅಂಗದ ಇನ್ನೊಂದು ಅಂಗಕ್ಕೆ ಕೊಟ್ಟ ಪ್ರಾತಿನಿಧ್ಯ ಇದು ಸಾಮಾಜಿಕ ಹೊಣೆಯೂ ಹೌದು. ಜೊತೆಗೆ ಮೀಸಲಾತಿ ಪಡೆದು ಮುಂದೆ ಬಂದವರಿಗೆ ಅವರ ಕರ್ತವ್ಯವನ್ನು ನೆನಪಿಸುತ್ತಿದ್ದಾರೆ, ಲೇಖಕರು.

ಮುಂಬಯಿ **ಹ. ಶ್ರೀ. ಆಡೂರ**

## ಬದುಕು ಮೂರಾಬಟ್ಟೆ!

ಮೇ ೧ರಂದು ಕಾರ್ಮಿಕರ ದಿನಾಚರಣೆ ಆಗುತ್ತಲೇ ಇರುತ್ತದೆ. ಪ್ರತಿವರ್ಷ ನೌಕರರಿಗೆ ಒಂದು ದಿವಸದ ರಜೆ ಬಂತೆಂದು ಸಂತಸ.

ಅದು ಬಿಟ್ಟರೆ ಕಾರ್ಮಿಕರ ಬದುಕಲ್ಲಿ ಯಾವುದೇ ಸುಧಾರಣೆ ಎನ್ನುವುದು ಬಂದಿಲ್ಲ!

ಅಂತಹ ಸಂದರ್ಭವನ್ನು ಮೇ ಸಂಚಿಕೆಯ ಮುಖಪುಟ ಸೂಚ್ಯವಾಗಿ ತಿಳಿಸುತ್ತಿದೆ.

ನ್ಯಾಯಾಧೀಶರಾಗಿದ್ದ ಕೋ. ಚೆನ್ನಬಸಪ್ಪ ಅವರೇ ಭ್ರಷ್ಟಾಚಾರ ನಿರ್ಮೂಲನೆ ಅಸಾಧ್ಯ ಎಂದು ಹೇಳಿದರೆ ಗತಿಯೇನು? ಆದರೂ ಭ್ರಷ್ಟಾಚಾರ ನಿರ್ಮೂಲನೆ ಯೆಂಬುದು ಹಲವರಿಗೆ ಇನ್ನು ಕನಸಾಗಿಯೇ ಉಳಿದಿದೆ. ಕೋ. ಚೆ. ಅವರು ನಿರಾಶಾ ನಿಟ್ಟುಸಿರನ್ನು ಬಿಟ್ಟಿದ್ದಾರೆ. ಮುಂದೊಂದು ದಿವಸ ಒಳ್ಳೆಯ ದಿನಗಳು ಬಂದರೂ ಬರಬಹುದು, ಕಾದು ನೋಡೋಣ.

ಕೆ. ಕೆ. ನಾಯರ್‌ರವರ ಅನುವಾದ 'ತೆಯ್ಯಂ' ಕೇರಳದ ಕಲಾಪ್ರಕಾರವನ್ನು ಕಥಾರೂಪದಲ್ಲಿ ಅನಾವರಣಗೊಳಿಸಿದೆ.

ಮೈಸೂರು ವೀಣಾ ಪರಂಪರೆಯಲ್ಲಿ ಎಂ. ಜೆ. ಶ್ರೀನಿವಾಸ ಅಯ್ಯಂಗಾರರ ಸಾಧನೆ ಗಮನಾರ್ಹ. ಪ್ರೊ|| ಶೈಲಜಾ ವೇಣುಗೋಪಾಲ್ ಅವರ ಲೇಖನ ಗಮನಾರ್ಹವಾಗಿದೆ.

ಯಾಕೋ ಕಡೆಯ ಪುಟದ ಜಯಲಕ್ಷ್ಮಿ ಅವರ ಚಿತ್ರಗಳು ಬಹಳ ಗಾಢವಾಗಿ ಮೂಡಿ ಬಂದು, ಅದರ ಸೊಗಸನ್ನು ಸವಿಯಲು ಸಾಧ್ಯವಾಗಲಿಲ್ಲ.

ಮೈಸೂರು ***ಕೊ. ಸು. ನರಸಿಂಹಮೂರ್ತಿ***

''ಭ್ರಷ್ಟಾಚಾರ ನಿರ್ಮೂಲನೆ ಅಸಾಧ್ಯ'' – ಎಂದೆಂಬ ಸ್ಪಷ್ಟ ನಿಲುವಿನ ಹೇಳಿಕೆ ಕಂಡುದೇ ತಡ ತಡೆಯಲಾರದ ಕೋಪ ಪ್ರಲಾಪಗಳೆಲ್ಲವೂ ಹದಮೀರಿ ಆಲಾಪಿಸ ಲಾರಂಭಿಸಿದುದೂ ನಿಜಕ್ಕೂ ಹೌದು – ಭವಿಷ್ಯತ್ತಿನ ಉನ್ನತಿಯಲ್ಲಿ ಚಿಕ್ಕಂದಿನಿಂದಲೇ ಸೋಲು-ಗೆಲುವುಗಳ ವಿಚಾರದಲ್ಲಿ ಆಶಾವಾದಿಯಾಗಿಯೇ ಮುಂದುವರಿಯು ತ್ತಿರುವ ನನಗೆ ಈ ರೀತಿಯ ಹೇಳಿಕೆ ತಾಳಿಕೊಳ್ಳಲು ಸಾಧ್ಯ ವಾಗುವದಾದರೂ ಹೇಗೆ; ಒಂದರೆಕ್ಷಣ ತಬ್ಬಿಬ್ಬಾದುದು ಸತ್ಯವಾದರೂ ಯಾರದಿದು ಅಂಬೋಣವೆಂದು ಗೋಣೆತ್ತಿ ನೋಡಿದರೆ ಅಲ್ಲಿ ಕಾಣುತ್ತಿರುವುದು ನಿವೃತ್ತ ನ್ಯಾಯಾಧೀಶ ಕೋ. ಚೆನ್ನಬಸಪ್ಪರ ಅಂಕಿತ. ಆಗ ಜರ್ರನೆ ಇಳಿದೇಬಿಟ್ಟಿತು ಒಮ್ಮೆಲೇ ಎಲ್ಲಾ ಏರಿಳಿತಗಳು ಕೂಡ. ಒಂದಿಗೇ ಅವಸರದ ನಡೆ ಹಿಡಯಲೇ ಬೇಡ ಎಂಬ ಮುಕ್ತಕದ ತುಣುಕು.

ಅಪ್ಪಟ ಗಾಂಧಿತತ್ವ ಪರಿಪಾಲಕರು ಸತ್ಯಧರ್ಮ ನಡತೆಯ ನ್ಯಾಯಾಧೀಶರೆಂಬ ಹೆಗ್ಗಳಿಕೆ ಗಳಿಸಿದವರು ಎಂದಿಗೂ ಅನ್ಯಾಯ ಅನಿಷ್ಟಾರಕಗಳಲ್ಲಿ ರಾಜಿ ಮಾಡಿಕೊಳ್ಳದ ವರೆಂಬ ನಿಷ್ಠೆಯ ಈ ಹಿರಿಯ ಹಿರಣ್ಣಯ್ಯ ಆಸಕ್ತಿದಾಯಕವಾದ ಪ್ರಾಮಾಣಿಕ ವಿವರಣೆ ನೀಡಿ ಜನಮನ ಗೆಲ್ಲುವಲ್ಲಿ ಸಫಲತೆ ಕೋರಿಕೊಂಡಿದ್ದಾರೆ, ಮೇಲಾಗಿ ಅಸಾಧ್ಯ ಎಂಬ ಶಬ್ದವನ್ನು ಬದಲಾಯಿಸಲು ನಾವೇನು ಮಾಡಬಹುದೆಂಬ ಸುಳಿವಿರುವ ದಾರಿಯನ್ನೂ ಸೂಕ್ಷ್ಮವಾಗಿ ಹೇಳಿ ಓದುಗರನ್ನು ಚಿಂತಕರ ಸಾಲಿಗೆ ಆಹ್ವಾನಿಸಿದ್ದಾರೆ.

'ತೆಯ್ಯಂ' ಎಂಬ ಕೆ. ಎಂ. ಕೆ. ಕುಂಞ್ಞಬ್ದುಲ್ಲರಿಂದ ಮಲಯಾಳಂನಲ್ಲಿ ರಚಿತಗೊಂಡು ಕೆ. ಕೆ. ನಾಯರ್ ರವರು ಅನುವಾದಿಸಿದ ದೈವನೇಮವೆನ್ನುವ ಕೇರಳದ ಆರಾಧನೆಯ ಅನುಕರಣೆಯೆ ಒಂದು ಘಟನೆಯು ಕಥೆಯಾಗಿ ಕಾಣಿಸಿಕೊಂಡು ಕೋಮುಸೌಹಾರ್ದತೆಗೆ ಸಂಚಿಕೆ ಸಾಕ್ಷಿ ಅನ್ನಿಸಿತು. ಒಂದಿಗೇ ಕಾಸರಗೋಡಿನಲ್ಲಿ ವರ್ಷಂಪ್ರತಿ ಇಂದಿಗೂ ಆಚರಣೆಯಲ್ಲಿರುವ ಹಿಂದೂ-ಮುಸ್ಲಿಂ ಎರಡೂ ಪಂಗಡಗಳೊಂದಾಗಿ ಕೂಡಿ ಜಯಭೇರಿ ಬಾರಿಸಲು ಕಾರಣ ಎನ್ನಿಸಿದ ಆರಿಕ್ಕಾಡಿಯ ಆಲಿ ಭೂತದ ಆರಾಧನಾ ವರದಿಯೂ ನೆನಪಿಗೆ ಬಂತು.

ಅಮ್ಮನ ದಿನಾಚರಣೆಯ ನೆನಪಿಗೆ ಕಾರಣವೆನ್ನಿಸಿದುದು ಆರು ಶಬ್ದಗಳನ್ನೊಳಗೊಂಡ ಹಿಂಡಲಗಿಯ ಪುಂಡಲೀಕ ಪಾಟೀಲರ ಅತೀ ಚಿಕ್ಕ ಕವನ, 'ಹೊಸ ಅಂಗಿ' ಎಂಬ ಒಂದೇ ವಾಕ್ಯದ ಹೇಳಿಕೆ 'ಅಂಡದೊಳಗೆ ಬ್ರಹ್ಮಾಂಡ' ಎಂಬಂತೆ ಭಾರತೀಯ ಸಂಸ್ಕೃತಿ ಆರ್ಥಿಕ ಸ್ಥಿತಿಗತಿಗಳಿಗೂ ಕೀಲಿಕೈ ಅಂದರೂ ಹೌದೆಂದು ಒಪ್ಪದಿರಲು ಸಾಧ್ಯವಿಲ್ಲ. ಕಮ್ಯುನಿಸಂ ಮಹಾನುಭಾವ ಗೋವಿಂದ ಪಾನ್ಸರೆಯವರ ಸಂದರ್ಶನ ನೈಜವಾಗಿದೆ ಅನಿಸಿದರೆ ಡಾ|| ಬಿ. ಎಸ್. ಶೈಲಜಾರವರು ಗ್ರಹಗಳ ಮುಖಾಮುಖಿ ಖಗೋಳ ಗ್ರಹಣೀಕರಣಕ್ಕೆ ಆಸಕ್ತಿ ಹೂಡಿತು.

ಕಾಸರಗೋಡು ***ಕೀರಿಕ್ಕಾಡು ವನಮಾಲ ಕೇಶವ ಭಟ್ಟ***

## ಮಾಹಿತಿ ಹಕ್ಕು ಕಾರ್ಯಕರ್ತರ ಕಾಯಕ

ಮಾಹಿತಿ ಹಕ್ಕು ಕಾಯಿದೆ ೨೦೦೫ರಲ್ಲಿ ಜಾರಿಯಾದಾಗ ಇದರಿಂದ ಏನಾದೀತೆಂದು ಮೂಗುಮುರಿದವರು ಹಲವರು. ಅವರೆಲ್ಲರೂ ಇಂದು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವ ಪ್ರಸಂಗ ಉಂಟಾಗಿದೆ. ಇದಕ್ಕೆ ಕಾರಣ ಮಾಹಿತಿ ಹಕ್ಕು ಕಾರ್ಯಕರ್ತರ ಛಲ ಬಿಡದ ಕಾಯಕದಿಂದಾಗಿ ಒಂದಾದ ಮೇಲೊಂದರಂತೆ ಹಗರಣಗಳು ಬಯಲಾಗುತ್ತಿರುವುದು. ಆದರೆ ಮಾಹಿತಿ ಕಾರ್ಯಕರ್ತರು ತಮ್ಮ ನಿಸ್ವಾರ್ಥ ಜನಪರ ಕೆಲಸಕ್ಕಾಗಿ ಜೀವವನ್ನೇ ಪಣಕ್ಕಿಡಬೇಕಾಗಿದೆ.

ಅಂತಹ ನೂರಾರು ಕಾರ್ಯಕರ್ತರಲ್ಲಿ ಛತ್ತೀಸ್‌ಗಢದ ರಾಯಘರ್ ಜಿಲ್ಲೆಯ ರಮೇಶ್ ಅಗರವಾಲ್ ಒಬ್ಬರು. ಖಾಸಗಿ ಗಣಿ ಕಂಪೆನಿ ಮತ್ತು ವಿದ್ಯುದುತ್ಪಾದನಾ ಕಂಪೆನಿಗಳಿಂದಾಗಿ ತಮ್ಮ ಸರ್ವಸ್ವವನ್ನೂ ಕಳೆದುಕೊಂಡ ಅಸಹಾಯಕರ ಹಕ್ಕುಗಳ ರಕ್ಷಣೆಗಾಗಿ ಅವರ ಹೋರಾಟ.

ಜನಪರ ಕಾಯಕಕ್ಕೆ ರಮೇಶ್ ಅಗರವಾಲರು ಧುಮುಕಿದ್ದು ೧೯೯೦ರಲ್ಲಿ, ಸಾಕ್ಷರತಾ ಆಂದೋಲನ ರಾಯಘರದಲ್ಲಿ ಶುರುವಾದಾಗ. ಅದು ೩೦,೦೦೦ ಸ್ವಯಂ ಸೇವಕರ ಮೂಲಕ ಜಿಲ್ಲೆಯ ಮೂರು ಲಕ್ಷ ಅನಕ್ಷರಸ್ಥರಿಗೆ ಅಕ್ಷರಜ್ಞಾನ ನೀಡುವ ಆಂದೋಲನ. ಯುವ ಸ್ವಯಂಸೇವಕರ ಉತ್ಸಾಹದಿಂದಾಗಿ ಆಂದೋಲನ ಯಶಸ್ವಿಯಾಯಿತು. ಜೊತೆಗೆ, ಅದು ಕೆಲವರ ಬದುಕನ್ನೇ ಬದಲಾಯಿಸಿತು. ಅಂಥವರಲ್ಲೊಬ್ಬರು ರಮೇಶ್ ಅಗರವಾಲ್.

ಅನಂತರ, ಹಲವು ಉತ್ಸಾಹಿ ಯುವಜನರ ಜೊತೆ ಸೇರಿ ಅವರು ಸ್ಥಾಪಿಸಿದ ಸಂಸ್ಥೆ 'ಲೋಕಶಕ್ತಿ' ಶೋಷಣೆಗೆ ಒಳಗಾದ ಬಡಜನರಿಗೆ ಗೌರವದ ಬದುಕು ಕಟ್ಟಿ ಕೊಡುವುದು ಅದರ ಆಶಯ. ಹೊಸದಾಗಿ ಪಸರಿಸಿದ ಸಾಕ್ಷರತೆಯ ಆಧಾರದಿಂದ ಜನಸಮುದಾಯಗಳಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವು ಮೂಡಿಸುವುದು ಮತ್ತು ಅನ್ಯಾಯಗಳ ವಿರುದ್ಧ ಪ್ರಜಾಸತ್ತಾತ್ಮಕ ವಿಧಾನಗಳಿಂದ ಪ್ರತಿಭಟಿಸುವುದು ಆ ಸಂಸ್ಥೆಯ ಕಾರ್ಯಯೋಜನೆ. ಅದನ್ನು ಕಾರ್ಯಗತಗೊಳಿಸುವಾಗ ಗಳಿಸಿದ ಅನುಭವವೇ ರಮೇಶ್ ಅಗರವಾಲ್ ಮತ್ತು ಸಾಕ್ಷರತಾ ಆಂದೋಲನದ ಸಂಗಾತಿ ರಾಜೇಶ್ ತ್ರಿಪಾಠಿಗೆ ೨೦೦೫ರಲ್ಲಿ 'ಜನ ಚೇತನಾ ಮಂಚ್' ಸ್ಥಾಪಿಸಲು ಪ್ರೇರಣೆ. ಛತ್ತೀಸ್‌ಗಢದಲ್ಲಿ ಆದಾಗಲೇ ಬೃಹತ್ ಕೈಗಾರಿಕಾ ಕಂಪೆನಿಗಳು ನೆಲೆಯೂರಿದ್ದವು. ಸಾವಿರಾರು ಎಕರೆ ಅರಣ್ಯ ಹಾಗೂ ಕೃಷಿ ಭೂಮಿಯನ್ನು ಖರೀದಿಸಿದ್ದವು. ಅಲ್ಲೆಲ್ಲ ಕಲ್ಲಿದ್ದಲು ಗಣಿಗಳು, ಉಷ್ಣವಿದ್ಯುತ್ ಉತ್ಪಾದನಾ ಸ್ಥಾವರಗಳು ಹಾಗೂ ಪೂರಕ ಕೈಗಾರಿಕೆಗಳು ಬಿರುಸಿನಿಂದ ಕಾರ್ಯವೆಸಗುತ್ತಿದ್ದವು. ಇದರಿಂದಾಗಿ ಪ್ರಾಕೃತಿಕ ಸಂಪನ್ಮೂಲಗಳ ಲೂಟಿ, ರೈತರನ್ನು ಬಲ ಪ್ರಯೋಗಿಸಿ ಒಕ್ಕಲೆಬ್ಬಿಸುವುದು, ತಲೆತಲಾಂತರದಿಂದ ಬೆಟ್ಟಗಳಲ್ಲಿ ಕಾಡುಮೇಡುಗಳಲ್ಲಿದ್ದ ಅರಣ್ಯವಾಸಿಗಳ ಬದುಕಿನ ಆಸರೆಯಾದ ನೆಲೆಗಳ ಧ್ವಂಸ – ಇವೆಲ್ಲ ಕಾನೂನುಬಾಹಿರವಾಗಿ ಜರುಗುತ್ತಿದ್ದವು.

ಆದ್ದರಿಂದ 'ಜನ ಚೇತನಾ ಮಂಚ್'ದ ಮೂಲಕ ರಮೇಶ್ ಮತ್ತು ರಾಜೇಶ್ ಈ ಅನ್ಯಾಯಗಳ ವಿರುದ್ಧ ಕಾರ್ಯಪ್ರವೃತ್ತರಾದರು. ಅವರು ಬಳಸಿದ ಅಸ್ತ್ರ 'ಮಾಹಿತಿ ಹಕ್ಕು ಕಾಯಿದೆ.' ಧನಬಲದಿಂದ ಬೀಗುತ್ತಿದ್ದ ಪಟ್ಟಭದ್ರ ಹಿತಾಸಕ್ತಿಗಳನ್ನು ಇವರ ಅಹಿಂಸಾತ್ಮಕ ಮಾಹಿತಿ ಹಕ್ಕು ಅರ್ಜಿಗಳು ಅಲುಗಾಡಿಸಿದವು. ಸಾವಿರಾರು ಎಕರೆ ಅರಣ್ಯ ಹಾಗೂ ಕೃಷಿಭೂಮಿಯನ್ನು ಕಾನೂನು ಪ್ರಕಾರ ಪರಿವರ್ತನೆ ಮಾಡದೆ, ಅಲ್ಲಿ ಗಣಿಗಾರಿಕೆ ಮಾಡಲಾಗಿತ್ತು. ಗ್ರಾಮಪಂಚಾಯತಿಗಳ ಜೊತೆ ಸಮಾಲೋಚನೆ ಕಡ್ಡಾಯ; ಆದರೆ ಅದನ್ನು ನಡೆಸಿರಲೇ ಇಲ್ಲ ಅಥವಾ ನಡೆಸಲಾಗಿದೆಯೆಂದು ಸುಳ್ಳು ದಾಖಲೆ ಸೃಷ್ಟಿಸಲಾಗಿತ್ತು. ಜಮೀನು ಮತ್ತು ಅಲ್ಲಿದ್ದ ಮರಗಳಿಗೆ ತೀರಾ ಕಡಿಮೆ ಬೆಲೆ ಕಟ್ಟಿ, ಮಾಲೀಕರಿಗೆ ನೀಡಬೇಕಾದ ಪರಿಹಾರ ತೀರಾ ಕಡಿಮೆ ಮಾಡಲಾಗಿತ್ತು. ಖಾಸಗಿ ಕಂಪೆನಿಗಳ ಲಾಭಕ್ಕಾಗಿ ಕಾನೂನಿನ ಹಾಗೂ ಸ್ವಾಧೀನಪಡಿಸುವ ಪ್ರಕ್ರಿಯೆಗಳನ್ನು ತಿರುಚಲಾಗಿತ್ತು. ಪರಿಶಿಷ್ಟ ಪಂಗಡಗಳ ಜನರಿಂದ ಜಮೀನು ಖರೀದಿಗೆ ನಿಷೇಧವಿದೆ; ಅದನ್ನು ಉಲ್ಲಂಘಿಸಿ ಅವರ ಜಮೀನುಗಳನ್ನೂ ಸ್ವಾಧೀನಪಡಿಸಿಕೊಳ್ಳಲಾಗಿತ್ತು. ಇವರಿಬ್ಬರು ಮಾಹಿತಿ ಹಕ್ಕು ಕಾಯಿದೆ ಮೂಲಕ ನಡೆಸಿದ ಹೋರಾಟಕ್ಕೆ ಮೊದಲ ಜಯ ಸಿಕ್ಕಿದ್ದು ರಬು ಗ್ರಾಮದಲ್ಲಿ - ಕಿರು ಅಣೆಕಟ್ಟು ಯೋಜನೆಯ ನಿರ್ವಸಿತರಿಗೆ ಹೆಚ್ಚಿನ ಪರಿಹಾರ ಒದಗಿಸಿದಾಗ. ಈ ಪ್ರಕರಣದಲ್ಲಿ ಹೆಕ್ಟೇರಿಗೆ ಕೇವಲ ರೂ. ೧೦,೦೦೦/- ಎಂದು ನಿಗದಿಯಾಗಿದ್ದ ಪರಿಹಾರದ ಮೊತ್ತ ಹೆಕ್ಟೇರಿಗೆ ರೂ. ೧೦ ಲಕ್ಷಕ್ಕೆ ಏರಿಸಲ್ಪಟ್ಟಿತು!

ಇದೆಲ್ಲದರಿಂದಾಗಿ ಖಾಸಗಿ ಕಂಪೆನಿಗಳು ಹಾಗೂ ಶಾಮೀಲಾದ ಸರಕಾರಿ ಅಧಿಕಾರಿಗಳ ಕಣ್ಣು ಕೆಂಪಾಯಿತು. ಈ ಹೋರಾಟ ನಿಲ್ಲಿಸುವ ಹುನ್ನಾರ ಸಿದ್ಧವಾಯಿತು. ಮೊದಲು ಇವರಿಗೆ ಆಮಿಷ ಒಡ್ಡಿದರು. ದೊಡ್ಡ ಸಾಗಾಣಿಕೆ ಕಂಟ್ರಾಕ್ಟುಗಳನ್ನು ಹಾಗೂ ದೊಡ್ಡ ಹುದ್ದೆಗಳನ್ನು

### – ತಿದ್ದುಪಡಿ –

ಮೇ, ೨೦೧೩ರ ಸಂಚಿಕೆಯ ಪುಟ ೧೩ರಲ್ಲಿ ಶ್ರೀ ಎಸ್. ಎಸ್. ಹೊಸಮನಿ ಅವರಿಗೆ ಸಲ್ಲಿಸಿದ ಅಭಿನಂದನೆ ವಿಭಾಗದಲ್ಲಿ ಅಚಾತುರ್ಯದಿಂದಾಗಿ ದಿನಾಂಕವು ೨೮.೦೭.೧೦೧೨ ಎಂದು ತಪ್ಪಾಗಿ ಮುದ್ರಿತವಾಗಿದೆ. ಅದನ್ನು ೨೮.೦೭.೨೦೧೨ ಎಂದು ಓದಿಕೊಳ್ಳಬೇಕಾಗಿ ವಿನಂತಿ.

ನೀಡುವ ಆಮಿಷ. ಇವರ ಕೆಲವು ಸಂಗಾತಿಗಳು ಇಂತಹ ಆಮಿಷಗಳಿಗೆ ಬಲಿಯಾದರು. ಆದರೆ ರಮೇಶ್ ಮತ್ತು ರಾಜೇಶ್ ತಮ್ಮ ಹೋರಾಟ ಮುಂದುವರಿಸಿದಾಗ ಅವರಿಗೆ ಒಂದರ ಮೇಲೊಂದು ಬೆದರಿಕೆಗಳು. ರಮೇಶ್ ತನ್ನ ಹೊಟ್ಟೆಪಾಡಿಗಾಗಿ ನಡೆಸುತ್ತಿದ್ದ ಸೈಬರ್ ಕೆಫೆಗೆ ನುಗ್ಗಿ ಹಾನಿ, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದವರ ಮೇಲೆ ದೈಹಿಕ ದಾಳಿ, ರಾಜೇಶರ ಮೋಟಾರು ಸೈಕಲಿಗೆ ಟ್ರಕ್ಕುಗಳನ್ನು ಡಿಕ್ಕಿ ಹೊಡೆಸಿದ ಪ್ರಸಂಗವೂ ನಡೆಯಿತು. ಈ ಬಗ್ಗೆ ಪೊಲೀಸರಿಗೆ ದೂರು ನೀಡಿದರೆ ಅವರು ಅವನ್ನು ದಾಖಲಿಸಲಿಲ್ಲ, ಒಂದೆರಡು ಬಾರಿ ದಾಖಲಿಸಿದರೂ ಪರಿಣಾಮ ಶೂನ್ಯ. ಆದರೆ ಖಾಸಗಿ ಕಂಪೆನಿಯ ಉದ್ಯೋಗಿಯೊಬ್ಬ ಇವರ ವಿರುದ್ಧ 'ಪ್ರಾಣ ಬೆದರಿಕೆ ಒಡ್ಡಿದರು' ಎಂಬ ಸುಳ್ಳು ದೂರು ನೀಡಿದಾಗ ಇವರಿಬ್ಬರನ್ನೂ ಬಂಧಿಸಿ (೨೦೧೧ರಲ್ಲಿ) ಮೂರು ತಿಂಗಳು ಜೈಲಿನಲ್ಲಿ ಇರಿಸಲಾಯಿತು. ಅಂತಿಮವಾಗಿ, ಇವರಿಬ್ಬರೂ ಸುಪ್ರೀಂ ಕೋರ್ಟಿನಿಂದ ಜಾಮೀನು ಪಡೆದು, ಜೈಲಿನಿಂದ ಹೊರಬಂದರು. ಆದರೆ ರಮೇಶ್ ಅಗರವಾಲ್ ಮತ್ತು ರಾಜೇಶ್ ತ್ರಿಪಾಠಿ ಎದೆಗುಂದಿಲ್ಲ. ''ಇವೆಲ್ಲ ಬಡ ಜನರಿಗಾದ ಅನ್ಯಾಯದ ವಿರುದ್ಧ ನಡೆಸುವ ಹೋರಾಟ. ಅವರ ಕೈಬಿಡಲಾಗದು. ಹೋರಾಟ ಮುನ್ನಡೆಯಲೇಬೇಕು. ಏನಾಗಲಿದೆಯೋ ಅದಾಗಲಿ'' ಎನ್ನುತ್ತಾರೆ ಅವರು.

ಇಂಥವರ ರಕ್ಷಣೆಗಾಗಿ ನಮ್ಮ ದೇಶದಲ್ಲಿ ಯಾವುದೇ ಕಾಯಿದೆಗಳಿಲ್ಲ, ಪ್ರಬಲ ಜನಾಭಿಪ್ರಾಯವೇ ಅವರಿಗೆ ರಕ್ಷಣೆ. ಹೆಚ್ಚೆಚ್ಚು ಜನರು ಮಾಹಿತಿ ಹಕ್ಕು ಕಾಯಿದೆ ಬಳಸ ತೊಡಗಿದರೆ, ಪರಿಸ್ಥಿತಿ ಬದಲಾಗಲು ಸಾಧ್ಯ. ಅಂದರೆ ಪಟ್ಟಭದ್ರ ಶಕ್ತಿಗಳ ಕಾನೂನುಬಾಹಿರ ಚಟುವಟಿಕೆಗಳನ್ನು ಬಹಿರಂಗಪಡಿಸುವ ಮಾಹಿತಿಯನ್ನು ದೇಶದ ವಿವಿಧ ಭಾಗಗಳ ಸಾವಿರಾರು ಪ್ರಜೆಗಳು ಮಾಹಿತಿ ಹಕ್ಕು ಅರ್ಜಿ ಬರೆದು ಕೇಳುವ ಕಾರ್ಯತಂತ್ರದ ಬಳಕೆ.

ಮಂಗಳೂರು **ಅಡ್ಡೂರು ಕೃಷ್ಣ ರಾವ್**

## ಆಧುನಿಕ ಶಿಕ್ಷಣ ವ್ಯವಸ್ಥೆ – ಕೆಲವು ಚಿಂತನೆಗಳು

ಇತ್ತೀಚಿನ ದಿನಗಳಲ್ಲಿ ಇಂದಿನ ಶಿಕ್ಷಣ ವ್ಯವಸ್ಥೆಯ ಬಿಕ್ಕಟ್ಟಿನ ಕುರಿತು ಕಳವಳ ವ್ಯಕ್ತಪಡಿಸುವುದು ಸಾಮಾನ್ಯವಾಗಿದೆ. ನಮ್ಮ ಶಾಲೆಗಳು, ಕಾಲೇಜುಗಳು ಮತ್ತು ವಿಶ್ವವಿದ್ಯಾಲಯಗಳು ವಿದ್ಯಾರ್ಥಿಗಳನ್ನು ಸ್ಪರ್ಧಾತ್ಮಕ 'ನೌಕರಿ ಮಾರುಕಟ್ಟೆಗೆ' ಅಭ್ಯರ್ಥಿಗಳನ್ನಾಗಿ ತಯಾರುಮಾಡಿ ಕಳುಹಿಸುವ ಕಾರ್ಯಕ್ಕೆ ಮಾತ್ರ ಸೀಮಿತವಾಗಿವೆ ಎಂಬ ಆರೋಪ ಕೂಡ ಕೇಳಿ ಬರುತ್ತಿದೆ. 'ಆಧುನಿಕ ಶಿಕ್ಷಣ ವ್ಯವಸ್ಥೆ'ಯು ಮನುಷ್ಯನ ಅಂತರಾಳಕ್ಕೆ ಸಂಬಂಧಿಸಿದ ಹಲವು ಮುಖ್ಯ ಸವಾಲು ಗಳನ್ನು ಸ್ವೀಕರಿಸುವುದಿಲ್ಲ. ಈ ಬಿಕ್ಕಟ್ಟಿಗೆ ಹಲವು ಆಯಾಮ ಗಳಿವೆ. ಪ್ರಖ್ಯಾತ ಅಮೆರಿಕನ್ ಸಮಾಜ ವಿಜ್ಞಾನಿ ಹಾಗೂ ರಾಜಕೀಯ ಚಿಂತಕರಾದ ನೋಮ್ ಚೋಮ್‌ಸ್ಕಿ ಅವರ ಪ್ರಕಾರ ಇಡೀ ಶಿಕ್ಷಣ ವ್ಯವಸ್ಥೆಗೆ ಅಷ್ಟೇನೂ ಉದಾತ್ತವಲ್ಲದ ಖಚಿತ ರಾಜಕೀಯ ಉದ್ದೇಶಗಳಿವೆ.

ಚೋಮ್‌ಸ್ಕಿಯವರ ವಿಶೇಷ ಆತಂಕ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಆಯ್ಕೆ ಮಾಡಿಕೊಂಡಿರುವ ದೇಶಗಳಲ್ಲಿ ಬೇರೂರಿರುವ 'ಆಧುನಿಕ ಶಿಕ್ಷಣ ವ್ಯವಸ್ಥೆ'ಯ ಕುರಿತಾಗಿದೆ. ಆಳವಾದ ಅಧ್ಯಯನ ಮತ್ತು ವಿಮರ್ಶಾತ್ಮಕ ಪರಿಶೀಲನೆಯ ನಂತರ ಅವರು ತಮ್ಮ ಗ್ರಂಥದಲ್ಲಿ, ವ್ಯವಸ್ಥೆಯ ಕುರಿತು ಹಲವು ಗಂಭೀರ ಚಿಂತನೆಗಳನ್ನು ದಾಖಲಿಸಿದ್ದಾರೆ. ಇಡೀ ವ್ಯವಸ್ಥೆ ವಸ್ತುನಿಷ್ಠವಾಗಿಲ್ಲ, ಅಂತೆಯೇ ಆಳುವ ವರ್ಗದ ಹಿತಾಸಕ್ತಿಗಳಿಗೆ ಹೊರತಾಗಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಆಧುನಿಕ ಶಿಕ್ಷಣ ವ್ಯವಸ್ಥೆಯ ಈ ಆಯಾಮ ಜನಸಾಮಾನ್ಯರ ಗ್ರಹಿಕೆಗೆ ನಿಲುಕದ ವಿಷಯವಾಗಿದೆ.

ನಮ್ಮೀ ಶಿಕ್ಷಣ ವ್ಯವಸ್ಥೆ ಪ್ರಜಾಪ್ರಭುತ್ವದ ಗುಣಗಾನ ಮಾಡುತ್ತಲೇ ಶೋಷಕ ವರ್ಗದ ಆಳ್ವಿಕೆಯನ್ನು ಸಮರ್ಥಿ ಸುತ್ತದೆ. ಸ್ಥಿತಿವಂತರ ಆಳ್ವಿಕೆಯಡಿ ವಿಜೃಂಭಿಸುತ್ತಿರುವ ಅಸಮಾನತೆಯನ್ನು ಗುರುತಿಸುವುದಿಲ್ಲ. ಶಾಲೆಗಳನ್ನು ಢೋಂಗಿ ರಾಷ್ಟ್ರೀಯತೆ ಮತ್ತು ಅಂಧ ದೇಶಾಭಿಮಾನವನ್ನು ವಿದ್ಯಾರ್ಥಿಗಳಲ್ಲಿ ಮೂಡಿಸಲು ಬಳಸಲಾಗುತ್ತಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ ಚೋಮ್‌ಸ್ಕಿ. ಉದ್ದೇಶಪೂರ್ವಕ ವಾಗಿ, ಸ್ಥಿತಿವಂತರ ಪ್ರಾಬಲ್ಯ ಮತ್ತು ಆಂತರಿಕ ವರ್ಗ ವಿರೋಧಾಭಾಸಗಳನ್ನು ಅಷ್ಟೇನೂ ಗಂಭೀರ ವಿಷಯಗಳಲ್ಲ ವೆಂದು ಬದಿಗೊತ್ತುತ್ತಾರೆ. ಏಕಪ್ರಕಾರದ ಬಲಿಷ್ಠ ರಾಷ್ಟ್ರವೆಂಬ ಮಿಥ್ಯೆಯನ್ನು ವೈಭವೀಕರಿಸುತ್ತಾರೆ. ಇಂತಹ ಪರಿಕಲ್ಪನೆ ಆಳುವ ವರ್ಗದ ಹಿತಾಸಕ್ತಿಗಳಿಗೆ ಪೂರಕವಾಗಿರುತ್ತದೆಂಬುದು ಸ್ಪಷ್ಟ.

ಚೋಮ್‌ಸ್ಕಿ ವ್ಯಾಖ್ಯಾನದ ಪ್ರಕಾರ, ಶಾಲೆಗಳು ವಿದ್ಯಾರ್ಥಿಗಳನ್ನು ಸಾಮಾಜಿಕ ಪರಿಸರದ ವಾಸ್ತವಿಕ ಮತ್ತು ವಿಮರ್ಶಾತ್ಮಕ ಮೌಲ್ಯಮಾಪನ ಮಾಡುವಂತೆ ಉತ್ತೇಜಿ ಸುವುದು ಅಪರೂಪ. ಹಾಗೆ ಮಾಡಿದಲ್ಲಿ, ವಿದ್ಯಾರ್ಥಿ ಗಳಲ್ಲಿ ಬಂಡಾಯ ಮನೋಭಾವ ಮೂಡುವ ಸಾಧ್ಯತೆಯ ಭಯ ಕಾಡುತ್ತದೆ. ಉಪಾಧ್ಯಾಯರು ಸಾಮಾಜಿಕ ರಚನೆ ಮತ್ತು ವ್ಯವಸ್ಥೆಯ ದಬ್ಬಾಳಿಕೆಯ ಕುರಿತು ಚರ್ಚಿಸಲು ಹಿಂಜರಿಯುತ್ತಾರೆ. ಆದರೆ, ಇತರೆ ದೇಶಗಳಲ್ಲಿ ಜನತೆಯನ್ನು ಕಾಡುವ ದಬ್ಬಾಳಿಕೆಯ ಕುರಿತು, ಅಂತೆಯೇ, ಅಸಮಾನತೆಯ ಕುರಿತು ಸಲೀಸಾಗಿ, ವ್ಯಾಪಕವಾಗಿ ಬಣ್ಣಿಸುತ್ತಾರೆ. ಇಂತಹ ನಮ್ಮ 'ಆಧುನಿಕ' ಮತ್ತು 'ಪ್ರಜಾಸತ್ತಾತ್ಮಕ' ಶಾಲೆಗಳು ರಾಜಕೀಯವಾಗಿ ತಟಸ್ಥವಾಗಿ ಕಾರ್ಯನಿರ್ವಹಿಸುವುದೆಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ.

ಶಾಲೆಗಳು, ವಿದ್ಯಾರ್ಥಿಗಳ ವೈಚಾರಿಕ ಮತ್ತು ವಿಮರ್ಶಾತ್ಮಕ, ಬೌದ್ಧಿಕ ಸಾಮರ್ಥ್ಯವನ್ನು ಕುಂಠಿತಗೊಳಿಸಿ, ಅವರಿಗೆ ಕೆಲವು 'ಅಧಿಕೃತ ಸತ್ಯ'ಗಳನ್ನು ಮಾತ್ರ ಬೋಧಿಸುತ್ತವೆ ಎಂದು ಚೋಮ್‌ಸ್ಕಿ ವಾದಿಸುತ್ತಾರೆ. ಸಾಮಾಜಿಕ ಮತ್ತು ರಾಜಕೀಯ ವಾಸ್ತವಿಕ ನೆಲೆಗಟ್ಟಿನ ಕೂಲಂಕಷ ಪರಿಶೀಲನೆ ಯಿಂದ ವಿದ್ಯಾರ್ಥಿಗಳನ್ನು ದೂರವಿರಿಸುವಲ್ಲಿ ಶಾಲೆಗಳು ಪ್ರಮುಖ ಪಾತ್ರ ವಹಿಸುತ್ತವೆ. 'ಮುಖ್ಯವಾಹಿನಿ'ಯ ಶಾಲೆಗಳು ವಿದ್ಯಾರ್ಥಿಗಳು ಅಭ್ಯಾಸ ಮಾಡುವ ಪಠ್ಯಪುಸ್ತಕಗಳಲ್ಲಿ ಸಮಾಜದ ಪ್ರತಿಷ್ಠಿತ ವರ್ಗದ ಜೀವನಶೈಲಿ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಅನುಕರಣೀಯ ಆದರ್ಶಗಳಾಗಿ ಬಿಂಬಿಸುತ್ತವೆ.

ಚಾರಿತ್ರಿಕ ಮತ್ತು ಪರಂಪರಾಗತ ಅಹಿತಕರ ಘಟನೆಗಳು, ಮುಜುಗರ ತರುವ ಆಚರಣೆಗಳಿಗೆ ಸುಣ್ಣ ಬಳಿದು ಕೊಳಕನ್ನು ಮುಚ್ಚಿಡುವ ಪ್ರಯತ್ನಗಳೂ ನಡೆದಿವೆ. ಸಾಮಾನ್ಯವಾಗಿ, ಶಾಲೆಗಳ ಪಠ್ಯಪುಸ್ತಕಗಳು ಹಿಂದುಳಿದ, ಶೋಷಿತ ಮತ್ತು ಸಮಾಜದ ಅಂಚಿಗೆ ದೂಡಲ್ಪಟ್ಟ ಜನಾಂಗಗಳ ಪ್ರಸ್ತಾಪವನ್ನೇ ಮಾಡುವುದಿಲ್ಲ. ಈ ರೀತಿ, ಶಾಲೆಗಳು ಈ ವಿಷಯದಲ್ಲೂ ರಾಜಕೀಯ ಪಾತ್ರವನ್ನು ನಿರ್ವಹಿಸುತ್ತವೆ.

ಸಾಮಾನ್ಯವಾಗಿ, ಎಲ್ಲರೂ ತಿಳಿದಿರುವಂತೆ ಶಾಲೆಗಳು ಮಾಹಿತಿ ನೀಡುವ, ಕೌಶಲ್ಯಗಳನ್ನು ಬೆಳೆಸುವ ಸಂಸ್ಥೆಗಳಾಗಿ ಉಳಿದಿಲ್ಲ. ಮಾತ್ರವಲ್ಲ, ಶಾಲೆಗಳು ಪ್ರತಿಷ್ಠಿತ ವರ್ಗದ ಆಳ್ವಿಕೆಗೆ ಭಂಗ ತರದಂತೆ ಕೆಲವು ಮೌಲ್ಯಗಳ ಪ್ರತಿಪಾದನೆ ಮಾಡುತ್ತವೆ. ಪ್ರಜಾಪ್ರಭುತ್ವವನ್ನು ಪರಮೋಚ್ಚ ಮೌಲ್ಯವೆಂದು ಸ್ವೀಕರಿಸಿರುವ ದೇಶಗಳಲ್ಲೂ ಶಾಲೆಗಳು ರಾಜಕೀಯ ನಿರ್ದೇಶನ ನೀಡುವ ಸಂಸ್ಥೆಗಳಾಗಿವೆ. ಅಂಧಾನುಕರಣೆ ಮತ್ತು ವಿಧೇಯತೆಯನ್ನು ವಿದ್ಯಾರ್ಥಿ ಗಳಿಗೆ ರೂಢಿಸಿಕೊಳ್ಳಲು ಆದೇಶ ನೀಡುತ್ತವೆ. ವಿಭಿನ್ನವಾಗಿ ಆಲೋಚನೆ ಮಾಡುವ ವಿದ್ಯಾರ್ಥಿಗಳು ಶಿಕ್ಷೆ ಅನುಭವಿಸ ಬೇಕಾಗುತ್ತದೆ. ನಮ್ಮ ದೇಶದಲ್ಲೂ, 'ಬಡವನ ಕೋಪ ದವಡೆಗೆ ಮೂಲ', 'ಬಡವಾ, ನೀ ಮಡಗಿದಂಗಿರು' ಎಂಬ ಉಕ್ತಿಗಳು ಸಂಘಟನೆ ಮತ್ತು ಪ್ರತಿಭಟನೆ ಮುಂತಾದ ಚಟುವಟಿಕೆಗಳಿಗೆ ತಣ್ಣೀರೆರಚುತ್ತವೆ. ತತ್ಪರಿಣಾಮವಾಗಿ, ವಿದ್ಯಾರ್ಥಿಗಳು ಸ್ವತಂತ್ರವಾಗಿ ಆಲೋಚನೆ ಮಾಡುವ ಸಾಮರ್ಥ್ಯವನ್ನು ಕಳೆದುಕೊಂಡು ನಿಷ್ಕ್ರಿಯತೆಯನ್ನು ರೂಢಿಸಿಕೊಳ್ಳುತ್ತಾರೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ನಮ್ಮ ಶಾಲೆಗಳು ವಿದ್ಯಾರ್ಥಿಗಳನ್ನು ಮುಕ್ತವಾಗಿ ಆಲೋಚಿಸಲು ಪ್ರೇರೇಪಿಸುವ ಬದಲು, ಅವರನ್ನು 'ಪಳಗಿಸುವ' ಕ್ರಿಯೆಯಲ್ಲಿ ತೊಡಗಿವೆ.

ನಮ್ಮ ಶಾಲೆಗಳು ಇಂದು ಸಾಮಾನ್ಯವಾಗಿ ಸೃಜನಶೀಲತೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಬಯಸುವುದಿಲ್ಲ. ಪಠ್ಯಪುಸ್ತಕಗಳನ್ನು ಕಂಠಪಾಠ ಮಾಡಿ ಪರೀಕ್ಷೆಗಳಲ್ಲಿ ಶೇಕಡ ೯೦ರಿಂದ ೯೫ರಷ್ಟು ಅಂಕ ಗಳಿಸುವ ವಿದ್ಯಾರ್ಥಿಗಳನ್ನು ಪುರಸ್ಕರಿಸುತ್ತಾರೆ. ಪರೀಕ್ಷಾ ಪದ್ಧತಿಯ ಸಾಮಾಜಿಕ ಕೊಡುಗೆ ಇಷ್ಟೇ ಆಗಿದೆ.

ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ಖಾಲಿ ಪಾತ್ರೆಗಳಂತೆ ಪರಿಗಣಿಸಲಾಗುತ್ತದೆ. ಅವರ ತಲೆಯಲ್ಲಿ ವಿವಿಧ ಕ್ಷೇತ್ರಗಳ ಮಾಹಿತಿಯನ್ನು ತುಂಬಿ 'ಪರಿಣತರ'ನ್ನಾಗಿ ಮಾರ್ಪಾಡು ಮಾಡಲಾಗುತ್ತದೆ. ಕ್ರಮೇಣ, ಅವರು ಯಂತ್ರಮಾನವರಂತೆ ದುಡಿಯಲು ಪ್ರಾರಂಭಿಸುತ್ತಾರೆ. ವಿಶ್ವಾದ್ಯಂತ ವ್ಯಾಪಿಸಿರುವ ಬೃಹತ್ ಔದ್ಯೋಗಿಕ ಸಂಸ್ಥೆಗಳಿಗೆ ಅನುಕೂಲಕರವಾಗಿ, ಪದವೀಧರರು ವಿಶ್ವವಿದ್ಯಾಲಯಗಳಿಂದ ಹೊರಬರುತ್ತಾರೆ. ದುರದೃಷ್ಟಕರ ಸಂಗತಿಯೆಂದರೆ, ಶಾಲೆಗಳು ವಿದ್ಯಾರ್ಥಿಗಳನ್ನು ಅತ್ಯಂತ ವಿಧೇಯ ಕಾರ್ಮಿಕ ಹಾಗೂ ನಿಷ್ಕ್ರಿಯ ಪ್ರಜೆ ಗಳನ್ನಾಗಿ ತಯಾರುಮಾಡುತ್ತವೆ. ವಿದ್ಯಾರ್ಥಿಗಳು ಇಂದು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತೀವ್ರವಾದ ಪೈಪೋಟಿಯನ್ನು ಎದುರಿಸಿ, ಅತಿ ಹೆಚ್ಚು ಅಂಕ ಗಳಿಸುವುದನ್ನೇ 'ಯಶಸ್ಸು' ಎಂದು ಭಾವಿಸಿದ್ದಾರೆ. ಕ್ರಮೇಣ, ವಿದ್ಯಾರ್ಥಿಗಳು ಪ್ರೌಢಾವಸ್ಥೆ ಯನ್ನು ತಲುಪಿದಾಗ, ಸಾಮಾಜಿಕ ಸಮಸ್ಯೆಗಳಿಗೆ ವಿಮುಖರಾಗಿ, ತಮ್ಮನ್ನು ತಾವು ಸಮಾಜದಿಂದ ಪ್ರತ್ಯೇಕಿಸಿಕೊಂಡು ತಮ್ಮದೇ ಆದ ಸ್ವಾರ್ಥಪರ ವಲಯವನ್ನು ಸೃಷ್ಟಿಸಿಕೊಂಡು ಬದುಕನ್ನು ಸವೆಸುತ್ತಾರೆ. ಚೋಮ್‌ಸ್ಕಿಯವರು ಗಮನಿಸಿರುವಂತೆ, ಶಾಲೆಗಳು ವಿದ್ಯಾರ್ಥಿಗಳನ್ನು ಸಾಮಾಜಿಕವಾಗಿ ಸಕ್ರಿಯ ರಾಗುವ ಪ್ರಜೆಗಳನ್ನಾಗಿ ರೂಪಿಸುವಲ್ಲಿ ವಿಫಲಗೊಂಡಿವೆ.

ಆಧುನಿಕ ಶಿಕ್ಷಣ ವ್ಯವಸ್ಥೆಯ ಹಿನ್ನೆಲೆಯಲ್ಲಿ, ಚೋಮ್‌ಸ್ಕಿ ಯವರ ಅನೇಕ ಚಿಂತನೆಗಳು ಸಮಂಜಸವಾಗಿವೆ. ಸಮಾಜದ ಪ್ರತಿಷ್ಠಿತ ವರ್ಗ ಮತ್ತು ಸರ್ಕಾರ, ಶೈಕ್ಷಣಿಕ ವ್ಯವಸ್ಥೆಯನ್ನು ತಮ್ಮ ಹಿತಾಸಕ್ತಿಗಳಿಗೆ ಪೂರಕವಾಗಿ ಸತತವಾಗಿ ಬಳಸಿ ಕೊಳ್ಳುವ ಸಲುವಾಗಿ, ವ್ಯವಸ್ಥೆಯ ಮೇಲೆ ತನ್ನ ಹಿಡಿತವನ್ನು ಗಟ್ಟಿಗೊಳಿಸಿಕೊಂಡಿದೆ ಎನ್ನುವುದು ನಿರ್ವಿವಾದ.

*(ಆಧಾರ: ಶ್ರೀಯುತ ಯೋಗಿಂದರ್ ಸಿಕಂಡ್ ಅವರ ಆಂಗ್ಲಭಾಷಾ ಲೇಖನ)*

ಸುಬ್ರಹ್ಮಣ್ಯಪುರ, ಬೆಂಗಳೂರು **ಶಂಕರನಾರಾಯಣ**

# ಕರ್ನಾಟಕದ ಹೊಸ ಸರ್ಕಾರದ ಮುಂದಿರುವ ಸವಾಲುಗಳು

**ಈಗ ಅಧಿಕಾರಕ್ಕೆ ಬಂದಿರುವ ಕಾಂಗ್ರೆಸ್ ಸರ್ಕಾರದ ಮುಂದಿರುವ ಅಭಿವೃದ್ಧಿ ಸಂಬಂಧಿ ಸವಾಲುಗಳಾವುವು ಮತ್ತು ಅವನ್ನು ಅದು ಹೇಗೆ ನಿರ್ವಹಿಸುತ್ತದೆ ಹಾಗೂ ಜನರು ಅವುಗಳನ್ನು ಹೇಗೆ ನಿರ್ವಹಿಸಬೇಕೆಂದು ಬಯಸುತ್ತಾರೆ ಎಂಬ ವಿಷಯವನ್ನು ಕುರಿತಂತೆ ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಕಳೆದ ಸರ್ಕಾರದ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ 'ದಿ ರಿಪಬ್ಲಿಕ್ ಆಫ್ ಬಳ್ಳಾರಿ'ಯನ್ನು ನೆನಪಿಸಿಕೊಂಡರೆ ಈಗಲೂ ಭಯವಾಗುತ್ತದೆ. ಅದನ್ನು ನಾಗರಿಕ ಬಳ್ಳಾರಿಯನ್ನಾಗಿ ಪರಿವರ್ತಿಸುವ ಗುರುತರವಾದ ಜವಾಬುದಾರಿ ಇಂದಿನ ಕಾಂಗ್ರೆಸ್ ಸರ್ಕಾರದ ಮೇಲಿದೆ.**

**ಪ್ರಸ್ತಾವನೆ**

ಇತ್ತೀಚಿಗೆ ಕರ್ನಾಟಕ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಬಹುಮತ ಪಡೆದ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದಿದೆ. ಕಳೆದ ೫-೬ ವರ್ಷಗಳಿಂದ ಜನರನ್ನು ಕಾಡುತ್ತಾ ಬಂದಿದ್ದ ಪಾರಮಾರ್ಥಿಕ ರಾಜಕಾರಣ ಕೊನೆಗೊಂಡಿದೆ. ಪ್ರಜಾಪ್ರಭುತ್ವವಾದಿಗಳಿಗೆ ಇದೊಂದು ವಿಜಯೋತ್ಸವದ ಸಂಗತಿ. ಆದರೆ ನಾವು ಹೊಸ ಸರ್ಕಾರದ ನೀತಿ-ಧೋರಣೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಚರ್ಚೆಗೆ ಒಳಪಡಿಸುತ್ತಲೇ ಹೋಗುವ ಅಗತ್ಯವಿದೆ. ಪಾರಮಾರ್ಥಿಕ ರಾಜಕಾರಣ ಕೊನೆ ಗೊಂಡಿದೆ ಎಂದು ಕಾಂಗ್ರೆಸಿನ ಎಲ್ಲ ನೀತಿಗಳನ್ನು ಕುರುಡು ಕುರುಡಾಗಿ ಒಪ್ಪಿಕೊಳ್ಳುವುದು ಸರಿಯಲ್ಲ. 'ಸಾರ್ವಜನಿಕ ಬುದ್ಧಿಜೀವಿಗಳು' ಎಂದು ನಾವು ಯಾರನ್ನು ಕರೆಯುತ್ತಿದ್ದೇವೆಯೋ ಅವರೆಲ್ಲ ಯಾವುದೇ ಪಕ್ಷ ಆಡಳಿತದಲ್ಲಿರಲಿ ಅದರ ನೀತಿಗಳ ಬಗ್ಗೆ, ಕಾರ್ಯಕ್ರಮಗಳ ಬಗ್ಗೆ ಮತ್ತು ಸೈದ್ಧಾಂತಿಕ ಧೋರಣೆಯ ಬಗ್ಗೆ ಸದಾ ಎಚ್ಚರದಿಂದಿರಬೇಕು. ಅವರು ಸಮಾಜದ ಆತ್ಮಸಾಕ್ಷಿಯಂತೆ ಮತ್ತು ಸರ್ಕಾರದ ಕಾವಲು ಪಡೆಯಂತೆ ಕೆಲಸ ಮಾಡಬೇಕು. ಈ ಬಗ್ಗೆ ಚಿಂತನೆ ನಡೆಸಲು ಸಮಯ, ಸಂಪನ್ಮೂಲ ಮತ್ತು ಸೈದ್ಧಾಂತಿಕ ತರಬೇತಿ ಇವರಿಗಿರುತ್ತದೆ. ಈ ವರ್ಗ ತನ್ನ ಜವಾಬುದಾರಿಯನ್ನು ಸರಿಯಾಗಿ ನಿರ್ವಹಿಸಬೇಕು. ಸಮಾನತೆಯ ಆಧಾರದ ಮೇಲೆ ಅಭಿವೃದ್ಧಿ ನೀತಿಗಳು ರೂಪುಗೊಳ್ಳುತ್ತಿವೆಯೋ ಇಲ್ಲವೋ ಎಂಬುದನ್ನು ಸದಾ ಪರೀಕ್ಷಿಸುತ್ತಿರಬೇಕು. ಗುಡಿ ಸುತ್ತುವವರ, ವರಮಹಾಲಕ್ಷ್ಮಿ ಪೂಜೆ ಮಾಡುವವರ, ಲಡ್ಡು-ಗಂಗಾಜಲ ತರಿಸುವವರ, ಮಳೆಗಾಗಿ ದೇವರ ಪೂಜೆ ನಡೆಸುವವರ ಆಡಳಿತ ಕೊನೆಗೊಂಡಿರುವುದು ಸಂತೋಷದ ಸಂಗತಿ, ನಿಜ. ಈಗಿನ ಹೊಸ ಸರ್ಕಾರ ಮುಂದೆ ಏನು ಮಾಡುತ್ತದೆ ಎಂಬುದು ನಮಗೆ ಮುಖ್ಯ. ಭ್ರಷ್ಟಾಚಾರ, ಅಕ್ರಮ ಗಣಿಗಾರಿಕೆ, ನೈತಿಕ ಪೊಲೀಸ್‌ಗಿರಿ, ಕಾಮವಾದ-ಕೋಮುವಾದ, ಗುಡಿ ಸುತ್ತುವುದು, ವರಮಹಾಲಕ್ಷ್ಮಿ ಪೂಜೆ ಮುಂತಾದವುಗಳಲ್ಲಿ ಮುಳುಗಿದ್ದ ಸರ್ಕಾರದ ಆಡಳಿತದಿಂದ ಬೇಸರಗೊಂಡಿದ್ದ ಜನತೆ ಚುನಾವಣೆಯಲ್ಲಿ ರಾಜಕೀಯ ಪ್ರೌಢಿಮೆಯನ್ನು ಮೆರೆದಿದ್ದಾರೆ. ಪಾರಮಾರ್ಥಿಕ ರಾಜಕಾರಣವನ್ನು ನಡೆಸುತ್ತಿದ್ದ ಸರ್ಕಾರವನ್ನು ಮತದಾರರು ಮನೆಗಟ್ಟಿದ್ದಾರೆ. ಈಗ ಅಧಿಕಾರದ ಚುಕ್ಕಾಣಿ ಹಿಡಿದಿರುವ ಕಾಂಗ್ರೆಸ್ ಸರ್ಕಾರದ ಮುಂದೆ ಅನೇಕ ಸವಾಲುಗಳಿವೆ. ಪಾರಮಾರ್ಥಿಕ ಅರಾಜಕತೆಗೆ ತುತ್ತಾಗಿದ್ದ ಕರ್ನಾಟಕ ಆರ್ಥಿಕತೆಯನ್ನು ಸರಿ ದಾರಿಗೆ ತಂದು ನಿಲ್ಲಿಸಬೇಕಾಗಿದೆ. ಹಿಂದಿನ ಸರ್ಕಾರವು ಬರಗಾಲದಿಂದ ಕಂಗಾಲಾದ ಜನರು ಕುಡಿಯಲು ನೀರು ಕೇಳಿದರೆ ಉತ್ತರ ಭಾರತದಿಂದ ಗಂಗಾಜಲವನ್ನು ತಂದು ವಿತರಿಸಿತು. ಮಳೆಗಾಗಿ ರಾಜ್ಯದ ಗುಡಿಗಳಲ್ಲಿ ವಿಶೇಷ ಪೂಜೆ ಮಾಡಿಸಲಾಗುತ್ತದೆಯೆಂದು ವಿಧಾನಸಭೆಯಲ್ಲಿ ಘೋಷಿಸಲಾಯಿತು. ಕೆಲವೇ ಸಮುದಾಯಗಳ ಹಿತಾಸಕ್ತಿಗಳನ್ನು ಪೂರೈಸುವ ಸಲುವಾಗಿ ವೈಕುಂಠ ಏಕಾದಶಿಯಲ್ಲಿ ಲಡ್ಡು ಹಂಚುವ ಕೆಲಸವನ್ನು ಸರ್ಕಾರ ಮಾಡಿತು. ಮಹಿಳೆಯರ ಅಭಿವೃದ್ಧಿಯನ್ನು ವರಮಹಾಲಕ್ಷ್ಮಿ ಪೂಜೆಗೆ ಸೀಮಿತಗೊಳಿಸಿಬಿಟ್ಟಿತು. ಕೃಷಿಯ ಬಿಕ್ಕಟ್ಟನ್ನು ಪರಿಹರಿಸಿಕೊಡಬೇಕೆಂದು ರೈತರು ಒತ್ತಾಯ ಮಾಡಿದರೆ ಸರ್ಕಾರ ರೈತರ ರಥೋತ್ಸವವನ್ನು ನಡೆಸಿತು. ನೈಸರ್ಗಿಕ ಸಂಪನ್ಮೂಲದ ದರೋಡೆ ಅವ್ಯಾಹತವಾಗಿ ನಡೆಯಿತು. ರಾಜ್ಯದ ಹಿಂದುಳಿದ ಜಿಲ್ಲೆಗಳಿಂದ ಜನರು ತಂಡೋಪತಂಡವಾಗಿ ಬದುಕನ್ನು ಅರಸಿಕೊಂಡು ಬೆಂಗಳೂರಿಗೆ ವಲಸೆ ಹೋಗುತ್ತಿದ್ದಾರೆ. ಅರ್ಥಶಾಸ್ತ್ರ-ಸಮಾಜಶಾಸ್ತ್ರಗಳ ನಿಯಮಗಳಿಗೆ ಬದ್ಧವಾಗಬೇಕಾಗಿದ್ದ



ಡಾ|| ಟಿ. ಆರ್. ಚಂದ್ರಶೇಖರ

ಬಜೆಟ್ಟನ್ನು ಪಾರಮಾರ್ಥಿಕ ಸಾಧನವನ್ನಾಗಿ ಮಾಡಲಾಯಿತು. ಅಭಿವೃದ್ಧಿ ಎನ್ನುವುದು ಹಂಗಿನ, ದಾನ-ದತ್ತಿಯ ಸಂಗತಿಯಾಗಿ ಬಿಟ್ಟಿತು. ಈ ಎಲ್ಲ ವಿಕೃತಿ-ವಿಕಾರಗಳನ್ನು ಸರಿಪಡಿಸುವ ಜವಾಬುದಾರಿ ಹೊಸ ಸರ್ಕಾರದ ಮುಂದಿದೆ. ಪಾರಮಾರ್ಥಿಕ ರಾಜಕಾರಣದ ಸ್ಥಳದಲ್ಲಿ ಪದಾರ್ಥವಾದಿ ರಾಜಕಾರಣವನ್ನು ಪ್ರತಿಷ್ಠಾಪಿಸುವ ಅಗತ್ಯವಿದೆ. ಮಠಗಳ-ಮಠಾಧೀಶರ ಆದೇಶಕ್ಕೆ ಮಣೆ ಹಾಕದೆ ಜನಾದೇಶಕ್ಕೆ ಮನ್ನಣೆ ನೀಡಿ ಆಡಳಿತ ನಡೆಸುವ ಕ್ರಮ ಕೈಗೊಳ್ಳಬೇಕು. ಹಕ್ಕಿನ ಸಂಗತಿಯನ್ನಾಗಿ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳಬೇಕು. ಪ್ರಜಾಪ್ರಭುತ್ವವನ್ನು ಗಟ್ಟಿಗೊಳಿಸಲು ಇವೆಲ್ಲ ಅಗತ್ಯವಾಗಿ ನಡೆಯಬೇಕಾಗಿರುವ ಕಾರ್ಯಗಳು.

ಈಗ ಅಧಿಕಾರಕ್ಕೆ ಬಂದಿರುವ ಕಾಂಗ್ರೆಸ್ ಸರ್ಕಾರದ ಮುಂದಿರುವ ಅಭಿವೃದ್ಧಿ ಸಂಬಂಧಿ ಸವಾಲುಗಳಾವುವು ಮತ್ತು ಅವನ್ನು ಅದು ಹೇಗೆ ನಿರ್ವಹಿಸುತ್ತದೆ ಹಾಗೂ ಜನರು ಅವುಗಳನ್ನು ಹೇಗೆ ನಿರ್ವಹಿಸಬೇಕೆಂದು ಬಯಸುತ್ತಾರೆ ಎಂಬ ವಿಷಯವನ್ನು ಕುರಿತಂತೆ ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಕಳೆದ ಸರ್ಕಾರದ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ 'ದಿ ರಿಪಬ್ಲಿಕ್ ಆಫ್ ಬಳ್ಳಾರಿ'ಯನ್ನು ನೆನಪಿಸಿಕೊಂಡರೆ ಈಗಲೂ ಭಯವಾಗುತ್ತದೆ. ಅದನ್ನು ನಾಗರಿಕ ಬಳ್ಳಾರಿಯನ್ನಾಗಿ ಪರಿವರ್ತಿಸುವ ಗುರುತರವಾದ ಜವಾಬುದಾರಿ ಇಂದಿನ ಕಾಂಗ್ರೆಸ್ ಸರ್ಕಾರದ ಮೇಲಿದೆ. ಆದರೆ ದುರದೃಷ್ಟದ ಸಂಗತಿಯೆಂದರೆ ಚುನಾವಣೆಯಲ್ಲಿ ಅಕ್ರಮ ಗಣಿಗಾರಿಕೆಯು ಚರ್ಚೆಯ ವಸ್ತುವಾಗಲಿಲ್ಲ. ಯಾವುದೇ ಪಕ್ಷವು ಅದನ್ನು ವಿರೋಧಿಸುವ ನಿಲುವನ್ನು ತಮ್ಮ ಪ್ರಣಾಳಿಕೆಗಳಲ್ಲಿ ಘೋಷಿಸಲಿಲ್ಲ. ಈ ಚೌಕಟ್ಟಿನಲ್ಲಿ ಹೊಸ ಸರ್ಕಾರದ ಜವಾಬುದಾರಿಯನ್ನು ವಿಮರ್ಶೆ ಮಾಡಬೇಕಾಗುತ್ತದೆ. ಒಟ್ಟಾರೆ ಹಿಂದಿನ ಸರ್ಕಾರವು ಪಾಲಿಸಿಕೊಂಡು ಬರುತ್ತಿದ್ದ ನೀತಿಗಳೆಲ್ಲವನ್ನೂ ತಿರುವು ಮುರುವು ಮಾಡುವ ಅಗತ್ಯವಿದೆ. ಇದು ಜನರ ಅಭಿಲಾಷೆ.

### ಭಾಗ-೧

### ನೈಸರ್ಗಿಕ ಸಂಪನ್ಮೂಲಗಳ ದರೋಡೆ

ಹೊಸ ಸರ್ಕಾರದ ಮುಂದಿರುವ ಅತಿ ದೊಡ್ಡ ಸವಾಲು ಎಂದರೆ ನೈಸರ್ಗಿಕ ಸಂಪನ್ಮೂಲದ ದರೋಡೆಯನ್ನು ತಡೆಗಟ್ಟುವುದು ಮತ್ತು ಅದರ ಸಂರಕ್ಷಣೆ. ಅಕ್ರಮ ಗಣಿಗಾರಿಕೆಗೆ ಸಂಬಂಧಿಸಿದಂತೆ ತನಿಖೆ ನಡೆಸಿದ ಕರ್ನಾಟಕ ಲೋಕಾಯುಕ್ತ ನ್ಯಾ॥ ಸಂತೋಷ ಹೆಗಡೆ ಅವರ ಪ್ರಕಾರ ಅಕ್ರಮ ಗಣಿಗಾರಿಕೆಯಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಉಂಟಾದ ನಷ್ಟ ರೂ. ೧೬೦೦೦ ಕೋಟಿ. ಆದರೆ ಲೋಕಾಯುಕ್ತರು ನೈಸರ್ಗಿಕ ಸಂಪನ್ಮೂಲದ ದೃಷ್ಟಿಯಿಂದ ಉಂಟಾಗಿರುವ ನಷ್ಟವನ್ನು ಲೆಕ್ಕ ಹಾಕಲಿಲ್ಲ. ಅವರ ಅಂದಾಜಿನ ಪ್ರಕಾರ ಅದರ ಬಾಬತ್ತು ನಷ್ಟ ಒಂದು ಲಕ್ಷ ಕೋಟಿ ರೂಪಾಯಿ ಮೀರುತ್ತದೆ. ಕಳೆದ ಹತ್ತು-ಹನ್ನೆರಡು ವರ್ಷಗಳ ಅವಧಿಯಲ್ಲಿ (೨೦೦೦-೨೦೧೨) ರಾಜ್ಯದ ಖನಿಜ ಸಂಪತ್ತು ಮತ್ತು ಅರಣ್ಯ ಸಂಪನ್ಮೂಲ ಸರ್ಕಾರದ ಕಣ್ಣ ಮುಂದೆ ಲೂಟಿಗೆ ಒಳಗಾಯಿತು. ಅದರಲ್ಲೂ ೨೦೦೮-೨೦೧೨ರ ಅವಧಿಯಲ್ಲಿ ನಡೆದ ಅಕ್ರಮ ಗಣಿಗಾರಿಕೆಯು ಊಹೆಗೆ ನಿಲುಕುವುದಿಲ್ಲ. ದೇಶಪ್ರೇಮವನ್ನು ಗುತ್ತಿಗೆ ಹಿಡಿದುಕೊಂಡವರಂತೆ ಮಾತನಾಡುವ ಪಕ್ಷವೊಂದು ತಾನು ಅಧಿಕಾರದಲ್ಲಿದ್ದಾಗ ಅಕ್ರಮವಾಗಿ ದೇಶದಿಂದ ಕಬ್ಬಿಣದ ಅದಿರು ರಫ್ತು ನಡೆಯಲು ಸಾಧ್ಯ ಮಾಡಿಕೊಟ್ಟಿತು. ಆ ಪಕ್ಷಕ್ಕೆ ಈಗ ದೇಶಪ್ರೇಮದ ಬಗ್ಗೆ ಮಾತನಾಡುವ ನೈತಿಕ ಹಕ್ಕೇನಿದೆ ? ಈಗಿನ ಸರ್ಕಾರವು ಕಳೆದ ೫-೬ ವರ್ಷಗಳಿಂದ ನಡೆಯುತ್ತಾ ಬಂದಿರುವ ಅಕ್ರಮಗಣಿಗಾರಿಕೆಯನ್ನು ನಿಲ್ಲಿಸಬೇಕು ಮತ್ತು ಬರಿದಾಗುವ ಕಬ್ಬಿಣ ಅದಿರಿನ ಸಂಪನ್ಮೂಲವನ್ನು ಸಂರಕ್ಷಿಸಬೇಕು ಮತ್ತು ಪೋಷಿಸಬೇಕು.

ನೈಸರ್ಗಿಕ ಸಂಪನ್ಮೂಲಗಳಲ್ಲಿ ಬರಿದಾಗುವ ಮತ್ತು ಬರಿದಾಗದ ಎಂದು ಎರಡು ವಿಧ. ನೈಸರ್ಗಿಕ ಸಂಪನ್ಮೂಲಗಳ ಮೇಲೆ ಸದ್ಯದ ತಲೆಮಾರಿಗೆ ಎಷ್ಟು ಹಕ್ಕಿರುತ್ತದೆಯೋ ಅಷ್ಟೇ ಹಕ್ಕು ಮುಂದಿನ ತಲೆಮಾರಿಗೂ ಇರುತ್ತದೆ. ಇದನ್ನು 'ಅಂತರ ತಲೆಮಾರು ಸಮಾನತೆ' ಎಂದು ಕರೆಯಲಾಗುತ್ತದೆ. ಈ ಸಂಪನ್ಮೂಲಗಳನ್ನು ಸದ್ಯದ ತಲೆಮಾರಿನ ಅಗತ್ಯಗಳನ್ನು ಪೂರೈಸುವುದರ ಜೊತೆಗೆ ಮುಂದೆ ಬರುವ ಆದರೆ ಇನ್ನೂ



ಹುಟ್ಟದಿರುವ ತಲೆಮಾರಿನ ಹಿತಾಸಕ್ತಿಗಳಿಗೆ ಧಕ್ಕೆ ಬರದಂತೆ ಸಾಧಿಸಿಕೊಳ್ಳುವ ಅಭಿವೃದ್ಧಿ ಕ್ರಮವನ್ನು 'ಸುಸ್ಥಿರಗತಿ ಅಭಿವೃದ್ಧಿ' ಎಂದು ಕರೆಯಲಾಗಿದೆ. ನೈಸರ್ಗಿಕ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಸರ್ಕಾರಗಳು ಈ ಎರಡು ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಆದರೆ ಕಳೆದ ೫-೬ ವರ್ಷಗಳ ಅವಧಿಯಲ್ಲಿ ಇವೆರಡೂ ಉದ್ದೇಶಗಳನ್ನು ಕಡೆಗಣಿಸಲಾಗಿತ್ತು.

ನಮ್ಮ ರಾಜ್ಯದಲ್ಲಿ ಎಲ್ಲ ಬಗೆಯ ನೈಸರ್ಗಿಕ ಸಂಪನ್ಮೂಲಗಳು ದರೋಡೆಗೆ ಒಳಗಾಗಿವೆ. ನಮ್ಮ ಭೂಮಿ, ಅರಣ್ಯ, ನದಿಗಳು, ಹಳ್ಳ-ಕೊಳ್ಳ-ಬಾವಿಗಳು, ಕೆರೆ-ಕಟ್ಟೆಗಳು, ಪಶು-ಪ್ರಾಣಿಗಳು, ಬೆಟ್ಟ-ಗುಡ್ಡಗಳು, ಹಕ್ಕಿಗಳು-ಜಲಚರಗಳು, ಮರಳು, ಕಲ್ಲುಬಂಡೆಗಳು, ಮಣ್ಣು, ಊರೊಟ್ಟಿನ ಸಂಪನ್ಮೂಲ, ವಾಯುಮಂಡಲ – ಹೀಗೆ ಎಲ್ಲ ಬಗೆಯ ಸಂಪನ್ಮೂಲಗಳು ಲೂಟಿಯಾಗುತ್ತಿವೆ. ಇದಕ್ಕೆ ಕೊನೆ ಹಾಡಬೇಕು. ಈ ಸರ್ಕಾರದಿಂದ ಜನರು ಇದನ್ನು ಅಪೇಕ್ಷಿಸುತ್ತಾರೆ. ಈ ವಿಷಯದಲ್ಲಿ ಸರ್ಕಾರ ಏನು ಮಾಡಬಹುದು ಎಂಬುದಕ್ಕೆ ಕೆಲವು ಸಲಹೆಗಳನ್ನು ಇಲ್ಲಿ ನೀಡಲಾಗಿದೆ. ಇದನ್ನು ಹೊಸ ಸರ್ಕಾರವು ಪರಿಗಣಿಸಬಹುದು.

೧. ಖನಿಜ ಸಂಪನ್ಮೂಲಗಳ ರಫ್ತನ್ನು ನಿಷೇಧಿಸಬೇಕು. ಗಣಿಗಾರಿಕೆಯಲ್ಲಿ ಖಾಸಗಿ ವಲಯಕ್ಕೆ ಅವಕಾಶ ನೀಡಬಾರದು.
೨. ಗಣಿಗಾರಿಕೆ/ಗಣಿಗಾರಿಕೇತರ ಚಟುವಟಿಕೆ - ಹೀಗೆ ಯಾವುದೇ ಆಗಲಿ, ಬೆಟ್ಟ-ಗುಡ್ಡಗಳನ್ನು ಸಮ ಮಾಡುವುದನ್ನು ತಡೆಯಬೇಕು.
೩. ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆಯನ್ನು ನಿಷೇಧಿಸಬೇಕು.
೪. ಪರಿಸರಕ್ಕೆ ಯಾವುದೇ ರೀತಿಯಲ್ಲಿ ಹಾನಿಯಾಗದಂತೆ ಖನಿಜ ಸಂಪನ್ಮೂಲದ ಗಣಿಗಾರಿಕೆ ನಡೆಯಬೇಕು.
೫. ಗಣಿಗಾರಿಕೆಯಿಂದ ಉಂಟಾಗುವ ಯಾವುದೇ ಬಗೆಯ ಹಾನಿಯನ್ನು ಗಣಿಗಾರಿಕೆ ಕಂಪನಿಯೇ ತುಂಬಿ ಕೊಡಬೇಕು.
೬. ಗಣಿಗಾರಿಕೆ ಪ್ರದೇಶದಲ್ಲಿ ವಾಸ ಮಾಡುವ ಜನರು

**ಕರ್ನಾಟಕದಿಂದ ಕಬ್ಬಿಣ ಅದಿರಿನ ಅಕ್ರಮ ರಫ್ತು ಮತ್ತು ಸರ್ಕಾರದ ವೈಫಲ್ಯ**

* ನಮಗೆಲ್ಲ ತಿಳಿದಿರುವಂತೆ ಕರ್ನಾಟಕ ಲೋಕಾಯುಕ್ತರು ಅಕ್ರಮ ಗಣಿಗಾರಿಕೆಯ ಬಗ್ಗೆ ತಮ್ಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ೧೮.೧೨.೨೦೦೮.
* ನಮ್ಮ ರಾಜ್ಯದಲ್ಲಿ ಕಬ್ಬಿಣ ಅದಿರಿನ ಉತ್ಪಾದನೆ ೨೦೦೧-೨೦೦೨ರಲ್ಲಿ ೧೨.೪ ದಶಲಕ್ಷ ಟನ್ನಿನಷ್ಟಿತ್ತು. ಇದು ೨೦೦೮-೦೯ರಲ್ಲಿ ೪೪.೩೯ ದಶಲಕ್ಷ ಟನ್ನಿಗೇರಿತು.
* ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ದಿನಾಂಕ : ೦೯.೦೬.೨೦೧೦ರಂದು ವಿಧಾನಸಭೆಯಲ್ಲಿ ನೀಡಿದ ಹೇಳಿಕೆ ಪ್ರಕಾರ ೨೦೦೩-೦೪ರಿಂದ ೨೦೦೯- ೨೦೧೦ರ ನಡುವೆ ಅಕ್ರಮವಾಗಿ ರಫ್ತು ಮಾಡಿದ ಕಬ್ಬಿಣ ಅದಿರಿನ ಪ್ರಮಾಣ ೩೦.೪೯ ದಶಲಕ್ಷ ಟನ್ನು. ಇದರ ಮೌಲ್ಯ ಅಂದಾಜು ರೂ. ೧೫,೨೪೫ ಕೋಟಿ.
* ಆಶ್ಚರ್ಯದ ಸಂಗತಿಯೆಂದರೆ ಒಂದೇ ವರ್ಷದಲ್ಲಿ, ಅಂದರೆ ೨೦೦೯-೨೦೧೦ನೆಯ ಸಾಲಿನಲ್ಲಿ ಅಕ್ರಮವಾಗಿ ರಫ್ತು ಮಾಡಿದ ಕಬ್ಬಿಣ ಅದಿರಿನ ಪ್ರಮಾಣ ೧೨.೯ ದಶಲಕ್ಷ ಟನ್ನು. ಇಲ್ಲಿ ಗಮನಿಸಬೇಕಾದ ಸಂಗತಿಯೇನೆಂದರೆ ಬೃಹತ್ ಪ್ರಮಾಣದ ಕಬ್ಬಿಣ ಅದಿರನ್ನು ಅಕ್ರಮವಾಗಿ ರಫ್ತು ಮಾಡಿದ್ದು, ಅಕ್ರಮ ಗಣಿಗಾರಿಕೆ ಬಗ್ಗೆ ಸಾಕ್ಷಿ-ಪುರಾವೆ ಸಹಿತ ಸಿದ್ಧಮಾಡಿ ಕರ್ನಾಟಕ ಲೋಕಾಯುಕ್ತರು ೧೮.೧೨.೨೦೦೮ರಲ್ಲಿ ವರದಿ ನೀಡಿದ ನಂತರ ಎಂಬುದು ಆಶ್ಚರ್ಯವುಂಟುಮಾಡಿದರೂ ವಾಸ್ತವಿಕ- ಕಟುಸತ್ಯ. ಅಂದರೆ ೨೦೦೩-೦೪ರಿಂದ ೨೦೦೯- ೨೦೧೦ರ ನಡುವೆ ಅಕ್ರಮವಾಗಿ ರಫ್ತು ಮಾಡಿದ ೩೦.೪೯ ದಶಲಕ್ಷ ಟನ್ನು ಕಬ್ಬಿಣ ಅದಿರಿನಲ್ಲಿ ಶೇ. ೪೨.೩೧ರಷ್ಟು ಒಂದೇ ವರ್ಷ (೨೦೦೯-೨೦೧೦) ದಲ್ಲಿ ರಫ್ತಾಗಿದೆ.

(ಮೂಲ: ಸಮಾಜ ಪರಿವರ್ತನ ಸಮುದಾಯದ ರಿಟ್ ಪಿಟಿಶನ್ ಸಂಖ್ಯೆ ೫೬೨(೨೦೦೯)ಕ್ಕೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯವು ದಿನಾಂಕ ೧೮.೦೪.೨೦೧೩ರಂದು ನೀಡಿದ ತೀರ್ಪು)

ಅಲ್ಲಿನ ಮಾಲಿನ್ಯಕ್ಕೆ ಅನಿವಾರ್ಯವಾಗಿ ಒಳಗಾಗುತ್ತಾರೆ. ಆದ್ದರಿಂದ ಅವರಿಗೆ 'ಗಣಿಗಾರಿಕೆ ಪರಿಹಾರ ಭತ್ಯೆ'ಯನ್ನು ನೀಡುವ ವ್ಯವಸ್ಥೆಯಾಗಬೇಕು.

೭. ಕರ್ನಾಟಕದ ಜನಸಂಖ್ಯೆಯ ಬೆಳವಣಿಗೆ ಪ್ರಮಾಣವು ಸ್ಥಿರಗತಿಯನ್ನು ತಲುಪಿಬಿಟ್ಟಿದೆ. ಆದ್ದರಿಂದ ಅಲ್ಲಿ ಇನ್ನು ಮುಂದೆ ಆಹಾರ ಪದಾರ್ಥಗಳ ಉತ್ಪಾದನೆಯನ್ನು ಹೆಚ್ಚಿಸುವ ಅಗತ್ಯ ಬೀಳುವುದಿಲ್ಲ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿಯ ಮೇಲೂ ಮಿತಿಯನ್ನು ಹೇರುವ ಬಗ್ಗೆ ಯೋಚಿಸಬೇಕು.

೮. ಯಾವುದನ್ನು ಸಮಾಜವಿಜ್ಞಾನಿಗಳು 'ಊರೊಟ್ಟಿನ ಸಂಪನ್ಮೂಲ'ವೆಂದು ಕರೆಯುತ್ತಾರೋ ಅದರ ರಕ್ಷಣೆ ಆಯಕಟ್ಟಿನ ಸಂಗತಿಯಾಗಿದೆ. ಏಕೆಂದರೆ ಬಡವರ ಬದುಕು ಬಹಳಷ್ಟು ಮಟ್ಟಿಗೆ ಅದರ ಮೇಲೆ ನಿಂತಿದೆ.

೯. ನಗರ ಪ್ರದೇಶಗಳಲ್ಲಿ ವಿಷಯುಕ್ತ ತ್ಯಾಜ್ಯವಸ್ತುಗಳನ್ನು ಗ್ರಾಮೀಣ ಪ್ರದೇಶದಲ್ಲಿ ಸುರಿಯುವ ಕ್ರಮವನ್ನು ನಿಲ್ಲಿಸಬೇಕು. ಅದರ ನಿರ್ವಹಣೆಯು ನಗರದೊಳಗೆ ನಡೆಯಬೇಕು. ನಗರವಾಸಿಗಳ ಸುಖಕ್ಕಾಗಿ ಗ್ರಾಮೀಣ ವಾಸಿಗಳು ತ್ಯಾಗ ಮಾಡಬೇಕೆಂದು ಬಯಸುವುದು ಸಾಮಾಜಿಕ ನ್ಯಾಯಕ್ಕೆ ವಿರೋಧವಾಗುತ್ತದೆ.

೧೦. ಅಕ್ರಮ ಗಣಿಗಾರಿಕೆಯ ಆಪಾದನೆಗಳನ್ನು ಎದುರಿಸುತ್ತಿರುವವರ ವಿಚಾರಣೆಯನ್ನು ಫಾಸ್ಟ್ ಟ್ರಾಕ್ ಕೋರ್ಟುಗಳಲ್ಲಿ ನಡೆಸಬೇಕು. ಅದರಲ್ಲಿ ಶಾಮೀಲಾಗಿರುವ ಅಧಿಕಾರಿಗಳ ಮೇಲೆಯೂ ಶೀಘ್ರಾತಿ ಶೀಘ್ರವಾಗಿ ಕ್ರಮ ತೆಗೆದುಕೊಳ್ಳಬೇಕು. ಅಕ್ರಮ ಗಣಿಗಾರಿಕೆಯಿಂದ ಸರ್ಕಾರಕ್ಕೆ ಮತ್ತು ಸಮಾಜಕ್ಕೆ ಉಂಟಾಗಿರುವ ನಷ್ಟವನ್ನು ದಂಡ ಹೇರುವುದರ ಮೂಲಕ ತುಂಬಿಕೊಳ್ಳಬೇಕು.

### ಭಾಗ-೨

### ಹಕ್ಕಿನ ಅಭಿವೃದ್ಧಿ

ಕೇಂದ್ರದಲ್ಲಿನ ಕಾಂಗ್ರೆಸ್ ಸರ್ಕಾರವು ಹಕ್ಕಿನ ಪರಿಭಾಷೆಯಲ್ಲಿ ಮಾತನಾಡುತ್ತಿದೆ. ಅದಕ್ಕೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯಿದೆ, ಶಿಕ್ಷಣದ ಹಕ್ಕು ಕಾಯಿದೆ, ಉದ್ಯೋಗದ ಹಕ್ಕು ಕಾಯಿದೆ ಮುಂತಾದವುಗಳನ್ನು ಜಾರಿಗೆ ತಂದಿದೆ. ಇದೀಗ ಅದು ಆಹಾರದ ಹಕ್ಕಿನ ಕಾಯಿದೆಯನ್ನು ಜಾರಿಗೊಳಿಸುವ ಕಾರ್ಯದಲ್ಲಿ ನಿರತವಾಗಿದೆ. ಇದಕ್ಕೆ ಪ್ರತಿಯಾಗಿ ನಮ್ಮ ರಾಜ್ಯದಲ್ಲಿ ಕಳೆದ ೫-೬ ವರ್ಷಗಳ ಅವಧಿಯಲ್ಲಿ ಅಭಿವೃದ್ಧಿಯನ್ನು ಹಂಗಿನ-ದಾನ-ದತ್ತಿಯ ಸಂಗತಿಯನ್ನಾಗಿ ಪರಿಭಾವಿಸಿಕೊಂಡು ಅದನ್ನು ನಿರ್ವಹಿಸುತ್ತಾ ಬಂದಿರುವುದು ಕಂಡುಬರುತ್ತದೆ. ಶಾಸಕರು, ಮಂತ್ರಿಗಳು, ರಾಜಕಾರಣಿಗಳು, ಉದ್ಯಮಿಗಳು ಮುಂತಾದವರು ಜನತಂತ್ರ ಸಂಸ್ಥೆಗಳನ್ನು ಮೂಲೆಗೆ ತಳ್ಳಿ ಜನರಿಗೆ ಕುಡಿಯುವ ನೀರನ್ನು, ರಸ್ತೆ-ಸೇತುವೆಗಳನ್ನು, ಚರಂಡಿ-ಸಮುದಾಯ ಭವನಗಳನ್ನು, ದೇವಾಲಯಗಳ ಜೀರ್ಣೋದ್ಧಾರಗಳನ್ನು ತಮ್ಮ ಸ್ವಂತ ಹಣದಿಂದ ದಾನ-ದತ್ತಿಯಾಗಿ ನಡೆಸಿಕೊಡುವ ಪದ್ಧತಿಯನ್ನು ರೂಢಿಗೆ ತರುತ್ತಿದ್ದಾರೆ. ಮಧ್ಯಾಹ್ನದ ಬಿಸಿ ಊಟದ ಅಕ್ಷರ ದಾಸೋಹವನ್ನು ಧಾರ್ಮಿಕ ಸಂಸ್ಥೆಗಳು ತಮ್ಮ ವಶಕ್ಕೆ ತೆಗೆದುಕೊಂಡು ಅಕ್ಷಯ ಪಾತ್ರೆಯನ್ನಾಗಿ ಮಾಡಿಬಿಟ್ಟಿವೆ. ಒಟ್ಟಾರೆ ಹಂಗಿನ, ದಾನದ, ದತ್ತಿಯ, ಉಂಬಳಿಯ ಸಂಗತಿಗಳು ಇಂದು ನಮ್ಮ ರಾಜ್ಯದಲ್ಲಿ ವಿಜೃಂಭಿಸುತ್ತಿವೆ. ಇದು ಪ್ರಜಾಪ್ರಭುತ್ವ ವಿರೋಧಿ ಕ್ರಮ. ಇದರಲ್ಲಿನ ಅತ್ಯಂತ ಅಪಾಯಕಾರಿ ಸಂಗತಿಯೆಂದರೆ ಇದು ಜನರ ಹಕ್ಕುಗಳನ್ನು ಕಸಿದುಕೊಂಡು ಅವರನ್ನು ಹಂಗಿನವರನ್ನಾಗಿ-ಯಾಚಕರನ್ನಾಗಿ ಮಾಡಿಬಿಡುತ್ತದೆ. ಈ ಹಂಗು-ಯಾಚಕತ್ವ ಅನ್ನುವುದು ಪಾರಮಾರ್ಥಿಕ ಪರಿಭಾಷೆ. ದಾನ-ದತ್ತಿ ನೀಡುವ ಸಂದರ್ಭದಲ್ಲಿ ಜನರು ಯಾವುದನ್ನೂ ಒತ್ತಾಯ ಮಾಡಲು ಅಥವಾ ಪ್ರಶ್ನಿಸಲು ಸಾಧ್ಯವಿಲ್ಲ. ಇಲ್ಲಿ ಪ್ರಶ್ನಿಸುವ ಹಕ್ಕನ್ನು ಜನರು ಕಳೆದುಕೊಂಡು ಬಿಡುತ್ತಾರೆ. ಇಲ್ಲಿ ಜನರು ಕೇವಲ ಫಲಾನುಭವಿಗಳಾಗುತ್ತಾರೆ ವಿನಾ ಅಭಿವೃದ್ಧಿಯ ಹಕ್ಕುದಾರರು – ಪಾಲುದಾರರಾಗುವುದಿಲ್ಲ. ಇಂತಹ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವವಿರುವುದಿಲ್ಲ.

ಅಮರ್ತ್ಯ ಸೇನ್ ಮತ್ತೆ ಮತ್ತೆ ಒತ್ತಿ ಹೇಳುತ್ತಿರುವಂತೆ ಜನರು ಅಭಿವೃದ್ಧಿಯ ಚಾಲಕ ಶಕ್ತಿಯೂ ಆಗಬೇಕು. ಬಡತನವನ್ನು ನಿವಾರಣೆ 'ಮಾಡುವುದು' ಬೇರೆ, ಬಡತನವನ್ನು ನಿವಾರಣೆ 'ಮಾಡಿಕೊಳ್ಳುವುದು' ಬೇರೆ. ಈ 'ಮಾಡುವುದು' ಎಂಬುದು ಹಂಗಿನ ಪರಿಭಾಷೆಯಾದರೆ 'ಮಾಡಿಕೊಳ್ಳುವುದು' ಎಂಬುದು ಹಕ್ಕಿನ ಪರಿಭಾಷೆ. ಜನರು ತಮ್ಮ ಬಡತನವನ್ನು ನಿವಾರಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಅವರು ಚಾಲಕ ಶಕ್ತಿಯಾಗಿ ಅದರಲ್ಲಿ ಸಹಭಾಗಿಗಳಾಗಲು ಅವಕಾಶವಿರಬೇಕು. ಆದರೆ ಪಾರಮಾರ್ಥಿಕ ರಾಜಕಾರಣ ಮತ್ತು ಹಂಗಿನ ಅಭಿವೃದ್ಧಿಯು ಜನರ ಸಹಭಾಗಿತ್ವದ ಅವಕಾಶವನ್ನು ಕಸಿದುಕೊಂಡು ಬಿಡುತ್ತದೆ. ಕಳೆದ ೫-೬ ವರ್ಷಗಳಲ್ಲಿ ಪದಾರ್ಥವಾದಿ ರಾಜಕಾರಣಕ್ಕೆ ಮತ್ತು ಹಕ್ಕಿನ ಅಭಿವೃದ್ಧಿಗೆ ಕುತ್ತು ಬಂದಿತ್ತು. ಹಿಂದಿನ ಸರ್ಕಾರವು ಜಾರಿಗೊಳಿಸಿದ್ದ ಸೀರೆ ಹಂಚುವ ಕಾರ್ಯಕ್ರಮವೇನಿತ್ತು ಅದು ಹಂಗಿನ ಅಭಿವೃದ್ಧಿಗೆ ಒಳ್ಳೆಯ ಉದಾಹರಣೆ. ಪಾರಮಾರ್ಥಿಕ ರಾಜಕಾರಣದಲ್ಲಿ ಹಂಗಿನ ಅಭಿವೃದ್ಧಿ ಮಾತ್ರ ಸಾಧ್ಯವಾಗುತ್ತದೆ ವಿನಾ ಹಕ್ಕಿನ, ಘನತೆಯಿಂದ ಕೂಡಿದ ಬದುಕನ್ನು ಒದಗಿಸಬಲ್ಲ ಅಭಿವೃದ್ಧಿ ಸಾಧ್ಯವಿಲ್ಲ.

ಈಗ ಅಧಿಕಾರ ವಹಿಸಿಕೊಂಡಿರುವ ಹೊಸ ಸರ್ಕಾರವು ಈ ಹಂಗಿನ ಅಭಿವೃದ್ಧಿಗೆ ಇತಿಶ್ರೀ ಹಾಡಬೇಕು. ಕಾಂಗ್ರೆಸ್ ಸರ್ಕಾರವು ಪದಾರ್ಥವಾದಿ ರಾಜಕಾರಣಕ್ಕೆ ಆದ್ಯತೆ


## ನಮ್ಮ ಇತ್ತೀಚಿನ ಪ್ರಕಟಣೆಗಳು



₹ ೫೫



₹ ೧೨೫



₹ ೨೫



₹ ೧೨೦



₹ ೫೦



ಮೂರನೇ ಆವೃತ್ತಿ ₹ ೧೯೦



ಎರಡನೇ ಆವೃತ್ತಿ ₹ ೭೦

ಸಂಪರ್ಕಿಸಬೇಕಾದ ವಿಳಾಸ



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆಪೆಟ್ಟಿಗೆ ಸಂಖ್ಯೆ ೫೧೫೫, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೨೦೩೫೮೦, ೩೦೫೭೮೦೨೨ ಫ್ಯಾಕ್ಸ್ : ೩೦೫೭೮೦೨೩
email : navakarnataka@gmail.com website : www.navakarnataka.com

'ಹೊಸತು' ಪತ್ರಿಕೆಗೆ ಮೂರು ವರ್ಷಗಳ ಚಂದಾ ನೀಡಿದವರಿಗೆ ೨೦% ರಿಯಾಯಿತಿ

ಅಂಚೆ ಮೂಲಕ ಬೇಕಾದಲ್ಲಿ ಪುಸ್ತಕದ ಬೆಲೆಯೊಂದಿಗೆ ಅಂಚೆವೆಚ್ಚ ರೂ. ೩೦/– ಸೇರಿಸಿ ಮೇಲ್ಕಂಡ ವಿಳಾಸಕ್ಕೆ ಎಂ.ಒ. ಅಥವಾ ಡಿ.ಡಿ. ಕಳಿಸಿ.

ನೀಡಬೇಕು. ಅಭಿವೃದ್ಧಿ ಅನ್ನುವುದು ದಾನ-ದತ್ತಿ-ಉಂಬಳಿಯ ಸಂಗತಿಯಲ್ಲ. ಮೆಹಬೂಬ್ ಉಲ್ ಹಕ್ ಹೇಳಿದಂತೆ ಅಭಿವೃದ್ಧಿಯು ಜನರಿಗೆ ಘನತೆಯಿಂದ ಬದುಕುವುದು ಸಾಧ್ಯವಾಗುವ ಅವಕಾಶವನ್ನು ಮತ್ತು ಸ್ವಾತಂತ್ರ್ಯವನ್ನು ಒದಗಿಸಬೇಕು. ಬಡವರು ತಮ್ಮನ್ನು ತಾವು ಬಡತನದ ವರ್ತುಲದಿಂದ ಬಿಡುಗಡೆಗೊಳಿಸಿಕೊಳ್ಳಲು ಅಗತ್ಯವಾದ ಸಾಮರ್ಥ್ಯ ಮತ್ತು ಸ್ವಾತಂತ್ರ್ಯವನ್ನು ಅಭಿವೃದ್ಧಿ ಜನರಿಗೆ ನೀಡುವಂತಾಗಬೇಕು. 'ಸ್ವಾತಂತ್ರ್ಯವಾಗಿ ಅಭಿವೃದ್ಧಿ' ಎಂದು ಅಮರ್ತ್ಯ ಸೆನ್ ಅಭಿವೃದ್ಧಿಯನ್ನು ನಿರ್ವಚಿಸಿದಾಗ ಅವನು ಹಕ್ಕಿನ ಅಭಿವೃದ್ಧಿಯ ಬಗ್ಗೆ ಮಾತನಾಡುತ್ತಿದ್ದಾನೆ. ಕಳೆದ ಐದು ವರ್ಷಗಳ ಅವಧಿಯಲ್ಲಿ ಸರ್ಕಾರವು ನಿರ್ವಹಿಸಿಕೊಂಡು ಬರುತ್ತಿದ್ದ ಹಂಗಿನ ಅಭಿವೃದ್ಧಿಯನ್ನು ಕೊನೆಗೊಳಿಸಿ ಇಂದು ಸರ್ಕಾರದ ಚುಕ್ಕಾಣಿ ಹಿಡಿದಿರುವ ಕಾಂಗ್ರೆಸ್ ಹಕ್ಕಿನ ಮೌಲ್ಯಗಳ ಆಧಾರದಲ್ಲಿ ಅಭಿವೃದ್ಧಿಯನ್ನು ಹಮ್ಮಿಕೊಳ್ಳಬೇಕು. ಈ ಸೈದ್ಧಾಂತಿಕ ಸವಾಲನ್ನು ಕಾಂಗ್ರೆಸ್ ಸರ್ಕಾರವು ಹೇಗೆ ಎದುರಿಸುತ್ತದೆ ಎಂಬುದನ್ನು ಕಾದು ನೋಡಬೇಕಾಗಿದೆ.



### ಭಾಗ-೩

### ಕೃಷಿಯ ಬಿಕ್ಕಟ್ಟು-ರೈತರ ರಥೋತ್ಸವ

ಕೃಷಿಯ ಅಭಿವೃದ್ಧಿಗೆ ಸಂಬಂಧಿಸಿದಂತೆ ಹಿಂದಿನ ಸರ್ಕಾರವು ಅತ್ಯಂತ ಅಪ್ರಬುದ್ಧವಾಗಿ ನಡೆದುಕೊಂಡ ಉದಾಹರಣೆ ನಮ್ಮ ಮುಂದಿದೆ. ಕೃಷಿಯನ್ನು ಕಾಡುತ್ತಿದ್ದ ಸಮಸ್ಯೆಗಳನ್ನು ನಿವಾರಿಸುವುದಕ್ಕೆ ಪ್ರತಿಯಾಗಿ ಅದು ತಾನೇ ಹೊಸ ಹೊಸ ಸಮಸ್ಯೆಗಳನ್ನು ಸೃಷ್ಟಿ ಮಾಡುವಲ್ಲಿ ನಿರತವಾಗಿತ್ತು. ಇದಕ್ಕೆ ಅಪ್ಪಟ ನಿದರ್ಶನವೆಂದರೆ 'ಜಾನುವಾರು ಹತ್ಯಾ ನಿಷೇಧ' ಕಾಯಿದೆ. ರೈತರು ಯಾವತ್ತೂ ಜಾನುವಾರುಗಳ ಹತ್ಯೆಯನ್ನು ನಿಷೇಧಿಸುವಂತೆ ಕೇಳಿರಲಿಲ್ಲ. ಇಲ್ಲದ ಸಂಗತಿಯನ್ನು ಭೂತಾಕಾರವಾಗಿ ಬೆಳೆಸಿ ಸಮಸ್ಯೆಯನ್ನಾಗಿ ಸರ್ಕಾರವೇ ಮಾಡಿತು. ಸಾವಯವ ಕೃಷಿಯ ಬಗ್ಗೆ ನೂರಾರು ಕೋಟಿ ರೂಪಾಯಿಯನ್ನು ವಿನಿಯೋಗಿಸಿ ಅದಕ್ಕೆ ಒಂದು ಮಿಷನ್ ರಚಿಸಲಾಯಿತು. ಆದರೆ ಅಲ್ಲಿ ನಡೆದದ್ದೇನು? ರೈತರ ರಥೋತ್ಸವವನ್ನು ಅದು ಅದ್ದೂರಿಯಾಗಿ ನಡೆಸಿತು. ಅದನ್ನು ಪಾರಮಾರ್ಥಿಕೀಕರಣಗೊಳಿಸುವ ಕೆಲಸವನ್ನು ಅದು ಮಾಡಿತು. ಬಜೆಟ್ಟಿನಲ್ಲಿದ್ದ ಕೃಷಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನೆಲ್ಲಾ ಒಂದು ಕಡೆ ಪಟ್ಟಿಮಾಡಿ ಪ್ರತ್ಯೇಕ 'ಕೃಷಿ ಬಜೆಟ್' ಮಂಡಿಸುತ್ತಿದ್ದೇವೆ ಎಂದು ಬೀಗುವ ಕೆಲಸ ಮಾಡಿತು. ಕೃಷಿ ಬಜೆಟ್ಟಿನಿಂದ ಕೃಷಿಯಲ್ಲಿ ಏನಾದರೂ ಬದಲಾವಣೆ ಉಂಟಾಗಿದೆಯೇ? ಕೃಷಿಗೆ ಪ್ರತ್ಯೇಕ ಬಜೆಟ್ಟನ್ನು ಮಂಡಿಸುವುದಕ್ಕೆ ಪೂರ್ವದ ಕಾಲಾವಧಿಯಲ್ಲಿ ಮತ್ತು ಅದನ್ನು ಮಂಡಿಸಿದ ನಂತರದ ಕಾಲಾವಧಿಯಲ್ಲಿ ಕೃಷಿಯಲ್ಲಿ ಎದ್ದು ಕಾಣಬಹುದಾದ ಮತ್ತು ಹೊಸದು ಅನ್ನಬಹುದಾದ ಬದಲಾವಣೆಗಳೇನಾದರೂ ಸಂಭವಿಸಿವೆಯೇ? ಇಲ್ಲಿ ಉತ್ತರ ಇಲ್ಲ ಎಂಬುದೇ ಆಗಿದೆ. ಕಳೆದ ೫-೬ ವರ್ಷಗಳಲ್ಲಿ ಸರ್ಕಾರವು ಕೃಷಿಗೆ ಸಂಬಂಧಿಸಿದಂತೆ ಮಾಡಿದ್ದೆಲ್ಲವೂ ಕೇವಲ ಜನಲೋಲುಪತೆಯ ಗಿಮಿಕ್‌ಗಳು.

ನಿಜಕ್ಕೂ ನಮ್ಮ ರಾಜ್ಯದಲ್ಲಿನ ಕೃಷಿಯ ಬಿಕ್ಕಟ್ಟುಗಳಾವುವು? ಅದರ ಮೂಲ ಎಲ್ಲಿದೆ? ಯಾಕೆ ರೈತರು ಕೃಷಿಯನ್ನು ಬಿಟ್ಟು ನಗರಗಳ ಕಡೆಗೆ ವಲಸೆ ಹೋಗುತ್ತಿದ್ದಾರೆ? ಕೃಷಿ ಸಾಗುವಳಿ ಪ್ರದೇಶ ಯಾಕೆ ಕುಗ್ಗುತ್ತಿದೆ? ಗ್ರಾಮೀಣ ಪ್ರದೇಶದಿಂದ ಜನರು ಬದುಕನ್ನು ಅರಸಿಕೊಂಡು ಯಾಕೆ ನಗರಗಳ ಕಡೆಗೆ ವಲಸೆ ಹೋಗುತ್ತಿದ್ದಾರೆ? ಇದಾವುದರ ಬಗ್ಗೆಯೂ ಹಿಂದಿನ ಸರ್ಕಾರ ಕಿವಿಗೊಡಲಿಲ್ಲ-ಗಮನ ಹರಿಸಲಿಲ್ಲ. ತಾನು ಗುರುತಿಸಿದ್ದೇ ಸಮಸ್ಯೆ; ತಾನು ಹಮ್ಮಿಕೊಂಡಿದ್ದೇ ಪರಿಹಾರ ಎನ್ನುವಂತೆ ಅದು ನಡೆದುಕೊಂಡಿತು.

ನಮ್ಮ ರಾಜ್ಯದಲ್ಲಿ ಒಣಭೂಮಿ ಬೇಸಾಯ ವ್ಯಾಪಕವಾಗಿದೆ. ಅದರ ಅಭಿವೃದ್ಧಿ ಕಾರ್ಯಕ್ರಮವು ಒಂದು ರೀತಿಯಲ್ಲಿ 'ಬಡತನ ನಿವಾರಣಾ ಕಾರ್ಯಕ್ರಮ'ವೇ ಆಗಿದೆ. ಬಡತನವು ಹೆಚ್ಚು ಮಡುಗಟ್ಟಿಕೊಂಡಿರುವುದು ಒಣಭೂಮಿ ಪ್ರದೇಶದಲ್ಲಿ ಎಂಬುದನ್ನು ಹೇಳಬೇಕಾದ ಅಗತ್ಯವಿಲ್ಲ. ನಾವು ಬಹಳ ಹಿಂದಿನಿಂದಲೂ ಒಣಭೂಮಿ ಬೇಸಾಯದ ಅಭಿವೃದ್ಧಿಗೆ ಗಮನ ನೀಡದೆ ನೀರಾವರಿ ಯೋಜನೆಗಳಿಗೆ ಲಕ್ಷಾಂತರ ಕೋಟಿ ರೂಪಾಯಿ ಹಣವನ್ನು ವಿನಿಯೋಗಿಸುತ್ತಿದ್ದೇವೆ. ಅದು ಪ್ರಧಾನವಾಗಿ ಭೂಮಾಲೀಕರ ಹಿತಾಸಕ್ತಿಗಳನ್ನು ಪೂರೈಸಿತೇ ವಿನಾ ಭೂರಹಿತ ಕೃಷಿ ದಿನಗೂಲಿ ದುಡಿಮೆಗಾರರ, ಕರಕುಶಲಕರ್ಮಿಗಳ ಬವಣೆಯನ್ನು ನೀಗಲಿಲ್ಲ. ಭೂಮಿತಿ ಶಾಸನದ ಬಗ್ಗೆ ಇಂದು ಸರ್ಕಾರಗಳು ಮಾತನಾಡಲೂ ಸಿದ್ಧವಿಲ್ಲ. ಕೃಷಿ ಮಾರುಕಟ್ಟೆ ವ್ಯವಸ್ಥೆಯು ದಲ್ಲಾಳಿಗಳ ಕೃಪೆಯಲ್ಲಿ ಕೆಲಸ ಮಾಡುತ್ತಿವೆ.

ನಮ್ಮ ರಾಜ್ಯದಲ್ಲಿ ಸರಿಸುಮಾರು ೫೦ ಲಕ್ಷ ಭೂರಹಿತ ಕೃಷಿ ದಿನಗೂಲಿ ದುಡಿಮೆಗಾರರಿದ್ದಾರೆ. ಸರಿಸುಮಾರು ೬೦-೬೫ ಲಕ್ಷ ಸಾಗುವಳಿದಾರರಿದ್ದಾರೆ. ಕೃಷಿ, ನೀರಾವರಿ, ಹೈನುಗಾರಿಕೆ, ವಿದ್ಯುತ್ ಸರಬರಾಜು, ಆಹಾರ ಸಂಸ್ಕರಣೆ ಮುಂತಾದವುಗಳ ಮೇಲೆ ಸರ್ಕಾರ ಬಂಡವಾಳ ವಿನಿಯೋಗಿಸುತ್ತಿದೆ. ಆದರೆ ಇದು ಯಾರಿಗೆ ಅನುಕೂಲ ಒದಗಿಸುತ್ತದೆ? ಈ ಬಗೆಯ ಬಂಡವಾಳ ವಿನಿಯೋಜನೆಯು ಸಮಾಜದ ಯಾವ ವರ್ಗಗಳ ಹಿತಾಸಕ್ತಿಗಳನ್ನು ಪೂರೈಸುತ್ತದೆ? ಕೃಷಿಗೆ ಸಂಬಂಧಿಸಿದ ರಾಜಕೀಯಾರ್ಥಶಾಸ್ತ್ರವನ್ನು ಅರ್ಥಮಾಡಿಕೊಳ್ಳದೆ ಕೃಷಿ ಅಭಿವೃದ್ಧಿ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿರುವುದರಲ್ಲಿ ಸಮಸ್ಯೆಯ ಮೂಲ ಇರುವಂತೆ ಕಾಣುತ್ತಿದೆ. ಭೂರಹಿತ ಕೃಷಿ ದಿನಗೂಲಿ ದುಡಿಮೆಗಾರರ ಸಮಸ್ಯೆಗಳ ಕಡೆಗೆ ನಾವು ಗಮನಹರಿಸಿದ್ದೇ ಇಲ್ಲ. ಈ ದುಡಿಮೆಗಾರರಲ್ಲಿ ಪರಿಶಿಷ್ಟರ ಪ್ರಮಾಣ, ಹಿಂದುಳಿದ ವರ್ಗಗಳ ಪ್ರಮಾಣ ಮತ್ತು ಒಟ್ಟಾರೆ ಮಹಿಳೆಯರ ಪ್ರಮಾಣ ಅಧಿಕವಾಗಿದೆ.

ಕೃಷಿಗೆ ಸಂಬಂಧಿಸಿದಂತೆ ಹೊಸ ಸರ್ಕಾರ ಏನು ಮಾಡಬಹುದು ಎಂಬುದಕ್ಕೆ ಕೆಲವು ಸಲಹೆಗಳನ್ನು ಇಲ್ಲಿ ನೀಡಲಾಗಿದೆ. ಇಂದು ನಮ್ಮ ರಾಜ್ಯದಲ್ಲಿ ಅಧಿಕಾರಕ್ಕೆ ಬಂದಿರುವ ಕಾಂಗ್ರೆಸ್ ಸರ್ಕಾರಕ್ಕೆ ಬೆಂಬಲ ಬಲವಾಗಿ ಬಂದಿರುವುದು ದಲಿತ-ಹಿಂದುಳಿದ ವರ್ಗಗಳಿಂದ ಎಂಬುದನ್ನು ಅದು ಮರೆಯಬಾರದು. ಈ ಹಿನ್ನೆಲೆಯಲ್ಲಿ ಅದು ಕೆಳಗಿನ ಸಂಗತಿಗಳನ್ನು ಪರಿಗಣಿಸಬಹುದು.

೧. ಭೂ ಸುಧಾರಣೆ, ಅಂದರೆ ಭೂಮಿತಿ ಶಾಸನದ ಬಗ್ಗೆ ಅದು ಗಂಭೀರವಾಗಿ ಚಿಂತಿಸಬೇಕು. ಅದಕ್ಕೆ ಮರು ಭೇಟಿ ನೀಡುವ ಅಗತ್ಯವಿದೆ. ಹೆಚ್ಚುವರಿ ಭೂಮಿಯನ್ನು ಭೂರಹಿತರಿಗೆ ಹಂಚುವ ಕಾರ್ಯಕ್ರಮಕ್ಕೆ ಚಾಲನೆ ನೀಡಬಹುದು.

೨. ಭೂರಹಿತ ದಿನಗೂಲಿ ದುಡಿಮೆಗಾರರ ನೋಂದಣಿಯಾಗಬೇಕು. ನಗರ ಪ್ರದೇಶಗಳಿಗೆ ಅವರು ವಲಸೆ ಹೋದಾಗ ಅವರಿಗೆ ಸಾಮಾಜಿಕ ಭದ್ರತೆಯನ್ನು ನೀಡುವುದು ಇದರಿಂದ ಸುಲಭವಾಗುತ್ತದೆ.

೩. ಒಣಭೂಮಿ ಬೇಸಾಯದ ಅಭಿವೃದ್ಧಿಗೆ ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಅಗತ್ಯ. ಇದೊಂದು ವಿವಿಧೋದ್ದೇಶ ಕಾರ್ಯಕ್ರಮವಾಗಬೇಕು. ಮೊದಲನೆಯದಾಗಿ ಅದು ಬಡತನ ನಿವಾರಣಾ ಕಾರ್ಯಕ್ರಮವಾಗಬೇಕು. ಎರಡನೆಯದಾಗಿ ಜಲಸಂಪನ್ಮೂಲದ ರಕ್ಷಣೆಯ ಕಾರ್ಯಕ್ರಮವಾಗಬೇಕು. ಮಳೆ ನೀರಿನ ಕೊಯಿಲು, ಚೆಕ್ ಡ್ಯಾಮುಗಳ ನಿರ್ಮಾಣ, ಅರಣ್ಯ ಪ್ರದೇಶದ ಅಭಿವೃದ್ಧಿ, ಭೂಸಂರಕ್ಷಣೆ, ಜಲಾನಯನ ಪ್ರದೇಶದ ಅಭಿವೃದ್ಧಿ ಮುಂತಾದ

## ಆಸೆ – ನಿರಾಸೆ



ನಾನು ಚಂದ್ರ - ತಾರೆಗಳನು ಬಯಸಿದ್ದೆ
ಆದರೆ ನನಗೆ ಇರುಳ ಮಸಿಯ ಹೊರತಾಗಿ
ಬೇರೇನೂ ಸಿಗಲಿಲ್ಲ.
ನಾನು ಚಂದ್ರ - ತಾರೆಗಳನು ಬಯಸಿದ್ದೆ.

ಶ್ರೋತೃವೃಂದದ ಪ್ರೀತಿ ಸಿಗದ ಹಾಡು ನಾನಾಗಿರುವೆ,
ಯಾವ ಗುರಿಯೂ ಸಿಗದ ಪಯಣಿಗ ನಾನಾಗಿರುವೆ.
ನಾನು ತಂಪೆರೆಯುವ ಗಾಳಿಯನು ಬಯಸಿದರೆ
ನನಗೆ ಸಿಕ್ಕಿದ್ದು ಗಾಯದ ಉರಿ ಮಾತ್ರ.
ನಾನು ಚಂದ್ರ - ತಾರೆಗಳನು ಬಯಸಿದ್ದೆ.

ನನಗೆ ಯಾವ ಕೇಶರಾಶಿಯ, ಯಾವ ಸೆರಗ ಆಸರೆಯೂ ಸಿಗಲಿಲ್ಲ,
ನನ್ನ ದಾರಿಯಲಿ ಒಂದು ಅಸ್ಪಷ್ಟತಾರೆಯೂ ಸಿಗಲಿಲ್ಲ,
ನನ್ನ ಕಣ್ಣುಗಳು ಪ್ರೇಮದ ನೋಟವನ್ನು ಬಯಸಿದ್ದವು
ನಾನು ಚಂದ್ರ - ತಾರೆಗಳನು ಬಯಸಿದ್ದೆ.

ನನ್ನ ದಾರಿಯಿಂದ ಬೇರೆಯಾಯಿತು ಅವಳ ದಾರಿ
ನನ್ನ ಹೃದಯವು ಅವಳ ನೋಟದ ಆಸರೆಯನ್ನು ಬಯಸಿತ್ತು,
ಆದರೆ ಇಂದು ನನಗೆ ಅವಳ ನೋಟವೂ ಬದಲಾದಂತೆ ಕಾಣುತ್ತಿದೆ.
ನಾನು ಚಂದ್ರ - ತಾರೆಗಳನು ಬಯಸಿದ್ದೆ.

ಪ್ರೀತಿಯನ್ನು ಕೇಳಿದರೆ ತವಕ ತಲ್ಲಣ ದೊರೆಯಿತು,
ನೆಮ್ಮದಿ ಬಯಸಿದರೆ ಬಿರುಗಾಳಿ ದೊರೆಯಿತು.
ಮುಳುಗುತ್ತಿರುವ ಹೃದಯವು ದಡವನ್ನು ಬಯಸಿತ್ತು.
ನಾನು ಚಂದ್ರ - ತಾರೆಗಳನು ಬಯಸಿದ್ದೆ.
ನನಗೆ ಇರುಳ ಮಸಿಯ ಹೊರತಾಗಿ
ಬೇರೇನೂ ಸಿಗಲಿಲ್ಲ.
ನಾನು ಚಂದ್ರ - ತಾರೆಗಳನು ಬಯಸಿದ್ದೆ.

ಉರ್ದು ಮೂಲ : **ಸಾಹಿರ್ ಲುಧಿಯಾನ್ವಿ**
ಕನ್ನಡಕ್ಕೆ : **ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ**
೭೩, 'ಶ್ರೀ ಲಕ್ಷ್ಮೀ ವೆಂಕಟೇಶ್ವರ ನಿಲಯ', ಎಸ್. ನಿಜಲಿಂಗಪ್ಪ ಬಡಾವಣೆ, ದಾವಣಗೆರೆ

ಕಾರ್ಯಕ್ರಮಗಳ ಒಂದು ಗುಚ್ಛವಾಗಬೇಕು.

೪. ಆಹಾರ ಉತ್ಪನ್ನವನ್ನು ಹೆಚ್ಚು ಬೆಳೆಯುವುದು ಅಗತ್ಯ. ಆದರೆ ಅದೇ ಕೃಷಿ ಅಭಿವೃದ್ಧಿಯ ಆತ್ಯಂತಿಕ ಗುರಿಯಾಗಬಾರದು. ಈಗಿರುವ ಉತ್ಪಾದನೆಯ ಮಟ್ಟದಲ್ಲಿ ಜನರ ಆಹಾರ ಭದ್ರತೆಯನ್ನು ಕಾಪಾಡಬಹುದು. ಇದಕ್ಕೆ ಜನರನ್ನು ಒಳಗೊಂಡ ಅಭಿವೃದ್ಧಿ ಕಾರ್ಯತಂತ್ರ ಅಗತ್ಯ. ಕೃಷಿ ಅಭಿವೃದ್ಧಿಯೆಂದರೆ ವಾಸ್ತವಿಕವಾಗಿ ಅದು ಕೃಷಿಕರ ಅಭಿವೃದ್ಧಿ.

೫. ಕೃಷಿಯ ಬೆಳವಣಿಗೆಗೆ ಸಂಬಂಧಿಸಿದಂತೆ ಪ್ರಾದೇಶಿಕ ಭಿನ್ನತೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ವಿವಿಧ ಪ್ರದೇಶಗಳು ವಿವಿಧ ಬೆಳೆ ಪದ್ಧತಿಯನ್ನು ಅನುಸರಿಸಬೇಕು. ಉದಾಹರಣೆಗೆ ತೋಟಗಾರಿಕೆ ಬೆಳೆಗಳಿಗೆ ಸೂಕ್ತವಾದ ಮಣ್ಣು ಮತ್ತು ವಾತಾವರಣವಿರುವ ವಿಜಾಪುರ, ಬಾಗಲಕೋಟೆ, ರಾಯಚೂರು, ಗದಗ, ಗುಲಬರ್ಗಾ ಜಿಲ್ಲೆಗಳಲ್ಲಿ ಅದಕ್ಕಾಗಿ ವಿಶೇಷ ಉತ್ತೇಜನ ನೀಡಬೇಕು. ಈ ಜಿಲ್ಲೆಗಳಲ್ಲಿನ ಒಟ್ಟು ಸಾಗುವಳಿ ಪ್ರದೇಶದಲ್ಲಿ ಶೇ. ೫ರಷ್ಟು ತೋಟಗಾರಿಕೆ ಬೆಳೆಗಳ ಪ್ರದೇಶವಿಲ್ಲ. ಕನಿಷ್ಠ ಮುಂದಿನ ಐದು ವರ್ಷಗಳಲ್ಲಿ ರಾಜ್ಯದಲ್ಲಿ ಮತ್ತು ಸದರಿ ಜಿಲ್ಲೆಗಳಲ್ಲಿ ತೋಟಗಾರಿಕೆ ಬೆಳೆಗಳ ಪ್ರದೇಶದ ಪ್ರಮಾಣವನ್ನು ಶೇ. ೨೫ರಷ್ಟಕ್ಕೆ ಏರಿಸುವ ಕೆಲಸವಾಗಬೇಕು. ಇದರ ಜೊತೆಗೆ ಹಣ್ಣು-ತರಕಾರಿ ಸಂಸ್ಕರಣ ಘಟಕಗಳನ್ನು ತೆರೆಯುವುದಕ್ಕೆ ಪ್ರೋತ್ಸಾಹ ನೀಡಬೇಕು. ಇದರಿಂದ ಕೃಷಿಯಲ್ಲಿ ಮತ್ತು ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗದ ಅವಕಾಶಗಳನ್ನು ವಿಸ್ತೃತಗೊಳಿಸಬಹುದು.

೬. ಕೃಷಿಯಲ್ಲಿ ಸಾರ್ವಜನಿಕ ಬಂಡವಾಳ ಹೂಡಿಕೆ ಪ್ರಮಾಣ ನೆಲ ಕಚ್ಚಿದೆ ಮತ್ತು ದಶಕದಿಂದ ದಶಕಕ್ಕೆ ಅದು ಕಡಿಮೆಯಾಗುತ್ತಿದೆ. ಕೃಷಿಯ ಅಭಿವೃದ್ಧಿಗೆ ಖಾಸಗಿ ಬಂಡವಾಳದ ಹೂಡಿಕೆಯನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಸರ್ಕಾರವು ಕೃಷಿಯ ಮೇಲೆ ಹೆಚ್ಚುಹೆಚ್ಚು ಬಂಡವಾಳ ತೊಡಗಿಸಬೇಕು.

೭. ಕೃಷಿಯ ಕಾರ್ಪೊರೇಟೀಕರಣದ ಬಗ್ಗೆ ತುಂಬ ಮಾತುಗಳು ಕೇಳಿ ಬರುತ್ತಿವೆ. ಇದು ಅತ್ಯಂತ ಅಪಾಯಕಾರಿ ಬೆಳವಣಿಗೆಯಾಗಿದೆ. ಹಿಂದಿನ ಸರ್ಕಾರ ಕೃಷಿಯಲ್ಲಿನ ಬಂಡವಾಳ ಹೂಡಿಕೆಯ ಬಗ್ಗೆಯೂ ಜಾಗತಿಕ ಸಮಾವೇಶ ಮಾಡುವ ಪ್ರಯತ್ನ ನಡೆಸಿತು. ನಮ್ಮ ರಾಜ್ಯದಲ್ಲಿ ಒಂದು ಕೋಟಿಗೂ ಮಿಕ್ಕು ಜನರು ಕೃಷಿಯನ್ನು ಜೀವನಾಧಾರಕ್ಕೆ ಅವಲಂಬಿಸಿಕೊಂಡಿದ್ದಾರೆ. ಕೃಷಿಯ ಕಾರ್ಪೊರೇಟೀಕರಣದಿಂದ ಅವರ ಬಾಳು ಮುರುಟಿ ಹೋಗುತ್ತದೆ. ಅದಕ್ಕೆ ಅವಕಾಶ ಕೊಡಬಾರದು.

೮. ಕೃಷಿ ಮಾರುಕಟ್ಟೆ ಮತ್ತು ಅಲ್ಲಿನ ಹಣಕಾಸು ವ್ಯವಸ್ಥೆಯು ಶೋಷಣಾತ್ಮಕವಾಗಿದೆ. ರೈತರ ಆತ್ಮಾಹುತಿಗೆ ಇದು ಒಂದು ಮುಖ್ಯ ಕಾರಣವಾಗಿದೆ. ಇವೆರಡೂ ಕ್ಷೇತ್ರಗಳಲ್ಲಿ ಸಾರ್ವಜನಿಕ ವಲಯದ ಪಾತ್ರ ಕಡಿಮೆಯಾಗುತ್ತಿದೆ. ಸಣ್ಣ-ಅತಿಸಣ್ಣ ರೈತರು ಕೃಷಿ ಮಾಡಲು ಸಾಧ್ಯವೇ ಇಲ್ಲ ಎಂಬ ವಾತಾವರಣ ಉಂಟಾಗಿದೆ. ಇದನ್ನು ಸರಿಪಡಿಸುವ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕು. ಉದಾಹರಣೆಗೆ ಕೃಷಿಗೆ ಸಂಬಂಧಿಸಿದ ಉಗ್ರಾಣಗಳು ಮತ್ತು ಶೈತ್ಯಾಗಾರಗಳು. ಇವೆರಡೂ ಕ್ಷೇತ್ರಗಳು ತೀವ್ರಗತಿಯಲ್ಲಿ ಬೆಳೆಯುತ್ತಿವೆ. ಇಲ್ಲಿ ಖಾಸಗಿ ವಲಯದ್ದೇ ಆಡಳಿತ. ಈ ಬಗ್ಗೆ ನಾವು ಭಿನ್ನ ವ್ಯವಸ್ಥೆಯನ್ನು ಕಟ್ಟುವ ಬಗ್ಗೆ ಯೋಚಿಸಬೇಕು.

೯. ಕೃಷಿಯಲ್ಲಿ ಪಾರಮಾರ್ಥೀಕರಣಕ್ಕೆ ಅವಕಾಶವಿರಬಾರದು. ಹಿಂದಿನ ಸರ್ಕಾರವು ರೈತರ ರಥೋತ್ಸವವನ್ನು ನಡೆಸಿತು. ಇದರಿಂದ ತಪ್ಪು ಸಂದೇಶ ಜನರಿಗೆ ತಲಪಿ ಬಿಡುತ್ತದೆ. ಕೃಷಿಯ ಅಭಿವೃದ್ಧಿಯು ವೈಜ್ಞಾನಿಕವಾಗಿ ನಡೆಯಬೇಕು. ಬದಲಾಗುತ್ತಿರುವ ಜನಸಂಖ್ಯಾ ರಚನೆ, ಅದರ ಬೆಳವಣಿಗೆ ಗತಿ, ಪರಿಸರಕ್ಕೆ ಸಂಬಂಧಿಸಿದ ಸಂಗತಿಗಳು ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಕೃಷಿ ನೀತಿಯನ್ನು ರೂಪಿಸಬೇಕು.

೧೦. ಕೃಷಿ ಭೂಮಿಯನ್ನು ಇತರೆ ಉದ್ದೇಶಗಳಿಗೆ ವರ್ಗಾಯಿಸುವ ಕಾರ್ಯ ವ್ಯಾಪಕವಾಗಿ ನಡೆಯುತ್ತಿದೆ. ಇದನ್ನು ಈಗಿನ ಸರ್ಕಾರ ನಿಲ್ಲಿಸಬೇಕು. ಹೈವೇ ಹೆಸರಿನಲ್ಲಿ, ಉದ್ದಿಮೆ ಹೆಸರಿನಲ್ಲಿ, ಬಡಾವಣೆ ಕಟ್ಟಲು, ಎಸ್‌ಈಜಡ್ ಸ್ಥಾಪಿಸಲು ಕೃಷಿ ಭೂಮಿಯನ್ನು ಆಕ್ರಮಿಸಿಕೊಳ್ಳಲಾಗುತ್ತಿದೆ. ಇದನ್ನು ನಿಷೇಧಿಸಬೇಕು.

### ಭಾಗ-೪

**ಮಹಿಳೆಯರ ಸಬಲೀಕರಣ**

ಈಗಾಗಲೆ ಹೇಳಿರುವಂತೆ ಕಳೆದ ೫-೬ ವರ್ಷಗಳ ಅವಧಿಯಲ್ಲಿ ಮಹಿಳೆಯರ ಅಭಿವೃದ್ಧಿಯನ್ನು ಒಂದೋ ವರಮಹಾಲಕ್ಷ್ಮಿ ಪೂಜೆಗೆ ಸೀಮಿತಗೊಳಿಸಲಾಗಿತ್ತು ಇಲ್ಲವೇ



ಸೀರೆ ಹಂಚುವ ಕಾರ್ಯವನ್ನಾಗಿ ಮಾಡಲಾಗಿತ್ತು. ಇವೆರಡೂ ಸಂಗತಿಗಳು ಮಹಿಳೆಯರನ್ನು ಹಂಗಿನ ಬದುಕಿಗೆ ದೂಡಬಲ್ಲವೇ ವಿನಾ ಸ್ವತಂತ್ರ-ಸ್ವಾಯತ್ತ ನೆಲೆಯಲ್ಲಿ ಅವರ ಅಭಿವೃದ್ಧಿಯನ್ನು ಮಾಡಲಾರವು. ನಮ್ಮ ರಾಜ್ಯದಲ್ಲಿ ಶೇ. ೫೦ಕ್ಕಿಂತಲೂ ಅಧಿಕ ಮಹಿಳೆಯರು ರಕ್ತಹೀನತೆಯಿಂದ (ಅನಿಮಿಯಾ) ನರಳುತ್ತಿದ್ದರೆ ಶೇ. ೪೦ಕ್ಕೂ ಅಧಿಕ ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಈ ಸಂಗತಿಗಳನ್ನು ನಮ್ಮ ಸರ್ಕಾರ ಮತ್ತು ಸಮಾಜ 'ಸಮಸ್ಯೆ'ಯೆಂದು ಗುರುತಿಸುವ ಕೆಲಸವನ್ನು ಮಾಡುತ್ತಿಲ್ಲ. ಮಕ್ಕಳ ಅಪೌಷ್ಟಿಕತೆಗೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯವು ಮಧ್ಯ ಪ್ರವೇಶಿಸಬೇಕಾಯಿತು. ಅಂದರೆ ಇಲ್ಲಿನ ಸರ್ಕಾರದ ವೈಫಲ್ಯವನ್ನು ಊಹಿಸಿಕೊಳ್ಳಬಹುದು. ಇಂದು ಅಧಿಕಾರಕ್ಕೆ ಬಂದಿರುವ ಕಾಂಗ್ರೆಸ್ ಸರ್ಕಾರ ಇದರ ಬಗ್ಗೆ ಹೆಚ್ಚು ಗಮನ ನೀಡಬೇಕು ಮತ್ತು ಹಣ ನೀಡಬೇಕು. ನಮ್ಮ ರಾಜ್ಯದಲ್ಲಿ ಮಕ್ಕಳು ಮತ್ತು ಮಹಿಳೆಯರೂ ಸೇರಿ ಒಟ್ಟು ಜನಸಂಖ್ಯೆಯಲ್ಲಿ ಶೇ. ೬೦ರಿಂದ ಶೇ. ೬೫ರಷ್ಟಾಗುತ್ತಾರೆ. ರಾಜ್ಯದ ಒಟ್ಟು ಆರೋಗ್ಯ ಸ್ಥಿತಿಗತಿಯು ಮಕ್ಕಳ ಮತ್ತು ಮಹಿಳೆಯರ ಆರೋಗ್ಯವನ್ನು ಅವಲಂಬಿಸಿದೆ. ಆದರೆ ಅವರ ಅಭಿವೃದ್ಧಿಗೆ ಸರ್ಕಾರವು ವಿನಿಯೋಗಿಸುತ್ತಿರುವ ಹಣ ಅತ್ಯಲ್ಪವಾಗಿದೆ. ಏಕೆಂದರೆ ಮಹಿಳೆಯರು ಅಭಿವೃದ್ಧಿಯ ಸಂಗತಿಯಾಗಿಲ್ಲ. ಅವರನ್ನು ಸಮಾಜವು ಕೇವಲ ಅನುಭೋಗಿಗಳೆಂದು ಮತ್ತು ಗ್ರಾಹಕರೆಂದು ಮಾತ್ರ ಪರಿಭಾವಿಸಿಕೊಂಡು ಬರುತ್ತಿದೆ.

ಈಗಾಗಲೆ ದೃಢಪಟ್ಟಿರುವಂತೆ ಮಹಿಳೆಯರು ಅಸಮಾನತೆ, ದೌರ್ಜನ್ಯ, ನಿರ್ಲಕ್ಷ್ಯ ಮುಂತಾದ ಸಮಸ್ಯೆಗಳಿಂದ ಜರ್ಜರಿತರಾಗಿದ್ದಾರೆ. ನಮ್ಮ ರಾಜ್ಯದಲ್ಲಿ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತ ೨೦೦೧ರಲ್ಲಿ ೯೪೫ರಷ್ಟಿದ್ದುದು ೨೦೧೧ರಲ್ಲಿ ೯೪೩ಕ್ಕಿಳಿದಿದೆ. ಮಹಿಳೆಯರ ಮರಣ ಪ್ರಮಾಣ ಅವರ ೩೫ನೆಯ ವಯೋಮಾನದವರೆಗೆ ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಾಗಿದೆ. ಆದರೆ ಒಟ್ಟು ಜೀವನಾಯುಷ್ಯವನ್ನು ತೆಗೆದುಕೊಂಡರೆ ಮಹಿಳೆಯರ ಜೀವನಾಯುಷ್ಯ ಪುರುಷರ ಜೀವನಾಯುಷ್ಯಕ್ಕಿಂತ ಅಧಿಕ. ಇಲ್ಲಿರುವ ಒಡಕನ್ನು ಗಮನಿಸಬೇಕು. ತಮ್ಮ ೩೫ನೆಯ ವಯಸ್ಸಿನವರೆಗೆ ಮಹಿಳೆಯರು ವಿವಿಧ ಬಗೆಯ ಶೋಷಣೆಗೆ ಒಳಗಾಗುತ್ತಾರೆ. ಇದರಿಂದಾಗಿ ಅವರ ಮರಣ ಪ್ರಮಾಣವು ಆ ವಯೋಮಾನದವರೆಗೆ ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಾಗಿರುತ್ತದೆ.

ಈಗಾಗಲೆ ಹೇಳಿರುವಂತೆ ರಾಜ್ಯದ ಒಟ್ಟು ಭೂರಹಿತ ದಿನಗೂಲಿ ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಅರ್ಧಕ್ಕಿಂತ ಅಧಿಕ. ಇವರಲ್ಲಿ ಬಹುತೇಕರು ಪರಿತ್ಯಕ್ತೆಯರು, ವಿಧವೆಯರು, ವಿಚ್ಛೇದಿತರು ಇರುತ್ತಾರೆ. ಈ ವರ್ಗದ ಮಹಿಳಾ ದುಡಿಮೆಗಾರರ ಅಭಿವೃದ್ಧಿಗಾಗಿ ಕೇಂದ್ರದಲ್ಲಾಗಲಿ ಅಥವಾ ರಾಜ್ಯಮಟ್ಟದಲ್ಲಾಗಲಿ ವಿಶೇಷ ಕಾರ್ಯಕ್ರಮಗಳಿಲ್ಲ. ವಿಧವಾ ವೇತನ, ವೃದ್ಧಾಪ್ಯ ವೇತನ, ಹೆರಿಗೆ ಭತ್ಯೆ ಮುಂತಾದ ಕಲ್ಯಾಣ ಕಾರ್ಯಕ್ರಮಗಳ ಮೂಲಕ ಅವರಿಗೆ ನೆರವು ನೀಡಲಾಗುತ್ತಿದೆ. ಇವೆಲ್ಲ ಹಂಗಿನ ಸಂಗತಿಗಳೇ ವಿನಾ ಹಕ್ಕಿನ ಸಂಗತಿಗಳಲ್ಲ. ಮಹಿಳೆಯರನ್ನು ದುಡಿಮೆಗಾರರೆಂದು, ವರಮಾನ ಗಳಿಸುವವರೆಂದು, ಉತ್ಪಾದಕರೆಂದು ಪರಿಗಣಿಸುವ ಅಗತ್ಯವಿದೆ. ಅವರ ಕಾರ್ಯಕ್ಷೇತ್ರವನ್ನು ಕುಟುಂಬಕ್ಕೆ, ಮನೆಗೆ, ಗಂಡ-ಮಕ್ಕಳ ಸೇವೆಗೆಂದು ಸೀಮಿತಗೊಳಿಸಿದರೆ ಅದರಿಂದ ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ. ಈ ಬಗೆಯ ಪಾರಮಾರ್ಥಿಕ ಕ್ರಮಗಳಿಂದ ಮಹಿಳೆಯರ ಸಬಲೀಕರಣ ಸಾಧ್ಯವಿಲ್ಲ. ನಮ್ಮಲ್ಲಿ ಮಹಿಳಾ ಸಬಲೀಕರಣ ಎನ್ನುವುದು ಸ್ತ್ರೀಶಕ್ತಿ ಗುಂಪುಗಳ ರಚನೆಗೆ ಮತ್ತು ಮಹಿಳಾ ಸ್ವಸಹಾಯ ಗುಂಪುಗಳ ಸಂಘಟನೆಗೆ ಸೀಮಿತವಾಗಿಬಿಟ್ಟಿದೆ. ಮಹಿಳೆಯರು ತಾವು ಏನಾಗಬೇಕೆಂದಿದ್ದಾರೋ ಅದರಂತಾಗುವ ಮತ್ತು ಅವರು ಏನು ಮಾಡಬೇಕು ಎಂದಿದ್ದಾರೋ ಅದನ್ನು ಮಾಡುವ ಸ್ವಾತಂತ್ರ್ಯ ಮತ್ತು ಸಾಮರ್ಥ್ಯಕ್ಕೆ ಮಹಿಳಾ ಸಬಲೀಕರಣ ಎಂದು ಕರೆಯಬಹುದು. ಆದರೆ ನಮ್ಮಲ್ಲಿ ಮಹಿಳೆಯರಿಗೆ ಅಂತಹ ಸಾಮರ್ಥ್ಯವೂ ಇಲ್ಲ ಮತ್ತು ಸ್ವಾತಂತ್ರ್ಯವೂ ಇಲ್ಲ.

ಲಿಂಗ ಸಮಾನತೆ ಎನ್ನುವುದು ಕೇವಲ ಮಹಿಳಾ ಕಲ್ಯಾಣಕ್ಕೆ ಸಂಬಂಧಿಸಿದ ಸಂಗತಿಯಲ್ಲ. ಯುಎನ್‌ಡಿಪಿಯು ೧೯೯೫ರಲ್ಲಿ ತನ್ನ ಮಾನವ ಅಭಿವೃದ್ಧಿ ವರದಿಯಲ್ಲಿ 'ಅಭಿವೃದ್ಧಿಯನ್ನು ಮಹಿಳೀಕರಿಸದಿದ್ದರೆ ಅದಕ್ಕೆ ಅಪಾಯ ತಪ್ಪಿದ್ದಲ್ಲ' ಎಂದು ಎಚ್ಚರಿಸಿದೆ. ವಿಶ್ವಬ್ಯಾಂಕು ತನ್ನ ೨೦೧೨ರ ವರದಿಯಲ್ಲಿ ಲಿಂಗ ಸಮಾನತೆಯನ್ನು 'ಸ್ಮಾರ್ಟ್ ಎಕನಾಮಿಕ್ಸ್' ಎಂದು ಕರೆದಿದೆ. ಅಮರ್ತ್ಯ ಸೇನ್ ಲಿಂಗ ಅಸಮಾನತೆಯನ್ನು ಸಾಮಾಜಿಕ ವೈಫಲ್ಯ ಎಂದು ಕರೆದಿದ್ದಾನೆ. ಮಹಿಳೆಯರು ಎರಡು ಬಗೆಯ ದುಡಿಮೆಯಲ್ಲಿ ನಿರತರಾಗಿದ್ದಾರೆ. ಮೊದಲನೆಯದು ಸಂಗೋಪನಾ ದುಡಿಮೆ. ಎರಡನೆಯದು ಸಂಪಾದನಾ ದುಡಿಮೆ. ಭೂರಹಿತ ದಿನಗೂಲಿ ಮಹಿಳಾ ದುಡಿಮೆಗಾರರಲ್ಲಿ ಬಹುಪಾಲು ಹಿಂದುಳಿದ ಮತ್ತು ದಲಿತ ವರ್ಗಕ್ಕೆ ಸೇರಿದವರಾಗಿದ್ದಾರೆ. ಈ ವರ್ಗಗಳ ಬೆಂಬಲ ಕಾಂಗ್ರೆಸಿಗೆ ಅತಿ ಹೆಚ್ಚು ದೊರೆತಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸರ್ಕಾರ ಮಹಿಳೆಯರ ಅಭಿವೃದ್ಧಿಗೆ ಏನು ಮಾಡಬಹುದು ಎಂಬುದನ್ನು ಪಟ್ಟಿ ಮಾಡಲಾಗಿದೆ.

೧. ಲಿಂಗ ಸಮಾನತೆಯನ್ನು ಅಭಿವೃದ್ಧಿಯ ಗುರಿಯನ್ನಾಗಿ ಘೋಷಿಸಬೇಕು.
೨. ಮಹಿಳೆಯರಿಗೆ ಸಾರ್ವಜನಿಕ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಭಾಗವಹಿಸಲು ಅವಕಾಶ ದೊರಕಿಸಿಕೊಡಬೇಕು.
೩. ಮಹಿಳೆಯರು ಮತ್ತು ಮಕ್ಕಳಲ್ಲಿ ವ್ಯಾಪಕವಾಗಿ ಕಂಡುಬರುತ್ತಿರುವ ಅಪೌಷ್ಟಿಕತೆ ಮತ್ತು ರಕ್ತಹೀನತೆಗಳ ನಿವಾರಣೆಗೆ ಆಂದೋಳನಕಾರಿ ಮಾದರಿಯಲ್ಲಿ ದೊಡ್ಡ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು. ಇದನ್ನು ಕಲ್ಯಾಣ ಕಾರ್ಯಕ್ರಮವೆಂದು ಪರಿಗಣಿಸದೆ ಅಭಿವೃದ್ಧಿ ಕಾರ್ಯಕ್ರಮವಾಗಿ ಪರಿಭಾವಿಸಿಕೊಳ್ಳಬೇಕು.
೪. ವರಮಹಾಲಕ್ಷ್ಮಿ ಪೂಜೆ ಮಾಡುವ, ಸೀರೆ ಹಂಚುವ, ಮಡಿಲು ತುಂಬುವ, ಸಾಹಿತ್ಯ ಸಮ್ಮೇಳನಗಳಲ್ಲಿ ಮಹಿಳೆಯರಿಗೆ ಕುಪ್ಪಸ/ಕಣ ನೀಡುವ ಕಾರ್ಯಕ್ರಮಗಳಿಗೆ ಸರ್ಕಾರವು ಕಿಂಚಿತ್ತೂ ಪ್ರೋತ್ಸಾಹ ನೀಡಬಾರದು. ಪ್ರತಿಯಾಗಿ ಅವುಗಳನ್ನು ಹತ್ತಿಕ್ಕಬೇಕು. ಇಂತಹ ಪಾರಮಾರ್ಥಿಕ ಕಾರ್ಯಕ್ರಮಗಳಿಗೆ ಪ್ರೋತ್ಸಾಹ ನೀಡುವ ವಿಶ್ವವಿದ್ಯಾಲಯದ ಕುಲಪತಿಗಳು, ಮಂಡಳಿ, ನಿಗಮಗಳ ಅಧ್ಯಕ್ಷರುಗಳು, ಮಂತ್ರಿ-ಮಹೋದಯರುಗಳನ್ನು ಮನೆಗೆ ಕಳುಹಿಸಬೇಕು. ಇದನ್ನು ಯಾವ ಕಾರಣಕ್ಕೂ ಸರ್ಕಾರ ನಡೆಸುವುದನ್ನು ಸಹಿಸಕೂಡದು.
೫. ಮಹಿಳಾ ಶಿಕ್ಷಣವನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಹೆಚ್ಚು ಹೆಚ್ಚು ಮಹಿಳಾ ವಿದ್ಯಾರ್ಥಿ ನಿಲಯಗಳನ್ನು ರಾಜ್ಯಾದ್ಯಂತ ತೆರೆಯಬೇಕು.
೬. ರಾಜ್ಯದ ೩೦ ಜಿಲ್ಲೆಗಳಲ್ಲೂ ತಕ್ಷಣ ಸರ್ಕಾರಿ ನರ್ಸಿಂಗ್ ಶಾಲೆಗಳನ್ನು ತೆರೆಯಬೇಕು. ಈ ಕ್ಷೇತ್ರವು ಅತ್ಯಂತ ವೇಗವಾಗಿ ಬೆಳೆಯುತ್ತಿದೆ. ಇಲ್ಲಿ ಮಹಿಳೆಯರಿಗೆ ಉದ್ಯೋಗದ ಅವಕಾಶಗಳು ವಿಸ್ತೃತಗೊಳ್ಳುತ್ತಿವೆ. ಖಾಸಗಿ ವಲಯದ ನರ್ಸಿಂಗ್ ಶಾಲೆಗಳು ಶೋಷಣೆಯ ಕೇಂದ್ರಗಳಾಗಿ ಬಿಟ್ಟಿವೆ ಮತ್ತು ಅವು ಅದನ್ನು



ವ್ಯವಹಾರವನ್ನಾಗಿ ಮಾತ್ರ ನೋಡುತ್ತವೆ.

೭. ಕುಟುಂಬ ಸಂಬಂಧಗಳಿಂದ ಹೊರಬಂದ ಮತ್ತು ಪರಿತ್ಯಕ್ತ ಮಹಿಳೆಯರಿಗೆ ತಾತ್ಕಾಲಿಕ ಆಶ್ರಯಕ್ಕಾಗಿ ಮಹಿಳಾ ಸಂಗೋಪನಾ ನಿಲಯಗಳನ್ನು ಸರ್ಕಾರ ಎಲ್ಲ ಜಿಲ್ಲೆಗಳಲ್ಲೂ ತೆರೆಯುವ ಬಗ್ಗೆ ಯೋಚಿಸಬಹುದು.

೮. ಮಹಿಳೆಯರ ಮೇಲಿನ ದೌರ್ಜನ್ಯ, ಹಿಂಸೆ, ಅತ್ಯಾಚಾರ, ಲೈಂಗಿಕ ಕಿರುಕುಳ ಮುಂತಾದ ಅಪರಾಧಗಳಿಗೆ ಶೀಘ್ರ ಮತ್ತು ಕಠಿಣ ವಿಚಾರಣೆ ನಡೆಯುವ ವ್ಯವಸ್ಥೆ ಮಾಡಬೇಕು.

೯. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯನ್ನು ಕೇವಲ ಕಲ್ಯಾಣ ಕಾರ್ಯಕ್ರಮದ ಇಲಾಖೆಯೆಂದು ಪರಿಗಣಿಸಬಾರದು. ಅದಕ್ಕೆ ಹೆಚ್ಚಿನ ಅಧಿಕಾರ ಮತ್ತು ಸಂಪನ್ಮೂಲವನ್ನು ಸರ್ಕಾರ ಒದಗಿಸಬೇಕು. ಈಗಾಗಲೆ ಹೇಳಿರುವಂತೆ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರು ಮತ್ತು ಮಕ್ಕಳು ಸೇರಿ ಶೇ. ೬೫ರಷ್ಟಾಗುತ್ತದೆ. ಅವರ ಅಭಿವೃದ್ಧಿಯಲ್ಲಿ ರಾಜ್ಯದ ಅಭಿವೃದ್ಧಿ ನಿಂತಿದೆ.

೧೦. ನಮ್ಮದು ಮೂಲತಃ ಪುರುಷಶಾಹಿ ಸಮಾಜ. ಮಹಿಳೆಯರ ಕಾರ್ಯಕ್ಷೇತ್ರವೇನಿದ್ದರೂ ಮನೆ, ಕುಟುಂಬ, ಗಂಡ, ಮಕ್ಕಳು ಎಂದು ಹೇಳಲಾಗುತ್ತಿದೆ. ಇದು ತಪ್ಪು. ಪುರುಷರಿಗೆ ಇರುವಷ್ಟು ಸಾಮರ್ಥ್ಯ ಮಹಿಳೆಯರಿಗೂ ಇರುತ್ತದೆ. ಮಹಿಳೆಯರಿಗೆ ಆಸ್ತಿ ಹಕ್ಕನ್ನು ನೀಡುವ ಬಗ್ಗೆ ಹೊಸ ಸರ್ಕಾರವು ಯೋಚಿಸಬಹುದು. ಸರ್ಕಾರಿ ಯೋಜನೆಗಳಲ್ಲಿ ಆಸ್ತಿಯ ಪ್ರಶ್ನೆ ಬಂದಾಗ ಅದನ್ನು ಮಹಿಳೆಯರ ಹೆಸರಿನಲ್ಲಿ ನೋಂದಾಯಿಸುವ ಕ್ರಮವನ್ನು ಕಡ್ಡಾಯ ಮಾಡುವುದರ ಬಗ್ಗೆ ಸರ್ಕಾರ ಯೋಚಿಸಬಹುದು. ಇದರಿಂದ ಮಹಿಳೆಯರ ಆರ್ಥಿಕ ಸ್ವಾವಲಂಬನೆ ಸಾಧ್ಯವಾಗುತ್ತದೆ.

**ಭಾಗ-೫.**

## ಪ್ರಾದೇಶಿಕ ಅಸಮಾನತೆ

ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯು ನಮ್ಮ ರಾಜ್ಯವನ್ನು ಅದು ಹುಟ್ಟಿದ (೧೯೫೬) ಸಂದರ್ಭದಿಂದಲೂ ಬಾಲಗ್ರಹ ಪೀಡೆಯಂತೆ ಕಾಡುತ್ತಿದೆ. ಕಳೆದ ಎರಡು ದಶಕಗಳಲ್ಲಿ ಅದರ ನಿವಾರಣೆಗೆ ಸರ್ಕಾರ ಅನೇಕ ಕ್ರಮಗಳನ್ನು ತೆಗೆದುಕೊಂಡಿದೆ. ಆದರೆ ಅಸಮಾನತೆಯು ಹೋಗಿಲ್ಲ. ಕಳೆದ ಐದು ವರ್ಷಗಳಲ್ಲಿ ಇದು ಮತ್ತಷ್ಟು ಉಲ್ಬಣಿಸಿರುವ ಸಾಧ್ಯತೆಯಿದೆ. ಪ್ರಾದೇಶಿಕ ಅಸಮಾನತೆಯನ್ನು ಅಧ್ಯಯನ ಮಾಡಿ ಅದರ ನಿವಾರಣೆಗೆ ಪರಿಹಾರೋಪಾಯಗಳನ್ನು ನೀಡುವ ಜವಾಬುದಾರಿ ವಹಿಸಿಕೊಟ್ಟು ಸರ್ಕಾರ ನೇಮಿಸಿದ್ದ ಡಾ|| ಡಿ. ಎಂ. ನಂಜುಂಡಪ್ಪ ಸಮಿತಿಯ ವರದಿಯ ಅನುಷ್ಠಾನವನ್ನು ಕಳೆದ ಸರ್ಕಾರ ಸಮರ್ಪಕವಾಗಿ ನಿರ್ವಹಿಸಲಿಲ್ಲ. ಅದನ್ನು ಕೇವಲ ರಾಜಕೀಯ ಲಾಭಕ್ಕಾಗಿ ಅದು ಬಳಸಿಕೊಂಡಿತು. ವಾಸ್ತವವಾಗಿ ೨೦೦೭-೦೮ರಿಂದ ೨೦೧೨-೧೩ರ ಅವಧಿಯಲ್ಲಿ ಡಾ|| ಡಿ. ಎಂ. ನಂಜುಂಡಪ್ಪ ಸಮಿತಿಯ ಶಿಫಾರಸ್ಸಿನಂತೆ ಜಾರಿಗೊಳಿಸಿದ್ದ 'ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ'ಗೆ ಮೀಸಲಿಟ್ಟ ಒಟ್ಟು ಹಣದಲ್ಲಿ ಅಂದಿನ ಸರ್ಕಾರ ಖರ್ಚು ಮಾಡಿದ್ದು ಕೇವಲ ಶೇಕಡ ೭೦ರಷ್ಟು ಮಾತ್ರ. ಈ ಯೋಜನೆಯಡಿಯಲ್ಲಿ ಹಿಂದುಳಿದ ತಾಲ್ಲೂಕುಗಳಿಗೆ ಅನುದಾನ ಹಂಚಲು ಡಾ|| ಡಿ. ಎಂ. ನಂಜುಂಡಪ್ಪ ಸಮಿತಿಯು ನೀಡಿದ್ದ ಸೂತ್ರವನ್ನು ಕೈಬಿಟ್ಟು ಸರ್ಕಾರ ೨೦೦೭-೦೮ರಲ್ಲಿ ತನ್ನದೇ ಸೂತ್ರವನ್ನು ಜಾರಿಗೆ ತಂದಿತು. ಆದರೆ ಇದರಿಂದ ರಾಜ್ಯದ ಅತ್ಯಂತ ಹಿಂದುಳಿದ ಜಿಲ್ಲೆಗಳಿಗೆ ಸಮಿತಿ ಸೂತ್ರದ ಪ್ರಕಾರ ಎಷ್ಟು ಅನುದಾನ ಬರಬೇಕಾಗಿತ್ತೋ ಅದಕ್ಕಿಂತ ಕಡಿಮೆ ಸರ್ಕಾರಿ ಸೂತ್ರದ ಆಧಾರದಲ್ಲಿ ಅನುದಾನ ದೊರೆಯಿತು. ಈ ವಿಕೃತಿಯನ್ನು ಸರಿಪಡಿಸಲು ನಾನು ಮತ್ತು ಡಾ|| ಬಿ. ಶೇಷಾದ್ರಿ ಅವರು ತೀವ್ರ ಪ್ರಯತ್ನ ನಡೆಸಬೇಕಾಯಿತು. ನಮ್ಮ ಒತ್ತಾಯಕ್ಕೆ ಮಣಿದು ಸರ್ಕಾರವು ತನ್ನ ಸೂತ್ರವನ್ನು ಕೈ ಬಿಟ್ಟು ಸಮಿತಿ ಸೂತ್ರವನ್ನು ಜಾರಿಗೊಳಿಸಿತು. ಇದೆಲ್ಲ ಏನನ್ನು ಸೂಚಿಸುತ್ತದೆ ? ಕಳೆದ ೫-೬ ವರ್ಷಗಳ ಅವಧಿಯಲ್ಲಿ ಅಧಿಕಾರದಲ್ಲಿದ್ದ ಸರ್ಕಾರವು ಪ್ರಾದೇಶಿಕ ಅಸಮಾನತೆಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಇದಕ್ಕೆ ಸಂಬಂಧಿಸಿದ ಘೋಷಣೆಗಳೆಲ್ಲವೂ ಗಿಮಿಕ್‌ಗಳಾಗಿದ್ದವೇ ವಿನಾ ನಿಜವಾದ ಅಭಿವೃದ್ಧಿ ಕ್ರಮಗಳಾಗಿರಲಿಲ್ಲ. ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಶಿಫಾರಸ್ಸುಗಳನ್ನು ವಿಕೃತಗೊಳಿಸಲಾಗಿದೆ. ಈ ಸಮಿತಿಯನ್ನು ೨೦೦೦ದಲ್ಲಿ ಕಾಂಗ್ರೆಸ್ ಸರ್ಕಾರ ನೇಮಿಸಿತ್ತು. ಪ್ರಾದೇಶಿಕ ಅಸಮಾನತೆಯ ನಿವಾರಣೆ ಎಂದರೆ ಅದು ಭೌಗೋಳಿಕ ಪ್ರದೇಶದ ಸಮಸ್ಯೆಯಲ್ಲ. ಹಿಂದುಳಿದ ಪ್ರದೇಶಗಳ ಅಭಿವೃದ್ಧಿ ಎಂಬುದು ವಾಸ್ತವವಾಗಿ ಹಿಂದುಳಿದ ಪ್ರದೇಶದ ಹಿಂದುಳಿದ ಮತ್ತು ದಲಿತ ವರ್ಗಗಳ ಅಭಿವೃದ್ಧಿಯಾಗಿದೆ. ಬೆಂಗಳೂರು ಭೂತಾಕಾರವಾಗಿ ಬೆಳೆದು ರಾಜ್ಯದ ಹಿಂದುಳಿದ ಪ್ರದೇಶಗಳು ಮತ್ತಷ್ಟು ಹಿಂದುಳಿಯುತ್ತಿದ್ದಾವೆ. ಐಟಿ-ಬಿಟಿಗಳು ಅಭಿವೃದ್ಧಿಗೆ ಮುಖ್ಯ. ಆದರೆ ಅವು ರಾಜ್ಯದ ಎಲ್ಲ ಭಾಗಕ್ಕೂ, ಅದರಲ್ಲೂ ಮುಖ್ಯವಾಗಿ ಹಿಂದುಳಿದ ಪ್ರದೇಶಗಳಿಗೆ ಪ್ರವೇಶಿಸಬೇಕು. ಬೆಂಗಳೂರಿನ ರಸ್ತೆ, ಗಾರ್ಬೇಜು, ಸೇತುವೆಗಳು, ಟ್ರಾಫಿಕ್, ಕುಡಿಯುವ ನೀರು ಮುಂತಾದವುಗಳೇ ರಾಜ್ಯದ ಸಮಸ್ಯೆಗಳು ಎನ್ನುವ ರೀತಿಯಲ್ಲಿ ಕೆಲವು ಉದ್ದಿಮೆದಾರರು ಚಿತ್ರಿಸುತ್ತಿದ್ದಾರೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಬೆಂಗಳೂರಿನ ಏಕಸ್ವಾಮ್ಯತೆಯನ್ನು ತಡೆಯಬೇಕು.

ಹಿಂದುಳಿದ ಪ್ರದೇಶದ ಮುಖ್ಯ ಸಮಸ್ಯೆಯೆಂದರೆ ಅಕ್ಷರ, ಆರೋಗ್ಯ, ಆಹಾರ. ಸಾಮಾಜಿಕ ನ್ಯಾಯದ ಸೂತ್ರಗಳ ನೆಲೆಯಲ್ಲಿ ಪ್ರಾದೇಶಿಕ ಅಸಮಾನತೆ ನಿವಾರಣೆಯ ಕಾರ್ಯಕ್ರಮಗಳನ್ನು ಸರ್ಕಾರ ಹಮ್ಮಿಕೊಳ್ಳಬೇಕು. ರಸ್ತೆ, ಸೇತುವೆ, ಚರಂಡಿ ಮುಂತಾದ ಕಾಮಗಾರಿಗಳು ಅಭಿವೃದ್ಧಿಗೆ ಅಗತ್ಯ. ಆದರೆ ಕಾಮಗಾರಿಗಳೇ ಅಭಿವೃದ್ಧಿಯಲ್ಲ. ಈ ಬಗ್ಗೆ ಕಾಂಗ್ರೆಸ್ ಸರ್ಕಾರ ಹೊಸದಾಗಿ ಚಿಂತಿಸಬೇಕು. ಹಿಂದುಳಿದ ಪ್ರದೇಶದ ಜನರ ಸಂಕಷ್ಟಗಳನ್ನು ಪರಿಹರಿಸುವುದು ಸರ್ಕಾರದ ಅಭಿವೃದ್ಧಿಯ ಆದ್ಯತೆಯ ಸಂಗತಿಯಾಗಬೇಕು.

ಕೊನೆಯದಾಗಿ, ಒಟ್ಟಾರೆಯಾಗಿ ಹೊಸ ಸರ್ಕಾರದ ಮುಂದೆ ಗುರುತರವಾದ ಜವಾಬುದಾರಿಯಿದೆ. ಅದರ ಮುಂದಿರುವ ಮುಖ್ಯ ಸವಾಲುಗಳ ಬಗ್ಗೆ ಇಲ್ಲಿ ಚರ್ಚೆ ಮಾಡಲಾಗಿದೆ. ಅದರ ಮೊದಲ ಕೆಲಸವೆಂದರೆ ಅಭಿವೃದ್ಧಿ ಎನ್ನುವುದು ಮೂಲತಃ ಪದಾರ್ಥವಾದಿ ಸಂಗತಿ ಎನ್ನುವುದನ್ನು ತೋರಿಸಿಕೊಡುವುದು. ಎರಡನೆಯದಾಗಿ, ಪಾರಮಾರ್ಥಿಕತೆಗೆ ಕೊನೆ ಹಾಡಬೇಕು. ಮೂರನೆಯದಾಗಿ, ದುಡಿಯುವ ವರ್ಗದ ಹಿತಾಸಕ್ತಿಯನ್ನು ಇಂದಿನ ಸರ್ಕಾರವು ಆದ್ಯತೆಯ ಸಂಗತಿಯನ್ನಾಗಿಟ್ಟುಕೊಳ್ಳಬೇಕು. ಈ ಸರ್ಕಾರದ ಬೆಂಬಲದ ಮೂಲ ಸದರಿ ವರ್ಗದಲ್ಲಿದೆ. ಭೂರಹಿತರಿಗೆ ಸಾಧ್ಯವಾದಷ್ಟು ಹೆಚ್ಚುವರಿ ಭೂಮಿಯನ್ನು ಹಂಚುವ ಕೆಲಸವನ್ನು ಸರ್ಕಾರ ಮಾಡಬೇಕು. ನಾಲ್ಕನೆಯದಾಗಿ, ಸರ್ಕಾರಿ ಕಚೇರಿಗಳಲ್ಲಿ, ಸಚಿವಾಲಯಗಳಲ್ಲಿ, ವಿಧಾನಸೌಧದಲ್ಲಿ ವಾಸ್ತುವಿನ ಹೆಸರಿನಲ್ಲಿ ಯಜ್ಞ-ಯಾಗ ನಡೆಸುವುದು, ಕಟ್ಟಡಗಳ ವಿನ್ಯಾಸ ಬದಲಾಯಿಸುವುದು ಮುಂತಾದ ವಿಕಾರಗಳಿಗೆ ಸರ್ಕಾರ ಅವಕಾಶ ನೀಡಬಾರದು. ಐದನೆಯದಾಗಿ, ಮಹಿಳೆಯರ ಅಭಿವೃದ್ಧಿ ಅನ್ನುವುದು ವರಮಹಾಲಕ್ಷ್ಮಿ ಪೂಜೆಯಲ್ಲ, ಅದು ಸಂಘರ್ಷದ, ಪುರುಷ ಪ್ರಧಾನತೆಯನ್ನು ಮುರಿಯುವ ಸಂಗತಿ ಎನ್ನುವುದನ್ನು ಪ್ರತಿಪಾದಿಸಬೇಕು. ಆರನೆಯದಾಗಿ, ಕೃಷಿ ಭೂಮಿಯನ್ನು ಯಾವ ಕಾರಣಕ್ಕೂ ಉದ್ದಿಮೆಗಾಗಿ, ಎಸ್‌ಈಜಡ್‌ಗಳಿಗಾಗಿ, ಬಡಾವಣೆಗಳಿಗಾಗಿ ವಶಪಡಿಸಿಕೊಳ್ಳುವ, ವರ್ಗಾಯಿಸುವ ಕಾರ್ಯವನ್ನು ನಿಲ್ಲಿಸಬೇಕು. ಏಳನೆಯದಾಗಿ, ಕಳೆದ ಸರ್ಕಾರ ಅಭಿವೃದ್ಧಿಯನ್ನು ಹಂಗಿನ ಸಂಗತಿಯನ್ನಾಗಿ ಮಾಡಿಬಿಟ್ಟಿತ್ತು. ಇದನ್ನು ಸರಿಪಡಿಸಬೇಕು. ಅಭಿವೃದ್ಧಿಯು ಮೂಲತಃ ಹಕ್ಕಿನ ಸಂಗತಿ. ಅದು ಪದಾರ್ಥವಾದಿ ಸಂಗತಿ. ಈ ನೆಲೆಯಲ್ಲಿ ಅಭಿವೃದ್ಧಿ ನೀತಿಯನ್ನು ರೂಪಿಸಬೇಕು. ಎಂಟನೆಯದಾಗಿ, ಅಕ್ರಮ ಗಣಿಗಾರಿಕೆಯಲ್ಲಿ ಶಾಮೀಲಾದ ಅಧಿಕಾರಿಗಳ ಮೇಲೆ ತಕ್ಷಣ ಕ್ರಮ ತೆಗೆದುಕೊಳ್ಳಬೇಕು. ಮೂರಾಬಟ್ಟೆಯಾಗಿರುವ ಆಡಳಿತ ವ್ಯವಸ್ಥೆಯಲ್ಲಿ ಶಿಸ್ತನ್ನು ಮೂಡಿಸಬೇಕಾದರೆ ಇದು ತುಂಬ ಅವಶ್ಯಕ. ಒಂಬತ್ತನೆಯದಾಗಿ, ವಿಶೇಷ ಕ್ರಮಗಳನ್ನು ತೆಗೆದುಕೊಂಡು 'ದಿ ರಿಪಬ್ಲಿಕ್ ಆಫ್ ಬಳ್ಳಾರಿ' ಎಂಬ ಅನಿಷ್ಟ ಬಿರುದಿನಿಂದ ಬಳ್ಳಾರಿ ಜಿಲ್ಲೆಯನ್ನು ಬಿಡುಗಡೆಗೊಳಿಸಬೇಕು. ಹತ್ತನೆಯದಾಗಿ, ಬೆಂಗಳೂರೇ ಕರ್ನಾಟಕವಲ್ಲ. ರಾಜ್ಯದ ಹಿಂದುಳಿದ ಜಿಲ್ಲೆಗಳ ಅಭಿವೃದ್ಧಿಗಾಗಿ ವಿಶೇಷ ಕ್ರಮಗಳನ್ನು ಸರ್ಕಾರ ತೆಗೆದುಕೊಳ್ಳಬೇಕು. ಹೊಸ ಸರ್ಕಾರದ ದಾರಿ ಮತ್ತು ಅದು ಹಮ್ಮಿಕೊಳ್ಳುವ ಅಭಿವೃದ್ಧಿ ಕ್ರಮಗಳು ಪದಾರ್ಥವಾದಿಯಾಗಿರಬೇಕು.



**ಡಾ|| ಟಿ. ಆರ್. ಚಂದ್ರಶೇಖರ**
ನಂ. ೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ
ಹೊಸಪೇಟೆ - ೫೮೩ ೨೦೧

ಡಾ|| ಜಿ. ರಾಮಕೃಷ್ಣ

# ಮಾರ್ಕ್ಸ್‌ವಾದದ ಸಂವಾದಿ ಚಳುವಳಿಗಳು



ಮಾರ್ಕ್ಸ್‌ವಾದವು ಬಂಡವಾಳಶಾಹಿಯ ವಿರುದ್ಧದ ಚಳುವಳಿ ಎಂಬುದು ಸ್ವತಸ್ಸಿದ್ಧ. ಇಂದಿನ ಜಾಗತಿಕ ರಾಜಕೀಯದಲ್ಲಿ ಬಂಡವಾಳಶಾಹಿಯನ್ನು ವಿರೋಧಿಸುವ ಹಲವು ಚಳುವಳಿಗಳಿವೆಯಾದ್ದರಿಂದ ಮಾರ್ಕ್ಸ್‌ವಾದದ್ದೇನೂ ವಿಶೇಷವಿಲ್ಲ, ಅದು ಅಸ್ತಂಗತವಾಗಿದೆ, ಎಂಬ ಮಾತು ಆಗಾಗ ಕೇಳಿಬರುತ್ತದೆ. ಹಾಗೆಂದು ಭ್ರಮಿಸುವುದು ಬಂಡವಾಳಶಾಹಿಗೆ ಸಮಾಧಾನ ತರಬಹುದು, ಆದರೆ ಮಾರ್ಕ್ಸ್‌ವಾದಕ್ಕೆ ಅದರಿಂದೇನೂ ಚ್ಯುತಿಯುಂಟಾಗುವುದಿಲ್ಲ. ಬೇರೆ ಚಳುವಳಿಗಳ ಮೂಲಕವೇ ಮಾರ್ಕ್ಸ್‌ವಾದವು ಅಭಿವ್ಯಕ್ತಿ ಪಡೆಯುವುದು; ಅವಿಲ್ಲದೆ ಶುದ್ಧ, ನಿರ್ಲಿಪ್ತ, ಮಾರ್ಕ್ಸ್‌ವಾದಿ ರಾಜಕೀಯ ಚಳುವಳಿ ಎನ್ನುವುದು ಯಾವುದೋ ನಿಗೂಢ ಚಳುವಳಿಯಾಗಿರಲು ಶಕ್ಯವಿಲ್ಲ. ಬೇರೆಯವು ಪೂರಕ ಚಳುವಳಿಗಳೇ ವಿನಾ ನಿಷೇಧಕ ಚಳುವಳಿಗಳಲ್ಲ. ಉದಾಹರಣೆಗೆ, ಮಹಿಳಾ ಚಳುವಳಿಯನ್ನು ಗಮನಿಸೋಣ. ಅದು ಮಾರ್ಕ್ಸ್‌ವಾದಿ ಚಳುವಳಿಗಿಂತಲೂ ಭಿನ್ನವೆನ್ನುವವರಿದ್ದಾರೆ. ಕೆಲವು ಮಾರ್ಕ್ಸ್‌ವಾದಿ ಪುರುಷರ ಪ್ರಕಾರ ಲೈಂಗಿಕತೆಯೆಂಬುದು ಚರ್ಚೆಯ ವಿಷಯವೇ ಅಲ್ಲ ಅಥವಾ ಚರ್ಚೆಗೆ ಯೋಗ್ಯವಾದರೆ ಅದು ದೊಡ್ಡ ಚಳುವಳಿಯ ಒಂದು ಸಣ್ಣ ಭಾಗ. ಇದು ಪುರುಷಪ್ರಧಾನ ಪರಂಪರೆಯ ಅಹಂಕಾರ ಅಥವಾ ಅಸಡ್ಡೆ. ಅದನ್ನು ಬಂಡವಾಳವನ್ನಾಗಿಸಿಕೊಂಡು ಮಹಿಳಾ ಚಳುವಳಿಯು ತೀರಾ ಪ್ರತ್ಯೇಕವೆಂಬ ಧೋರಣೆಯು ೧೯೭೦-೮೦ರ ದಶಕಗಳಲ್ಲಿ ವ್ಯಕ್ತವಾದದ್ದುಂಟು. ಆದರೆ ಪುರುಷ ಮಾರ್ಕ್ಸ್‌ವಾದಿಗಳು ಮಹಿಳಾ ಚಳುವಳಿಯಿಂದ ವೈಯ್ಯಕ್ತಿಕವಾಗಿ ಮತ್ತು ರಾಜಕೀಯವಾಗಿ ಹೊಸ ವಿವೇಚನೆ ಮೂಡಿಸಿಕೊಂಡಿರುವುದೂ ಉಂಟು. ಅಂತೆಯೇ ಮಹಿಳಾ ಚಳುವಳಿಯು ಮಾರ್ಕ್ಸ್‌ವಾದದಿಂದ ಶ್ರೀಮಂತಗೊಂಡಿರುವುದೂ ಉಂಟು.

ಮಾರ್ಕ್ಸ್‌ವಾದಿ-ಸ್ತ್ರೀವಾದಿ ಚರ್ಚೆಗಳಲ್ಲಿ ಕೌಟುಂಬಿಕ ದುಡಿಮೆಗೆ ಸಂಬಂಧಿಸಿದಂತೆ ಹಲವು ಪ್ರಶ್ನೆಗಳು ಬಂದಿವೆ. ಸ್ವತಃ ಮಾರ್ಕ್ಸ್ ಆ ಪ್ರಶ್ನೆಗಳನ್ನು ಅಷ್ಟಾಗಿ ಲಕ್ಷಿಸಿರಲಿಲ್ಲ. ಆದರೆ ಜೂಲಿಯೆಟ್ ಮಿಶೆಲ್, ಎಸ್. ರೋಬೋತಂ, ಮಿಶೇಲ್ ಬ್ಯಾರೆಟ್ ಮುಂತಾದವರು ಅವನ್ನೆತ್ತಿಕೊಂಡು ಚರ್ಚೆ ಮುಂದುವರಿಸಿದ್ದಾರೆ. ಕೆಲವು ಪ್ರಶ್ನೆಗಳು ಹೀಗಿವೆ : ಮಹಿಳೆಯರು ಒಂದು ಸಾಮಾಜಿಕ ವರ್ಗವೆ ? ಔದ್ಯಮಿಕ ಉತ್ಪಾದನೆಯನ್ನು ಕೇಂದ್ರೀಕರಿಸಿ ಚರ್ಚಿಸುವ ಮಾರ್ಕ್ಸ್‌ವಾದಿ ಸಿದ್ಧಾಂತದಲ್ಲಿ ಮಕ್ಕಳ ಪಾಲನೆ, ಲೈಂಗಿಕತೆ, ಕುಟುಂಬ, ಇವುಗಳ ಅರ್ಥೈಸುವಿಕೆಗೆ ಯಾವ ಸ್ಥಾನವಿದೆ ? ಬಂಡವಾಳಶಾಹಿಯು ಕುಟುಂಬ ವ್ಯವಸ್ಥೆಯನ್ನು ಗೌರವಿಸುತ್ತದೋ ಅಥವಾ ಲಾಭದ ಹೆಚ್ಚಳವಾಗುವುದಾದರೆ ಆ ವ್ಯವಸ್ಥೆಯನ್ನು ಛಿದ್ರಗೊಳಿಸುತ್ತದೋ ? ವರ್ಗ ಸಮಾಜದಲ್ಲಿ ಮಹಿಳಾ ಸ್ವಾತಂತ್ರ್ಯ ಎಷ್ಟರಮಟ್ಟಿಗೆ ಸಾಧಿಸ ಲಾಗುತ್ತದೆ ? ಪಿತೃಪ್ರಾಧಾನ್ಯವು ಬಂಡವಾಳಶಾಹಿಗಿಂತಲೂ ಪ್ರಾಚೀನವಾದುದಾದ್ದರಿಂದ ಅವೆರಡರ ನಡುವಣ ಸಂಬಂಧ ಎಂಥದು ? ಇಂತಹ ಪ್ರಶ್ನೆಗಳು ಬಂದಾಗ ಕೆಲವು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಬಂಡವಾಳಶಾಹಿಯ ಪತನವಾಗದೆ ಮಹಿಳೆಯ ಶೋಷಣೆ ಅಂತ್ಯಗೊಳ್ಳದೆಂಬ ಅಭಿಪ್ರಾಯ ಮಂಡಿಸಿದರು. ಇನ್ನು ಕೆಲವರು ಹೇಳಿದರು, ಮಹಿಳೆಯ ಸ್ವಾತಂತ್ರ್ಯವನ್ನು ವಿಸ್ತರಿಸಿಯೂ ಬಂಡವಾಳಶಾಹಿಯು ಪ್ರವರ್ಧಮಾನಕ್ಕೆ ಬರುತ್ತಿರಲು ಸಾಧ್ಯ, ಎಂದು. ಅಂದರೆ, ಮಹಿಳಾ ಶೋಷಣೆಯು ಬಂಡವಾಳಶಾಹಿಗೆ ಅನಿವಾರ್ಯವಲ್ಲ; ದುಡಿಮೆಗಾರರಾಗಿ ಪುರುಷರಂತೆ ಅವರೂ ಶೋಷಣೆಗೆ ಸಿಲುಕಿರುತ್ತಾರೆ, ಅಷ್ಟೆ.

೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ|| ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಹನ್ನೆರಡನೆಯ ಹಾಗೂ ಕೊನೆಯ ಕಂತು.

ಪಿತೃಪ್ರಾಧಾನ್ಯತೆ ಮತ್ತು ವರ್ಗಸಮಾಜ, ಇವೆರಡಕ್ಕೂ ತಮ್ಮದೇ ಇತಿಹಾಸವಿದೆ. ಎರಡೂ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಆದ್ದರಿಂದ, ಒಂದರ ಉತ್ಪಾಟನೆಯು ಇನ್ನೊಂದನ್ನು ಪಲ್ಲಟಗೊಳಿಸದೆ ಬಿಡುವುದಿಲ್ಲ.

ಬಂಡವಾಳಶಾಹಿಗೆ ಲಿಂಗವ್ಯತ್ಯಾಸವು ಒಂದು ಪ್ರಮುಖ ಸವಾಲಲ್ಲ. ದುಡಿಮೆಗಾರರು ಯಾವ ಜನಾಂಗದವರು ಮತ್ತು ಯಾವ ಸಾಮಾಜಿಕ ಅಂತಸ್ತಿಗೆ ಸೇರಿದ್ದಾರೆ ಎಂಬುದು ಅಪ್ರಸ್ತುತ ಇರುವಂತೆ ಲಿಂಗ ವ್ಯತ್ಯಾಸವೂ ಅಪ್ರಸ್ತುತ. ಮಾರ್ಕ್ಸ್‌ನ ಬರಹಗಳಲ್ಲಿ ದುಡಿಮೆಗಾರನು ಯಾವಾಗಲೂ ಪುರುಷನೇ ಎಂಬ ಭಾವನೆ ಮೂಡಿದರೆ ಅದಕ್ಕೆ ಭಾಷೆಯ ಬಳಕೆಯು ಕಾರಣ, ಅವನು ೧೯ನೆಯ ಶತಮಾನದವನು ಎಂಬುದು ಕಾರಣ. ಸಾಮಾಜಿಕ ಸಂಬಂಧವನ್ನು ಬೆಸೆಯುವ ಮೊದಲ ಘಟಕವು ಕುಟುಂಬ ಎಂಬುದನ್ನು 'ದ ಜರ್ಮನ್ ಐಡಿಯಾಲಜಿ'ಯಲ್ಲಿ ಅವನು ಗುರುತಿಸಿದ್ದಾನೆ. ಜೀವದ ಉತ್ಪತ್ತಿಗೆ ''ಸ್ವಂತದ ದುಡಿಮೆ ಮತ್ತು ಸಂತತಿಯ ಮುಂದುವರಿಕೆ'' ಎರಡೂ ಅಗತ್ಯ; ಒಂದು ಭೌತಿಕ ವಸ್ತುಗಳ ಉತ್ಪಾದನೆ, ಇನ್ನೊಂದು ಲೈಂಗಿಕ ಉತ್ಪಾದನೆ; ಎರಡೂ ಸತತವಾಗಿ ನಡೆಯುತ್ತಿದ್ದರೆ ಮಾತ್ರ ಮಾನವ ಚರಿತ್ರೆ ಮುಂದುವರಿಯುತ್ತದೆ. ಅದು ಮಾರ್ಕ್ಸ್‌ಗೆ ತಿಳಿಯದ ಅಂಶವೇನಲ್ಲ. ತೈತ್ತಿರೀಯ ಉಪನಿಷತ್ತಿನ ಮಾತಿನಲ್ಲಿ ಹೇಳುವುದಾದರೆ ''ಪ್ರಜಾತಂತುವಿನ ವಿಚ್ಛೇದನೆಯು ಸಾಧುವಲ್ಲ'' (ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ). ಸಂತತಿಯ ವೃದ್ಧಿಯಾಗದೆ ಸಾಮಾಜಿಕ ವ್ಯವಸ್ಥೆಯೊಂದಕ್ಕೆ ದುಡಿಮೆಗಾರರು ಲಭ್ಯವಾಗುವುದಾದರೂ ಹೇಗೆ? ಆದ್ದರಿಂದ ಲೈಂಗಿಕ ಉತ್ಪಾದನೆ ಮತ್ತು ಭೌತಿಕ ಉತ್ಪಾದನೆ ಎರಡೂ ಅಗತ್ಯವೇ. ಅವಕ್ಕೆ ತಮ್ಮದೇ ಇತಿಹಾಸವೂ ಉಂಟು. ಎರಡರಲ್ಲೂ ಘರ್ಷಣೆ, ಅನ್ಯಾಯ, ಮೂಡಿಬಂದಿವೆ. ರಾಜಕೀಯ ವಿಮುಕ್ತಿಯು ಎರಡೂ ರೀತಿಯ ಪೀಡನೆಗಳ ಕೊನೆಗೊಳ್ಳುವಿಕೆಗೆ ಅಗತ್ಯವಾಗಿದೆ. ಎಂಗೆಲ್ಸ್ ತನ್ನ ''ಕುಟುಂಬ, ಖಾಸಗಿ ಆಸ್ತಿ ಮತ್ತು ಪ್ರಭುತ್ವಗಳ ಉಗಮ'' ಎಂಬ ಕೃತಿಯಲ್ಲಿ ಪುರುಷನು ಮಹಿಳೆಯ ಮೇಲೆ ನಡೆಸುವ ದೌರ್ಜನ್ಯವನ್ನು ''ಪ್ರಥಮ ಶ್ರೇಣಿಯ ಪರಾಧೀನತೆ'' ಎಂದಿದ್ದಾನೆ. ರಷ್ಯದ ಕ್ರಾಂತಿಯ ತರುವಾಯದಲ್ಲಿ ಬಾಲ್ಶೆವಿಕರು ಮಹಿಳಾ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಿ ಮಹಿಳೆಯರಿಗೆಂದೇ ಒಂದು ಅಂತರರಾಷ್ಟ್ರೀಯ ಮಹಿಳಾ ಕಾರ್ಯಾಲಯವನ್ನು ಸ್ಥಾಪಿಸಿದರು. ಆ ಕಾರ್ಯಾಲಯವು ದುಡಿಯುವ ಮಹಿಳೆಯರ ಮೊದಲ ಅಂತರರಾಷ್ಟ್ರೀಯ ಅಧಿವೇಶನವನ್ನು ಆಯೋಜಿಸಿತು. ಅದರಲ್ಲಿ ೨೦ ದೇಶಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಅಧಿವೇಶನವು ಮಹಿಳಾ ವಿಮುಕ್ತಿ ಮತ್ತು ಸಾಮ್ಯವಾದದ ಸಂರಚನೆ ಪರಸ್ಪರ ಕೊಂಡಿ ಹಾಕಿಕೊಂಡಿವೆಯೆಂದು ಘೋಷಿಸಿತು.

ಒಂದು ವಿಚಾರ ಗಮನಿಸಬೇಕು : ಮಹಿಳಾ ಚಳುವಳಿಗಳು ವ್ಯಾಪಕವಾಗಿ ಬೆಳೆದಿದ್ದು ೧೯೬೦ರ ದಶಕದಲ್ಲಿ. ಅವರೆಗೆ ಮಹಿಳಾ ಪ್ರಶ್ನೆಗಳಲ್ಲಿ ಆಸಕ್ತಿ ವಹಿಸಿದ ಪುರುಷರು ಯಾರು? ಬಹುತೇಕ ಅವರು ಸಮಾಜವಾದಿ ಮತ್ತು ಕಮ್ಯುನಿಸ್ಟ್ ವಲಯಗಳಿಗೆ ಸೇರಿದ್ದವರೇ. ಬೇರೆಲ್ಲ ರಾಜಕೀಯ ವಿಮೋಚನಾ ವಿಧಾನಗಳಿಗೂ ಮಹಿಳಾ ಸಮಾನತೆಯು ಆದ್ಯವೆಂದು ತಿಳಿದವರು ಅವರು. ೨೦ನೆಯ ಶತಮಾನದ ಆದಿಯಲ್ಲಿ ಲಿಂಗ ಸಮಾನತೆಯನ್ನು ರಾಷ್ಟ್ರೀಯತೆ ಮತ್ತು ವಸಾಹತುಶಾಹಿ ಪ್ರಶ್ನೆಗಳ ಜೊತೆಯಲ್ಲಿಟ್ಟು ವ್ಯವಸ್ಥಿತವಾಗಿ ಚರ್ಚೆ ಮತ್ತು ಹೋರಾಟ ನಡೆಸಿದ್ದು ಕಮ್ಯುನಿಸ್ಟ್ ಚಳುವಳಿಯೊಂದೇ. ರಾಬರ್ಟ್ ಯಂಗ್ ಇದನ್ನು ಕುರಿತು ವ್ಯಾಖ್ಯಾನ ನೀಡಿರುವುದು ಹೀಗೆ : ''ವರ್ಗ, ಲಿಂಗ ಮತ್ತು ವಸಾಹತುಶಾಹಿ, ಈ ಮೂರೂ ಶೋಷಣೆ ಮತ್ತು ದಬ್ಬಾಳಿಕೆಗಳಿಗೆ ಆಗರ. ಅವುಗಳ ಪರಸ್ಪರ ಅಂತಸ್ಸಂಬಂಧವನ್ನು ಗುರುತಿಸಿ ಅವೆಲ್ಲವನ್ನೂ ಒಟ್ಟಿಗೆ ಉತ್ಪಾಟಿಸಬೇಕೆಂಬ ಆಶಯದಿಂದ ರಾಜಕೀಯ ಕಾರ್ಯಕ್ರಮವೊಂದನ್ನು ರೂಪಿಸಿದ್ದು ಕಮ್ಯುನಿಸ್ಟ್ ಚಳುವಳಿ.'' ಪಾಶ್ಚಿಮಾತ್ಯ ದೇಶಗಳಲ್ಲಿ ಮಹಿಳಾ ಪ್ರಶ್ನೆಯು ಚರ್ಚೆಗೆ ಬರುವ ವೇಳೆಗಾಗಲೆ ಸಮಾಜವಾದಿ ರಾಷ್ಟ್ರಗಳಲ್ಲಿ ಮಹಿಳಾ ಹಕ್ಕುಗಳನ್ನು ಮಾನ್ಯ ಮಾಡಲಾಗಿತ್ತು. ಮಿಶೇಲ್ ಬ್ಯಾರೆಟ್ ಹೇಳುವಂತೆ ''ಸ್ತ್ರೀವಾದಿ ಚಿಂತನೆಗೆ ಹೊರತಾಗಿ ಮಹಿಳೆಯರ ಮೇಲಿನ ದಬ್ಬಾಳಿಕೆ ಬಗ್ಗೆ ತೀವ್ರವಾದ ಮತ್ತು ಆಳವಾದ ಚಿಂತನೆಯೇನಾದರೂ ಜರುಗಿದ್ದರೆ ಅದು ಮಾರ್ಕ್ಸ್‌ವಾದಿ ಚಿಂತಕರ ಕೊಡುಗೆ.''

ಮಹಿಳಾ ಚಳುವಳಿಗೆ ನಿಚ್ಚಳ ಬೆಂಬಲ ನೀಡಿದಂತೆಯೇ ಮಾರ್ಕ್ಸ್‌ವಾದವು ವಸಾಹತುಶಾಹಿ ವಿರುದ್ಧದ ಸಮರಕ್ಕೆ ವಿಶ್ವದ ಎಲ್ಲೆಡೆ ಊರುಗೋಲಾಗಿದೆ. ೨೦ನೆಯ ಶತಮಾನದ ಮೊದಲರ್ಧದ ಕಾಲದಲ್ಲಿ ಆ ಸಮರವನ್ನು ಕೇಂದ್ರವಿಷಯವನ್ನಾಗಿ ಕೈಗೆತ್ತಿಕೊಂಡಿದ್ದು ಕಮ್ಯುನಿಸ್ಟ್ ಚಳುವಳಿ ಮಾತ್ರವೇ. ಒಟ್ಟಾರೆ, ಆಧುನಿಕ ಯುಗದಲ್ಲಿ ಮಾರ್ಕ್ಸ್‌ವಾದವು ಮೂರು ಅತಿಮುಖ್ಯ ರಾಜಕೀಯ ಹೋರಾಟಗಳ ಮುಂಚೂಣಿಯಲ್ಲಿ ಕ್ರಿಯಾಶೀಲವಾಗಿದೆ : ವಸಾಹತುಶಾಹಿಯ ವಿರುದ್ಧದ ಸಮರ, ಮಹಿಳಾ ವಿಮೋಚನೆ ಮತ್ತು ಫ್ಯಾಸಿಸಂ ವಿರುದ್ಧದ ಹೋರಾಟ. ವಸಾಹತುಶಾಹಿಯನ್ನೆದುರಿಸಿದ ಮೊದಲ ಪೀಳಿಗೆಯವರಿಗೆ ಮಾರ್ಕ್ಸ್‌ವಾದಿ ಸಿದ್ಧಾಂತವು ಪ್ರಖರ ಆಯುಧವಾಗಿದ್ದಿತು. ೧೯೨೦-೩೦ನೆಯ ದಶಕಗಳಲ್ಲಿ ಎಲ್ಲೆಡೆ ವರ್ಣ ಮತ್ತು ಜನಾಂಗೀಯ ಸಮಾನತೆಯನ್ನು ಎತ್ತಿಹಿಡಿದವರು ಕಮ್ಯುನಿಸ್ಟರು. ಆಫ್ರಿಕಾದಲ್ಲಿ ಎರಡನೆ ಮಹಾಯುದ್ಧದ ನಂತರದಲ್ಲಿ ಘಾನಾದ ಕ್ವಾಮೆ ಎನ್‌ಕ್ರುಮಾ ಮತ್ತು ಫ್ರಾನ್ಟ್ಸ್ ಫ್ಯಾನನ್‌ನಿಂದ ಮೊದಲ್ಗೊಂಡು ರಾಷ್ಟ್ರೀಯತೆಯನ್ನು ಬಲಪಡಿಸಿದವರೆಲ್ಲಾ ಮಾರ್ಕ್ಸ್‌ವಾದದಿಂದ ಪ್ರೇರಣೆ ಪಡೆದಿದ್ದವರೇ. ಏಷ್ಯದ ಬಹುತೇಕ ಎಲ್ಲ ಕಮ್ಯುನಿಸ್ಟ್ ಪಕ್ಷಗಳೂ ತಮ್ಮ ಕಾರ್ಯಸೂಚಿಯಲ್ಲಿ ರಾಷ್ಟ್ರೀಯತೆಯನ್ನು ಮುಖ್ಯಾಂಶವನ್ನಾಗಿಸಿಕೊಂಡರು. ಜೂಲ್ಸ್ ಟೌನ್‌ಶೆಂಡ್‌ನ ಈ ಮಾತನ್ನು ಗಮನಿಸಿ : ''೧೯೬೦ರ ದಶಕದಲ್ಲಿ ಫ್ರಾನ್ಸ್ ಮತ್ತು ಇಟಲಿ ಹೊರತುಪಡಿಸಿದರೆ ಎಲ್ಲ ಅಭಿವೃದ್ಧ ಬಂಡವಾಳಶಾಹಿ ರಾಷ್ಟ್ರಗಳಲ್ಲೂ ದುಡಿಯುವ ವರ್ಗದ ಚಳುವಳಿಯು ಸ್ಥಗಿತಗೊಂಡಿತ್ತು; ಆದರೆ ಬುದ್ಧಿಜೀವಿಗಳು ಮತ್ತು ರೈತಾಪಿ ಜನ ಒಟ್ಟಾಗಿ ಏಷ್ಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕಾ (ದಕ್ಷಿಣ ಅಮೆರಿಕಾ)ಗಳಲ್ಲಿ ಕ್ರಾಂತಿಕಾಳಗ ಜರುಗಿಸುತ್ತಿದ್ದರು, ಸಮಾಜವಾದಿ ಎಂದು ಕರೆಯಲಾದ ವ್ಯವಸ್ಥೆಯನ್ನು ರೂಪಿಸುತ್ತಿದ್ದರು. ೧೯೬೬ರಲ್ಲಿ ಮಾವೋ ಪ್ರೇರಿತ ಸಾಂಸ್ಕೃತಿಕ ಕ್ರಾಂತಿ ಚೀಣಾದಲ್ಲಿ, ಅಮೆರಿಕಾದ ದುರಾಕ್ರಮಣದ ವಿರುದ್ಧ ಹೋ ಚಿ ಮಿನ್ಹ್ ನೇತೃತ್ವದಲ್ಲಿ ಉಗ್ರ ಹೋರಾಟ ವಿಯೆಟ್ನಾಮಿನಲ್ಲಿ, ಆಫ್ರಿಕದ ಟಾನ್ಜಾನಿಯಾದಲ್ಲಿ ನ್ಯೆರೆರೆ ನೇತೃತ್ವದಲ್ಲಿ ಸಮಾಜವಾದಿ ದೃಷ್ಟಿಪಥ; ಅಂತೆಯೇ ಘಾನಾ, ಗಿನಿ-ಬಿಸ್ಸೋ, ಆಲ್ಜೀರಿಯಗಳಲ್ಲಿ ಸಹ. ಅತ್ತ ಲ್ಯಾಟಿನ್ ಅಮೆರಿಕೆಯಲ್ಲಿ ಫಿಡೆಲ್ ಕ್ಯಾಸ್ಟ್ರೋ ಮತ್ತು ಚೆ ಗೆವಾರಾ ನೇತೃತ್ವದ ಕ್ಯೂಬ ಕ್ರಾಂತಿ.''

ವಿಶ್ವದ ಯಾವ ಭಾಗವನ್ನಾದರೂ ನೋಡಿ : ಮಲಯೇಷ್ಯದಿಂದ ಹಿಡಿದು ವೆಸ್ಟ್ ಇಂಡೀಸ್ ಅಥವಾ ಕ್ಯಾರಿಬಿಯನ್ ದೇಶಗಳವರೆಗೆ, ಐರ್ಲೆಂಡಿನಿಂದ ಆಲ್ಜೀರಿಯಾವರೆಗೆ, ಕ್ರಾಂತಿಕಾರಿ ರಾಷ್ಟ್ರೀಯತೆಯು ಭವ್ಯವಾಗಿ ತಲೆಯೆತ್ತಿತ್ತು; ಆಗ ಮಾರ್ಕ್ಸ್‌ವಾದವು ತನ್ನ ಪುನರ್ವಿಮರ್ಶೆಯಲ್ಲಿ ತೊಡಗಬೇಕಾಗಿ ಬಂದಿತು. ವಿದೇಶಿ ಆಳ್ವಿಕೆಯ ಸ್ಥಾನದಲ್ಲಿ ಸ್ವದೇಶಿ ಆಳ್ವಿಕೆಯನ್ನು ಸ್ಥಾಪಿಸುವುದರಿಂದ ಮಾರ್ಕ್ಸ್‌ವಾದ ತೃಪ್ತಿಪಡಲಿಲ್ಲ; ಬದಲಾಗಿ, ಅನೇಕ ಸೃಷ್ಟ್ಯಾತ್ಮಕ ಪ್ರಕ್ರಿಯೆಗಳಿಗೆ ಚಾಲನೆ ನೀಡತೊಡಗಿತು; ರಾಷ್ಟ್ರೀಯತೆಯಿಂದ ಅಂತರರಾಷ್ಟ್ರೀಯತೆಯತ್ತ ಮುಖ ಮಾಡಲು ವಿಮೋಚನೆಗೊಂಡ ರಾಷ್ಟ್ರಗಳಿಗೆ ಪ್ರೇರಣೆ ನೀಡಿತು. ಆಗ್ಗೆ ''ಮೂರನೆಯ ವಿಶ್ವ''ದ ಮಾತು ಇರುತ್ತಿತ್ತು. ಅಲ್ಲೆಲ್ಲಾ ಮಾರ್ಕ್ಸ್‌ವಾದವು ರಾಷ್ಟ್ರೀಯ ವಿಮೋಚನಾ ಹೋರಾಟಗಳ ಬೆಂಬಲಕ್ಕೆ ನಿಂತಿದ್ದಲ್ಲದೆ ಆ ದೇಶಗಳ ಭವಿಷ್ಯವು ಅಂತರರಾಷ್ಟ್ರೀಯ - ಸಮಾಜವಾದಿ ವ್ಯವಸ್ಥೆಯಲ್ಲಿದೆಯೇ ವಿನಾ ಬೂರ್ಷ್ವಾ ರಾಷ್ಟ್ರೀಯ ವ್ಯವಸ್ಥೆಯಲ್ಲಿ ಅಲ್ಲ ಎಂಬುದನ್ನು ಪ್ರತಿಪಾದಿಸಿತು. ಆ ರಾಷ್ಟ್ರಗಳು ಅದಕ್ಕೆ ಕಿವಿಗೊಟ್ಟವೋ ಇಲ್ಲವೋ ಎನ್ನುವುದು ಪ್ರತ್ಯೇಕ ಪ್ರಶ್ನೆ.

೧೯೧೭ರಲ್ಲಿ ರಷ್ಯಾದಲ್ಲಿ ಬಾಲ್ಶೆವಿಕ್ ಕ್ರಾಂತಿ ಜರುಗಿದಾಗ ಮೊದಲಿಗೆ ವಸಾಹತು ದೇಶಗಳ ಜನಕ್ಕೆ ಸ್ವಯಂ ನಿರ್ಧಾರದ ಹಕ್ಕಿರಬೇಕೆಂದು ಒತ್ತಾಯ ಮಾಡಲಾಯಿತು. ಅದನ್ನು ಕಾರ್ಯಗತಗೊಳಿಸಲು ವಿಶ್ವ ಕಮ್ಯುನಿಸ್ಟ್ ಚಳುವಳಿಯು ನಿರಂತರವಾಗಿ ಶ್ರಮಿಸಿತು ಕೂಡ. ಲೆನಿನ್‌ಗೆ ರಾಷ್ಟ್ರೀಯತೆಯ ಮೋಹವಿರಲಿಲ್ಲ; ಆದರೆ ವಸಾಹತು ದೇಶಗಳಲ್ಲಿ ರಾಷ್ಟ್ರೀಯ ವಿಮೋಚನಾ ಹೋರಾಟಕ್ಕೆ ಆದ್ಯತೆ ನೀಡಬೇಕೆಂಬ ರಾಜಕೀಯ ಸಿದ್ಧಾಂತವನ್ನು ಮಂಡಿಸಿದವನು ಅವನು. ರಾಷ್ಟ್ರೀಯತೆಯ ವೈಭವೀಕರಣದ ಜಾಗದಲ್ಲಿ ಅವನು ರಾಷ್ಟ್ರೀಯ ವಿಮೋಚನೆಯ ಕಾರ್ಯಸೂಚಿಯನ್ನಿಟ್ಟ. ಅದಕ್ಕೆ ಕಾರಣ ಕ್ರಾಂತಿಕಾರಿ ಪ್ರಜಾಪ್ರಭುತ್ವಕ್ಕೆ ಅದು ನಾಂದಿಯಾಗುತ್ತದೆಂಬುದು. ಅದರ ಅಭಾವದಲ್ಲಿ ವಿಕೃತ ರಾಷ್ಟ್ರೀಯತೆಯು ಅನ್ಯಾಕ್ರಮಣಶೀಲವಾಗುತ್ತದೆಂಬ ಅನುಮಾನ ಅವನದಾಗಿತ್ತು. ಅಂದರೆ, ಮಾರ್ಕ್ಸ್‌ವಾದವು ಏಕಕಾಲದಲ್ಲಿ ವಸಾಹತು ವಿರೋಧ ಮತ್ತು ರಾಷ್ಟ್ರೀಯತೆಯ ಸಿದ್ಧಾಂತದ ವಿಮರ್ಶೆ, ಹೀಗೆ ಎರಡನ್ನೂ ಮಾಡಿತು ಎಂದರ್ಥ. ಕೆವಿನ್ ಆಂಡರ್‌ಸನ್ ಇದನ್ನು ವಿಶದೀಕರಿಸಿರುವುದು ಹೀಗೆ : ''ಭಾರತವು ಸ್ವಾತಂತ್ರ್ಯ ಪಡೆಯುವುದಕ್ಕೆ ಮೂರು ದಶಕಗಳ ಮುಂಚೆ, ಆಫ್ರಿಕಾದ ರಾಷ್ಟ್ರೀಯ ವಿಮೋಚನಾ ಚಳುವಳಿಗಳು ತಾರಕಕ್ಕೇರುವ ನಾಲ್ಕು ದಶಕಗಳ ಮುನ್ನ, ಲೆನಿನ್ ಆಗಲೇ ಸಾಮ್ರಾಜ್ಯಶಾಹಿ ವಿರೋಧದ ರಾಷ್ಟ್ರೀಯ ಚಳುವಳಿಗಳನ್ನು ನಿರೀಕ್ಷಿಸುತ್ತಿದ್ದ; ಅದು ಜಾಗತಿಕ ರಾಜಕೀಯದ ಮೂಲಸೂತ್ರವಾಗುತ್ತದೆಂದು ಎಣಿಸಿದ್ದ.'' ೧೯೨೦ರಲ್ಲಿ ಅವನು ಬರೆದಿದ್ದು ಇದು : ''ಎಲ್ಲ ಕಮ್ಯುನಿಸ್ಟ್ ಪಕ್ಷಗಳೂ ಸ್ವತಂತ್ರ ಮತ್ತು ಅಸ್ವತಂತ್ರ ದೇಶಗಳಲ್ಲಿ ಕ್ರಾಂತಿಕಾರಿ ಚಳುವಳಿಗಳಿಗೆ ನೇರ ಬೆಂಬಲ ನೀಡಬೇಕು.'' ತನ್ನ ದೇಶದ ಕಮ್ಯುನಿಸ್ಟ್ ಪಕ್ಷದಲ್ಲಿ ಆಗಾಗ್ಗೆ ತಲೆಯೆತ್ತುತ್ತಿದ್ದ ''ರಷ್ಯದ ಅನ್ಯಾಕ್ರಮಣಶೀಲತೆ''ಯನ್ನು ಅವನು



ತುಚ್ಛೀಕರಿಸಿದ. ಆದಾಗ್ಯೂ ಉಕ್ರೇನ್ ಮತ್ತು ಜಾರ್ಜಿಯಾಗಳನ್ನು ರಷ್ಯದಲ್ಲಿ ವಿಲೀನಗೊಳಿಸಲು ಅವನು ಹಿಂದೇಟು ಹಾಕಲಿಲ್ಲವೆಂಬುದು ಒಂದು ಐತಿಹಾಸಿಕ ವ್ಯಂಗ್ಯ. ಟ್ರಾಟ್‌ಸ್ಕಿ ಮತ್ತು ರೋಸಾ ಲುಕ್ಸೆಂಬರ್ಗ್‌ರಂತಹ ಇತರ ಬಾಲ್ಶೆವಿಕರು ರಾಷ್ಟ್ರೀಯತೆಯ ಉಪದ್ರವಕ್ಕೆ ತೀರಾ ವಿಮುಖರಾಗಿದ್ದರು.

ಮಾರ್ಕ್ಸ್‌ನ ಕಾಲದಲ್ಲಿ ವಸಾಹತುಶಾಹಿ ವಿರೋಧಿ ರಾಜಕೀಯಕ್ಕೆ ಇನ್ನೂ ಸಾಕಷ್ಟು ಮನ್ನಣೆ ದೊರಕಿರಲಿಲ್ಲ. ಅವನು ವಸಾಹತು ಶೋಷಣೆ ಮತ್ತು ದೌರ್ಜನ್ಯಗಳನ್ನು ಸಮರ್ಥಿಸಲಿಲ್ಲ, ನಿಜ; ಆದರೆ ವಸಾಹತು ಆಡಳಿತವು ಸಾಮಾಜಿಕ ಸಂರಚನೆಯ ದೃಷ್ಟಿಯಿಂದ ನಿರ್ದಿಷ್ಟ ಬದಲಾವಣೆಯನ್ನು ಉಂಟುಮಾಡಬಹುದೆಂದು ನಿರೀಕ್ಷಿಸಿದ್ದ. ಅವನಿಗೆ ಸಮಾಜವಾದಿ ಕ್ರಾಂತಿಯು ಪ್ರಮುಖವಾಗಿದ್ದುದರಿಂದ ಇಂತಹ ದೃಷ್ಟಿ ಬೆಳೆದಿದ್ದಿರಬಹುದು. ಕೆಲವು ರಾಷ್ಟ್ರೀಯತೆಗಳನ್ನು ನಗಣ್ಯವೆಂದೂ ''ಅ-ಚಾರಿತ್ರಿಕ''ವೆಂದೂ ಕರೆದಿದ್ದೂ ಉಂಟು. ಜೆಕ್, ಸ್ಲೋವೆನ್, ಕ್ರೋಟ್, ಸರ್ಬ್, ಮುಂತಾದುವೆಲ್ಲಾ ಈ ಪಟ್ಟಿಗೆ ಸೇರಿಹೋಗಿದ್ದವು. ಸಾಮಾಜಿಕ ಕ್ರಾಂತಿಯಾಗುವುದಾದರೆ ಆಲ್ಜೀರಿಯಾ ಮತ್ತು ಮೆಕ್ಸಿಕೋಗಳ ಮೇಲಿನ ಆಕ್ರಮಣ ಖಂಡನಾರ್ಹವಲ್ಲವೆಂಬ ನಿಲುವನ್ನು ಏಂಗೆಲ್ಸ್ ಪರೋಕ್ಷವಾಗಿ ಪ್ರಕಟಿಸಿದ್ದ! ದಕ್ಷಿಣ ಅಮೇರಿಕಾದ ಸೈಮನ್ ಬೊಲಿವಾರ್ ಮಾರ್ಕ್ಸ್‌ನ ದೃಷ್ಟಿಯಲ್ಲಿ ಅಪ್ರತಿಮನೆನಿಸಿರಲಿಲ್ಲವೆಂಬುದು ಇಂದು ಸೋಜಿಗ ತರುತ್ತದೆ. ಭಾರತದ ಬಗೆಗಿನ ಮಾರ್ಕ್ಸ್‌ನ ಕೆಲವು ಮಾತುಗಳು ತೀರಾ ಪ್ರಶ್ನಾರ್ಹ. ಉದಾಹರಣೆಗೆ, ಭಾರತಕ್ಕೆ ಹೇಳಿಕೊಳ್ಳುವಂತಹ ಚರಿತ್ರೆಯೇ ಇಲ್ಲವೆಂದು ಅವನೊಮ್ಮೆ ಉದ್ಗರಿಸಿದ್ದ. ಇಂದಿನ ಯಾವ ವಿಶ್ವವಿದ್ಯಾನಿಲಯವೂ ಇಂತಹ ತಪ್ಪು ಗ್ರಹಿಕೆಯವನಿಗೆ ಅರ್ಹತಾ ಪತ್ರ ನೀಡಲಾರದು!

ಅದೆಲ್ಲಾ ಸರಿ, ಆದರೆ ಮಾರ್ಕ್ಸ್ ಹಾಗೆಲ್ಲಾ ಹೇಳಿದ್ದೇಕೆ? ಒಂದು ದೇಶವು ಇನ್ನೊಂದು ದೇಶವನ್ನು ತುಳಿದಿಡುವುದು ಸ್ವಾಗತಾರ್ಹವೆಂದು ಅವನು ಭಾವಿಸಿದ್ದನೆ? ಅನಭಿವೃದ್ಧ ದೇಶಗಳಲ್ಲಿ ಬಂಡವಾಳಶಾಹಿಯಾದರೂ ನೆಲೆಗೊಂಡರೆ ಅಲ್ಲಿಯವರೆಗಿನ ತುಳಿತಕ್ಕೆ ಭರತವಾಕ್ಯ ಹಾಡಬಹುದೆಂದು ಮತ್ತು ವಸಾಹತುಶಾಹಿಯು ಬಂಡವಾಳಶಾಹಿಗೆ ನಾಂದಿ ಹಾಡುತ್ತದೆಂದು ಅವನು ನಿರೀಕ್ಷಿಸಿದ್ದ. ನಂತರ ಸಮಾಜವಾದಿ ವ್ಯವಸ್ಥೆಗೆ ಅದು ದಾರಿ ಮಾಡಿಕೊಡುತ್ತದೆಂಬುದು ಅವನ ಹಂಬಲ. ಇಂತಹ ನಿರೀಕ್ಷೆಗೆ ಬಲವಾದ ಹಿನ್ನೆಲೆ ಯೇನಾದರೂ ಇದ್ದಿತೇ ಎಂಬುದು ಸಂಶಯಾಸ್ಪದ ವಿಷಯವಾಗಿದೆ.

ವಸಾಹತುಶಾಹಿಯು ಇತ್ಯಾತ್ಮಕ ಪ್ರಭಾವ ಹೊಂದಿರುತ್ತದೆಂಬ ಮಾತು ಇಂದು ತೀರಾ ನಗೆಪಾಟಲಿಗೆ ವಸ್ತುವಾಗಬಲ್ಲದು. ಇನ್ನೂರು ವರ್ಷಗಳ ಇತಿಹಾಸದಲ್ಲಿ ಯಾವೊಂದು ರಾಷ್ಟ್ರವೂ ಅಂತಹ ವ್ಯಂಗ್ಯವನ್ನು ಸಹಿಸಿಕೊಂಡಿಲ್ಲ, ಭಾರತವೇ ಆಗಲಿ, ಕಾಂಗೋ ಆಗಲಿ, ವಸಾಹತು ದೌರ್ಜನ್ಯವನ್ನು ಮರೆಯುವಂತಿಲ್ಲ. ಮನಮೋಹನ ಸಿಂಗ್ ಒಮ್ಮೆ ಇಂಗ್ಲೆಂಡಿನಲ್ಲಿ ತಮ್ಮ ವಿಶ್ವವಿದ್ಯಾನಿಲಯಕ್ಕೆ ಭೇಟಿಕೊಟ್ಟಾಗ ವಸಾಹತು ಆಡಳಿತವು ಭಾರತಕ್ಕೆ ನೀಡಿದ ಕೊಡುಗೆಯನ್ನು ಶ್ಲಾಘಿಸಿದ್ದರು. ಆಮೇಲೆ ಅವರೂ ಕಸಿವಿಸಿ ಅನುಭವಿಸಿರಬೇಕು. ಸಾಮಾನ್ಯವಾಗಿ ರೈಲ್ವೆ, ಅಂಚೆ, ಇತ್ಯಾದಿ ''ಬಳುವಳಿ''ಗಳನ್ನು ಸ್ಮರಿಸುವುದು, ಆಂಗ್ಲ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಶ್ಲಾಘಿಸುವುದು, ಅಷ್ಟೋ-ಇಷ್ಟೋ ಉದ್ಯಮಗಳ ಸ್ಥಾಪನೆಯನ್ನು ಹೆಸರಿಸುವುದು ರೂಢಿಯಲ್ಲಿದೆ. ಐರ್ಲೆಂಡ್ ಮತ್ತು ಭಾರತ ಎರಡೂ ವಸಾಹತುಶಾಹಿಯಡಿ ಹಲವು ಭೀಕರ ಕ್ಷಾಮಗಳಿಗೆ ಗುರಿಯಾಗಿದ್ದವು. ಅಂತೆಯೇ ಹಿಂಸೆ, ಜನಾಂಗೀಯ ತಾರತಮ್ಯ, ಸಂಪತ್ತಿನ ಲೂಟಿ, ಮುಂತಾದವನ್ನು ಎಲ್ಲ ವಸಾಹತು ರಾಷ್ಟ್ರಗಳೂ ಅನುಭವಿಸಿವೆ. ವಸಾಹತು ಆಡಳಿತವು ನೀಡಿದ ವಿದ್ಯಾಭ್ಯಾಸದಿಂದಾಗಿ ಸ್ವಾತಂತ್ರ್ಯ ಚಳುವಳಿಯು ಬೆಳೆಯಿತೆಂದು ಭಾರತದ ಸಂದರ್ಭದಲ್ಲಿ ಕೆಲವು ಚರಿತ್ರಕಾರರು ಉದ್ಗರಿಸಿದ್ದಾರೆ. ಐರ್ಲೆಂಡ್, ಆಫ್ರಿಕಾ, ಮುಂತಾದೆಡೆಗಳಲ್ಲಿ ವಸಾಹತು ಸರ್ಕಾರವು ಹೇರಿದ್ದ ಭಾಷೆಯನ್ನು ತಿರಸ್ಕರಿಸಿ ತಮ್ಮ ಸ್ವಂತದ ಭಾಷೆಯಲ್ಲಿ ಬರೆಯುವುದು ಸಾಹಿತಿಗಳಿಗೆ ರೂಢಿಯಾಗಿಹೋಗಿದೆ. ಇಂಗ್ಲಿಷ್‌ನಿಂದಾಗಿ ಭಾರತದ ಅಭಿವೃದ್ಧಿ ಅತಿಶಯವಾಗಿ ಮುನ್ನಡೆದಿದೆಯೆಂದು ಹೇಳುವವರ ಸಂಖ್ಯೆ ಕಡಿಮೆಯೇನಿಲ್ಲ. ಹಾಗೆ ವಾದ ಮಂಡಿಸುವ ಮಂದಿ ವಸಾಹತು ದೌರ್ಜನ್ಯವನ್ನು ನೇರವಾಗಿ ಅನುಭವಿಸಿರಲಿಲ್ಲ, ದೌರ್ಜನ್ಯಗಳ ಸರಮಾಲೆಯ ಇತಿಹಾಸವನ್ನು ತಿಳಿದಿಲ್ಲ. ಗಾಂಧೀಜಿ ಚಂಪಾರಣ್‌ನಲ್ಲಿ ಆರಂಭಿಸಿದ ಚಳುವಳಿಯ ಹಿಂದು-ಮುಂದು ತಿಳಿಯದ ಪೀಳಿಗೆ ಇಂದಿನದು. ಜಲಿಯನ್‌ವಾಲಾಬಾಗ್ ಹೆಚ್ಚೆಂದರೆ ಅಂಥವರಿಗೆ ಒಂದು ಪ್ರವಾಸ ತಾಣ, ಅಷ್ಟೆ. ಮಾರ್ಕ್ಸ್ ವಸಾಹತುಶಾಹಿಯನ್ನು ಹಾಡಿ ಹೊಗಳಲಿಲ್ಲ, ಅದರ ದುರಂತವನ್ನು ತೆರೆದಿಟ್ಟ, ಅದರ ಪಾತಕಗಳನ್ನು ಬಹಿರಂಗಗೊಳಿಸಿದ. ೧೮೫೭ರ ವಿಪ್ಲವವನ್ನು ''ಭಾರತದ ಮೊದಲ ಸ್ವಾತಂತ್ರ್ಯ ಹೋರಾಟ''ವೆಂದು ಬಣ್ಣಿಸಿದವನು ಅವನು. ಅವನಷ್ಟು ಮುಕ್ತವಾಗಿ ಆ ದಂಗೆಯನ್ನು ಅಂದಿಗೆ ಸ್ವಾಗತಿಸಿದವರು ಬೇರೆ ಯಾರೂ ಇರಲಿಲ್ಲ. ಬ್ರಿಟನ್ನಿನ ವಸಾಹತು ಆಡಳಿತವು ಭಾರತಕ್ಕೆ ಎಷ್ಟು ಕೇಡು ಬಗೆಯಿತೆಂದು ವಿವರಿಸುವಾಗ ಅವನು ಅದನ್ನು ''ಪ್ರತೀಕಾರದ ರೀತಿಯಲ್ಲಿ ರಕ್ತ ಹೀರುವ ಪ್ರಕ್ರಿಯೆ'' ಎಂದು ಬಣ್ಣಿಸಿದ, ''ಬೂರ್ಷ್ವಾ ನಾಗರಿಕತೆಯ ಉನ್ನತಮಟ್ಟದ ಢೋಂಗಿತನ ಮತ್ತು ಅತಿದಾರುಣ ಕ್ರೌರ್ಯ'' ಎಂದು ಸಹ ಅದನ್ನು ಖಂಡಿಸಿದ. ಐಜಾಜ್ ಅಹಮದ್ ದಾಖಲಿಸಿರುವಂತೆ ಹತ್ತೊಂಭತ್ತನೆಯ ಶತಮಾನದ ಯಾವುದೇ ಭಾರತೀಯ ಸಮಾಜ ಸುಧಾರಕರಿಗಿಂತಲೂ ಹೆಚ್ಚಿನ ಮಟ್ಟದಲ್ಲಿ ಮಾರ್ಕ್ಸ್ ಭಾರತದ ಸ್ವಾತಂತ್ರ್ಯ ಸಂಗ್ರಾಮವನ್ನು ಉತ್ಸಾಹದಿಂದ ಸ್ವಾಗತಿಸಿದ. ಮೆಕ್ಸಿಕೊ ಆಕ್ರಮಣವನ್ನು ಮೊದಲಿಗೆ ಸ್ವಾಗತಿಸಿದ್ದ ಮಾರ್ಕ್ಸ್ ನಂತರ ಅದಕ್ಕೆ ಪಶ್ಚಾತ್ತಾಪ ವ್ಯಕ್ತಪಡಿಸಿದ, ಆಕ್ರಮಣವನ್ನು ಖಂಡಿಸಿದ. ಆಲ್ಜೀರಿಯಾ ದೇಶವು ಫ್ರಾನ್ಸಿನ ಆಡಳಿತಕ್ಕೆ ಸಿಲುಕಿ ಎಷ್ಟು ಹಿಂಸೆಗೆ ಗುರಿಯಾಯಿತೆಂಬುದನ್ನು ಏಂಗೆಲ್ಸ್ ೧೮೮೦ರ ದಶಕದಲ್ಲಿ ದೀರ್ಘವಾಗಿ ವಿವರಿಸಿದ. ಅಲ್ಲಿಯ ಜನರನ್ನು ''ಕೆಳಮಟ್ಟದ ಪ್ರಾಣಿಗಳು'' ಎಂದು ಭಾವಿಸಿದ ಫ್ರಾನ್ಸ್ ''ದುರಹಂಕಾರದ ಎಲ್ಲೆಯನ್ನು ಸಹ ಮೀರಿತು'' ಎಂದು ಅವನು ವ್ಯಾಕುಲಗೊಂಡ. ಚೀಣಾದಲ್ಲಿ ಆ ಕಾಲಕ್ಕಾಗಲೆ ಜಾರಿಯಲ್ಲಿದ್ದ ರಾಷ್ಟ್ರೀಯ ವಿಮೋಚನಾ ಚಳುವಳಿಯನ್ನು ಸ್ವಾಗತಿಸುತ್ತಾ ''ನಾಗರಿಕತೆಯ ಮಾರಾಟಗಾರರು'' ಎಸಗಿದ್ದ ದೌರ್ಜನ್ಯವನ್ನು ಮಾರ್ಕ್ಸ್ ಖಂಡಿಸಿದ. ಈ ದೇಶಗಳಲ್ಲೆಲ್ಲಾ ಕ್ರಾಂತಿಕಾರಿ ಚಳುವಳಿಗಳು ಮಾತ್ರವೇ ಸಮಸ್ಯೆಯನ್ನು ಪರಿಹರಿಸಬಲ್ಲವೆಂದು ಮಾರ್ಕ್ಸ್ ಮತ್ತು ಏಂಗೆಲ್ಸ್ ಭಾವಿಸಿದ್ದರು. ''ದಮನವನ್ನು ಹರಿಬಿಡುವ ದೇಶವು ತನ್ನ ಕೈಕೋಳಗಳನ್ನು ತಾನೇ ರೂಪಿಸಿಕೊಳ್ಳುತ್ತದೆ'' ಎಂದು ಪ್ರತಿಪಾದಿಸಿದ್ದ ಮಾರ್ಕ್ಸ್ ಐರ್ಲೆಂಡಿನ ರಾಷ್ಟ್ರೀಯ ಚಳುವಳಿಯ ಯಶಸ್ಸು ಇಂಗ್ಲೆಂಡಿನ ಸಾಮಾಜಿಕ ಕ್ರಾಂತಿಗೂ ಬುನಾದಿಯನ್ನು ರಚಿಸುತ್ತದೆಂದು ವಿಶ್ಲೇಷಿಸಿದ್ದ.

ಮಾರ್ಕ್ಸ್‌ವಾದದ ಪರಂಪರೆಯು ಈವರೆಗೆ ಪ್ರಸ್ತಾಪಿಸಲ್ಪಟ್ಟ ಕ್ಷೇತ್ರಗಳಿಗಷ್ಟೇ ಸೀಮಿತವಾಗಿಲ್ಲ. ವಿಶ್ವದ ಇಂದಿನ ಯಾವುದೇ ಪ್ರಕಾರದ ಸಂಗತಿಯಲ್ಲೂ ಮಾರ್ಕ್ಸ್‌ವಾದದ ಪ್ರಶಂಸನೀಯ ಪಾತ್ರವಿದೆ. ಸಂಸ್ಕೃತಿ, ಲಿಂಗ, ಭಾಷೆ, ಸ್ವಂತಿಕೆ, ಜನಾಂಗೀಯತೆ, ಇತ್ಯಾದಿಗಳನ್ನೆಲ್ಲಾ ಪ್ರಭುತ್ವ ಶಕ್ತಿಯಿಂದ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲವೆಂಬುದನ್ನು ಮಾರ್ಕ್ಸ್‌ವಾದ ತೋರಿಸಿಕೊಟ್ಟಿದೆ. ಭೌತಿಕ ಅಸಮಾನತೆ, ದುಡಿಮೆಯ ಶೋಷಣೆ, ಸಾಮ್ರಾಜ್ಯಶಾಹಿಯ ಲೂಟಿ ಪ್ರವೃತ್ತಿ, ಬೃಹತ್ತಾದ ರಾಜಕೀಯ ಪ್ರತಿರೋಧ, ಕ್ರಾಂತಿಕಾರಿ ಪರಿವರ್ತನೆ, ಇವೆಲ್ಲಾ ವಿಶ್ವದ ಕಾರ್ಯಸೂಚಿಯಲ್ಲಿ ಸೇರಿಹೋಗಿರುವುದು ಮಾರ್ಕ್ಸ್‌ವಾದದ ಪರಿಣಾಮವೆಂದರೆ ತಪ್ಪಾಗಲಾರದು. ೧೯೮೦ರ ತರುವಾಯದ ಹತ್ತಾರು ಪ್ರಸಂಗಗಳಿಂದಾಗಿ ಮಾರ್ಕ್ಸ್‌ವಾದದ ಮೇಲೆ ಮಣ್ಣೆರಚುವ ಕೆಲಸ ಭರದಿಂದ ಸಾಗಿದೆ. ಅದೆಷ್ಟು ವ್ಯಾಪಕವಾಗಿದೆಯೆಂಬುದಕ್ಕೆ ಒಂದು ನಿದರ್ಶನ ಸಾಕು. ಜರ್ಮನಿಯ ಟ್ರೆಯರ್ ಎಂಬಲ್ಲಿ ಮಾರ್ಕ್ಸ್ ೧೮೧೮ರಲ್ಲಿ ಜನಿಸಿದ. ಅವನು ಹುಟ್ಟಿದ ಮನೆ ಇಂದು ಒಂದು ಸ್ಮಾರಕವಾಗಿದೆ. ಅದು ಮಾರ್ಕ್ಸ್‌ವಾದದ ವಿರೋಧಿಗಳ ಹತೋಟಿಗೆ ಸಿಲುಕಿ ಮಾರ್ಕ್ಸ್‌ನನ್ನು ಮೂದಲಿಕೆಗೆ ಗುರಿಮಾಡುವ ವ್ಯಾಖ್ಯಾನಗಳು ಮನೆಯ ಗೋಡೆಗಳನ್ನೆಲ್ಲಾ ತುಂಬಿದೆ. ೧೯೬೦ರ ದಶಕದ ತಥಾಕಥಿತ ವಿದ್ಯಾರ್ಥಿ ನಾಯಕ ರೂಡಿ ಡುಚ್ಕ ಒಬ್ಬ ಅಸಭ್ಯ ಅರಾಜಕತಾವಾದಿ; ಆದರೆ ಮಾರ್ಕ್ಸ್‌ನ ಹಿಂದಿನ ಮನೆಯಲ್ಲಿ ಇಂದು ಡುಚ್ಕನನ್ನು ''ಮಾರ್ಕ್ಸ್‌ನ ಚಿಂತನೆಯ ಪುನರುತ್ಥಾನದ ರೂವಾರಿ'' ಎಂದು ಬಣ್ಣಿಸಲಾಗುತ್ತಿದೆ! ಅಂದರೆ, ಮಾರ್ಕ್ಸ್ ಅರಾಜಕತೆಯನ್ನು ಇತಿಹಾಸದ ಹೂರಣವೆಂದು ಬಗೆದಿದ್ದನೆಂದೆ? ಮಾರ್ಕ್ಸ್‌ವಾದದ ಜಾಗದಲ್ಲಿ ಇಂದಿನ ''ಪ್ರೌಢ ವಿದ್ವಾಂಸರು'' ಕೆಲವರು ''ವಸಾಹತೋತ್ತರ ಚಿಂತನೆ'' ಎಂಬ ಹುರುಳಿಲ್ಲದ ವ್ಯಾಖ್ಯಾನಗಳನ್ನು ಮುಂದಿಡುತ್ತಿದ್ದಾರೆ. ಮಾರ್ಕ್ಸ್‌ನನ್ನು ಹೀಯಾಳಿಸಿ ಸೋಲಿಸಬೇಕಾದರೆ ಅವನ ಸಿದ್ಧಾಂತವನ್ನು ಅಪಾರ್ಥಕ್ಕೆ ಗುರಿಮಾಡುವುದೊಂದೇ ಯಶಸ್ಸಿನ ಮಾರ್ಗವೆಂದು ಅವರೆಲ್ಲಾ ತಿಳಿದುಬಿಟ್ಟಿದ್ದಾರೆ ಮತ್ತು ಅದನ್ನು ಪ್ರಾಯೋಗಿಕವಾಗಿ ಮಾಡುತ್ತಿದ್ದಾರೆ. ''ಇತಿಹಾಸದ ಅಂತ್ಯ'' ಎಂಬ ಸಮಾಧಾನದ ನಿಟ್ಟುಸಿರನ್ನು ಬಿಟ್ಟು ಕೇಕೆ ಹಾಕುವುದಷ್ಟೇ ಅವರಿಗೆ ಗೊತ್ತು. ಅವರ ಆಸೆ ಈಡೇರದೆ ಹತಾಶೆಗೆ ಈಡಾಗುವುದು ಅವರಿಗೆ ಕಾದಿರುವ ಭವಿಷ್ಯ. ಕ್ರಿಸ್ಟಫರ್ ಹಿಲ್ ಎಂಬ ಇತಿಹಾಸಕಾರ ಇಂತಹವರನ್ನು ದೃಷ್ಟಿಯಲ್ಲಿಟ್ಟುಕೊಂಡು ೧೯೫೦ರ ದಶಕದಲ್ಲಿ ಹೇಳಿದ್ದ, ''ಮಾರ್ಕ್ಸ್‌ನನ್ನು ಹೂತುಬಿಟ್ಟೆವೆಂದು ಸಂಭ್ರಮಿಸುತ್ತಿದ್ದೀರಿ, ಆದರೆ ನಿಮ್ಮ ಸಂಭ್ರಮ ತೀರಾ ಅಪಕ್ವವಾದ್ದು ಎಂಬುದನ್ನು ತಿಳಿಯಿರಿ'' ಎಂದು. ದಕ್ಷಿಣ ಅಮೇರಿಕಾದ ಈಚಿನ ಬೆಳವಣಿಗೆಗಳು ಹಿಲ್ ನೀಡಿದ್ದ ಎಚ್ಚರಕ್ಕೆ ಸಾಕ್ಷಿಯನ್ನೊದಗಿಸಿವೆ. ಫುಕುಯಾಮ ''ಇತಿಹಾಸದ ಅಂತ್ಯವಾಯಿತು'' ಎಂಬ ಘೋಷಣೆಯ ಜನಕ. ಹೆಚ್ಚೆಂದರೆ ಅವನೊಬ್ಬ ''ವಸಾಹತೋತ್ತರ ಚಿಂತನೆಯ ಪರಿಭಾಷೆಯ ವಕ್ತಾರ.'' ಮಾತಿನ ಮಲ್ಲ ಎಂದು ಬೇಕಾದರೆ ಅವನನ್ನು ವರ್ಣಿಸಬಹುದು. ಅವನ ಸಂತತಿಯವರು ಕೆಲವರು ಅಲ್ಲಲ್ಲಿ ವಿಶ್ವವಿದ್ಯಾನಿಲಯಗಳ ಹಾಸುಹುಲ್ಲಿನ ಮೇಲೆ ಇಲ್ಲವೆ ಪಂಚತಾರಾ ಹೋಟೇಲುಗಳಲ್ಲಿ ತಮ್ಮ ಪಾಂಡಿತ್ಯ ಪ್ರದರ್ಶನ ಮಾಡುತ್ತಿರುತ್ತಾರೆ. ಅವರಿಗೂ ತಿಳಿದಿದೆ, ಮಾರ್ಕ್ಸ್‌ವಾದವು ಮಾತಿನ ಚಾವಡಿಯಲ್ಲ ಎಂಬುದು. ಅದು ಭೂಗೋಳದ ಎಲ್ಲ ಖಂಡಗಳನ್ನೂ ಆವರಿಸಿರುವ ವಿಶಾಲ ರಾಜಕೀಯ ಚಳುವಳಿ.

ಮಾರ್ಕ್ಸ್‌ವಾದಕ್ಕೆ ವಯಸ್ಸು ಇನ್ನೂರು ಕೂಡ ಇಲ್ಲ, ಆದರೆ ಮಾರ್ಕ್ಸ್‌ವಾದವು ವಿಶ್ಲೇಷಿಸುವ ವಿಶ್ವದ ಮಾನವ ಇತಿಹಾಸದ ವಯಸ್ಸು ಇಪ್ಪತ್ತು ಸಾವಿರವಾದರೂ ಇದ್ದೀತು. ದೀರ್ಘಕಾಲದ ಆ ಇತಿಹಾಸದ ಪಾಠವನ್ನು ಫುಕುಯಾಮ, ಫೂಕೋ, ಗೋರ್ಬಚೇವ್, ರೊನಾಲ್ಡ್ ರೀಗನ್ ಮುಂತಾದವರ ಕೂಟವು ಅಪ್ರಸ್ತುತಗೊಳಿಸಲಾರದು. ೧೮೪೮ರಿಂದ ಪ್ರತಿಯೊಂದು ದಶಕದಲ್ಲೂ ಚಿಂತನೆಯ ಅಸ್ತ್ರ ಹಿಡಿದ ವಿದ್ವಾಂಸರ ಗುಂಪುಗಳು ಮಾರ್ಕ್ಸ್‌ವಾದವನ್ನು ಕೊಂದು ಹೂಳುತ್ತಲೇ ಬಂದಿವೆ, ಆದರೆ ಗುಂಡಿಯನ್ನೇ ಅಗೆಯದೆ ಹೂಳುವ ಯತ್ನ ಮಾಡುತ್ತಾ ಬಂದಿರುವ ಮೂಢರು ಆ ಗುಂಪಿನ ಮುಂದಾಳುಗಳು!

ಹಾಗಿದ್ದರೆ ಏನಿದು ''ವಸಾಹತೋತ್ತರ ಚಿಂತನೆ'' ಎಂಬ ಅದ್ಭುತ? ಅದು ಅಸ್ತಿತ್ವಕ್ಕೆ ಬಂದಿದ್ದು ಇಪ್ಪತ್ತನೆಯ ಶತಮಾನದ ಕೊನೆಕೊನೆಯಲ್ಲಿ, ಅಂದರೆ ಬಹುತೇಕ ವಸಾಹತುಗಳು ವಿಮೋಚನಾ ಹೋರಾಟಗಳ ಮೂಲಕ ರಾಜಕೀಯ ಸ್ವಾತಂತ್ರ್ಯ ಪಡೆದನಂತರ. ಎಡ್ವರ್ಡ್ ಸಯಿದ್ ತನ್ನ ''ಓರಿಯೆಂಟಲಿಸಂ'' ಎಂಬ ಗ್ರಂಥವನ್ನು ಪ್ರಕಟಿಸಿದ್ದು ೧೯೭೦ರ ದಶಕದ ಮಧ್ಯದಲ್ಲಿ. ಬಂಡವಾಳಶಾಹಿ ವ್ಯವಸ್ಥೆಯ ಬಿಕ್ಕಟ್ಟು ಪಾಶ್ಚಿಮಾತ್ಯ ದೇಶಗಳಲ್ಲಿ ಅಸ್ಪಷ್ಟವಾಗಿ ಉಳಿದಿದ್ದ ಕ್ರಾಂತಿಕಾರಿ ಹುಮ್ಮಸ್ಸನ್ನು ಪೇಲವಗೊಳಿಸುತ್ತಿದ್ದ ಕಾಲ ಅದು. ಸಯಿದ್‌ನ ಮಾರ್ಕ್ಸ್‌ವಾದದ ವಿರುದ್ಧದ ಧೋರಣೆ ರಂಜನೀಯವಾಗಿ ತೋರಿದ್ದಕ್ಕೆ ಅದೂ ಒಂದು ಕಾರಣ. ಕ್ರಾಂತಿಕಾರಿ ನಿಲುವನ್ನು ನಿರಾಕರಿಸದೆ ''ವಸಾಹತೋತ್ತರ ಚಿಂತನೆಯು'' ಮಾರ್ಕ್ಸ್‌ವಾದದ ಕ್ರಾಂತಿಕಾರಿ ಧೋರಣೆಗೆ ಪರ್ಯಾಯವಾಗಿ ನೆಲೆಸಲು ಯತ್ನ ನಡೆಸಿತು. ''ಕ್ರಾಂತಿಯ ಉತ್ತರಕಾಲಕ್ಕೆ ಸೊಗಸಾದ ಕ್ರಾಂತಿಯ ಉತ್ತರಕಾಲದ ಚಿಂತನೆ'' ಎಂದು ಅದನ್ನು ಬಣ್ಣಿಸಬಹುದು. ಅದರ ಅನೇಕ ಪ್ರತಿನಿಧಿಗಳು ಉತ್ತಮ ಕೃತಿಗಳನ್ನು, ಒಳನೋಟಗಳನ್ನು, ನೀಡಿದ್ದಾರೆಂಬುದರಲ್ಲಿ ಸಂಶಯವಿಲ್ಲ. ಆದರೆ ಸೂಕ್ಷ್ಮವಾಗಿ ನೋಡಿದರೆ ಅವರ ನೋಟವೆಲ್ಲಾ ಆಧುನಿಕೋತ್ತರ ಸರ್ಕಾರದ ವಿದೇಶಾಂಗ ವ್ಯವಹಾರಗಳ ಖಾತೆಯ ದಸ್ತಾವೇಜುಗಳಾಗಿಹೋಗಿವೆ. ಇದೆಲ್ಲದರ ಮಥಿತಾರ್ಥವೇನು? ವಸಾಹತೋತ್ತರ ವಿದ್ವಾಂಸರು ಮೊನಚು ಮಾತಿನ ಖಡ್ಗ ಬೀಸುತ್ತಾ ಉದ್ಗರಿಸುತ್ತಾರಲ್ಲ, ಅದು ಅಪ್ರಕೃತ ಎಂಬುದು. ಅವರು ''ವರ್ಗ'' ಎಂಬುದೇನೂ ಇಲ್ಲ, ಆದ್ದರಿಂದ ವರ್ಗ ಹೋರಾಟವೂ ಇಲ್ಲ, ಎಂದು ವಾದಿಸುತ್ತಾರೆ. ಅವರ ಪ್ರಕಾರ ''ಇರುವ ಹೋರಾಟದ ಕ್ಷೇತ್ರಗಳು'' ಸೀಮಿತವಾದವು. ಲಿಂಗ, ಜನಾಂಗೀಯತೆ, ಅನನ್ಯ ವ್ಯಕ್ತಿತ್ವ ಅಥವಾ 'ಐಡೆಂಟಿಟಿ' ಇತ್ಯಾದಿಗಳು ಅಂತಹ ಕ್ಷೇತ್ರಗಳು. ಅವನ್ನು ಕೇಂದ್ರೀಕರಿಸಿ ಹೋರಾಡಿದರೆ ''ವಿಮೋಚನೆ'' ಶತಸ್ಸಿದ್ಧ ಎಂಬುದು ಅವರ ಜಿಜ್ಞಾಸೆಯ ಮೂಲಸ್ರೋತ. ಅಷ್ಟೊಂದು ಸರಳೀಕರಿಸಬಾರದು, ನಿಜ; ಆದರೆ ಬಹುಮಟ್ಟಿಗೆ ಅದೇ ಸಾರ. ಲಿಂಗ, ಜನಾಂಗೀಯತೆ ಮತ್ತು ವ್ಯಕ್ತಿತ್ವ ಅಮುಖ್ಯವೆಂದಲ್ಲ; ಆದರೆ ಅವು ವರ್ಗಕ್ಕೆ ಪರ್ಯಾಯವಲ್ಲ, ಬದಲಾಗಿ, ಅವುಗಳಲ್ಲೂ ವರ್ಗದ ಲೇಪವಿರುತ್ತದೆ. ಬಂಗ್ಲಾದೇಶದಲ್ಲಿ ಉಡುಪು ತಯಾರಿಸುವ ಒಂದು ಕಾರ್ಖಾನೆಯ ಕಟ್ಟಡ ಕುಸಿದು ಸಾವಿರಾರು ಮಂದಿ ಮಡಿದರಲ್ಲವೆ? ಅವರು ಕೆಲಸ ಮಾಡುತ್ತಿದ್ದದ್ದು ಒಂದು ಬಹುರಾಷ್ಟ್ರೀಯ ಕಂಪನಿಯ ಏಜೆಂಟ್ ಮಾದರಿಯ ಘಟಕದಲ್ಲಿ, ಅವರ ಕೂಲಿ ಎಷ್ಟು, ಅವರು ಯಾವ ಜನಾಂಗದವರು, ಅವರ ಪೈಕಿ ಬಹುಮಂದಿ ಮಹಿಳೆಯರಲ್ಲವೆ, ಎಂಬಿತ್ಯಾದಿ ಪ್ರಶ್ನೆಗಳನ್ನು ಹಾಕಿಕೊಳ್ಳೋಣ. ಉತ್ತರಗಳು ಅನಿವಾರ್ಯವಾಗಿ ಅವರ ವರ್ಗದ ಚಹರೆಗಳನ್ನು ಹೊತ್ತಿರುತ್ತವೆ. ಬಂಗ್ಲಾದೇಶದಲ್ಲಿ ಸಾವಿಗೀಡಾದದ್ದು ಯಾವುದೋ ಮಹಿಳೆಯರಲ್ಲ, ಅವರು ಕೂಲಿಕಾರ ಮಹಿಳೆಯರು. ಇಥಿಯೋಪಿಯದ ಕೂಲಿಕಾರ ಮಹಿಳೆಯೂ ಹೀಗೆ ಸಾಯಬಹುದು. ಸಾಯುವುದು ಮಹಿಳೆ ಎಂಬ ಒಂದೇ ಕಾರಣಕ್ಕಲ್ಲ; ಕೂಲಿಕಾರರೂ ಆಗಿದ್ದುದರಿಂದ ಅವರು ಕಟ್ಟಡದಡಿ ಸಿಲುಕಿಕೊಂಡರು. ಹಾಗಿದ್ದರೆ ಅವರ ವರ್ಗವು ಹೇಗೆ ತಾನೆ ಅಪ್ರಸ್ತುತವಾಗುತ್ತದೆ? ಹಿಂದೆ ಇಂಗ್ಲೆಂಡಿನ ಮತ್ತು ವೇಲ್ಸ್‌ನ ಕಲ್ಲಿದ್ದಲು ಗಣಿಗಳಲ್ಲಿ ಬಿಳಿಯ ಪುರುಷ ಕ್ರೈಸ್ತರು ಹೀಗೆ ಅಪಘಾತಗಳಲ್ಲಿ ಮಡಿಯುತ್ತಿದ್ದರು. ದುಡಿಯುತ್ತಿದ್ದುದರಿಂದ ಮಡಿಯುತ್ತಿದ್ದರು. ಗಣಿಯ ಮಾಲೀಕ ಹಾಗೆ ಮಡಿಯುತ್ತಿರಲಿಲ್ಲ, ಅಲ್ಲಿಯೂ ವರ್ಗದ ಅನನ್ಯತ್ವವು ಸ್ಪಷ್ಟವಾಗಿದೆ. ದುಡಿಯುವ ವರ್ಗಕ್ಕೆ ದೇಶದ ಅನನ್ಯತ್ವವಿಲ್ಲ, ದುಡಿಯುವ ಅನನ್ಯತ್ವವಿದೆ. ಬಂಡವಾಳಶಾಹಿಯಡಿ ದುಡಿಯುವ ವರ್ಗ ಅದು. ಈಗ ಅದನ್ನು ಜಾಗತೀಕರಣ ಎನ್ನುತ್ತಾರೆ. ಹೀಗೆ ಸೂತ್ರೀಕರಿಸಿ ನೋಡೋಣ: ಮಹಿಳೆ ದುಡಿಯುವ ವರ್ಗದಲ್ಲಿ ಯಾವಾಗಲೂ ಇದ್ದವಳೇ, ಜನಾಂಗೀಯ ಮತ್ತು ಲಿಂಗ ಅನನ್ಯತ್ವದಿಂದಾಗಿ ಕೀಳೆನಿಸಿಕೊಂಡವಳೇ, ಆರ್ಥಿಕ ಶೋಷಣೆಗೆ ಗುರಿಯಾಗಿದ್ದವಳೇ. ಅವಳ ವಿಮುಕ್ತಿಗಾಗಿ ನಡೆಯುವ ಹೋರಾಟದಲ್ಲಿ ಅತಿನೂತನವಾದದ್ದೇನು? ಮಾರ್ಕ್ಸ್‌ವಾದವು ವರ್ಗ ಹೋರಾಟ ಎಂದು ಕರೆಯಿತು. ಅದನ್ನು ''ಸಾಮಾಜಿಕ ಚಳುವಳಿ'' ಎಂದು ಕರೆದರೆ ಅದರ ಸ್ವರೂಪ ಮತ್ತು ಹೂರಣ ಬದಲಾಗಿಬಿಡುತ್ತವೆಯೆ? ಹೋರಾಡುವ ಮಹಿಳೆ ವರ್ಗ ಹೋರಾಟವೆಂದರೆ ಬೆಚ್ಚಿಬೀಳುವುದಿಲ್ಲ, ಮಾರ್ಕ್ಸ್‌ವಾದವೆಂದರೆ ಚಿಟ್ಟನೆ ಚೀರುವುದಿಲ್ಲ, ಯಾವ ಹೆಸರು ಕೊಟ್ಟರೂ ಅವಳದು ಹೋರಾಟವೇ ಆಗಿರುತ್ತದೆ.

ಆಧುನಿಕೋತ್ತರರು ತಾವೆಂದು ಕರೆದುಕೊಳ್ಳುವವರದ್ದು ಇನ್ನೊಂದು ಆಪಾದನೆ ಇದೆ: ಮಾರ್ಕ್ಸ್‌ವಾದವು ಯೂರೋಪ್ ಕೇಂದ್ರಿತವಾದ್ದು, ಅದನ್ನು ಜಗತ್ತಿನ ಮೇಲೆ ಹೇರಲಾಗುತ್ತಿದೆ, ಎಂದು. ಯೂರೋಪ್‌ಕೇಂದ್ರಿತ ಎಂದರೆ ಬಿಳಿಯರದ್ದು, ಪಾಶ್ಚಿಮಾತ್ಯ ಮೌಲ್ಯಗಳನ್ನು ಹೊಂದಿರುವುದು, ವೈಚಾರಿಕತೆಯ ನೆಲೆಯದು, ಎಂಬ ಇತರ ಅರ್ಥಗಳನ್ನು ಜೋಡಿಸಲಾಗುತ್ತದೆ. ಮಾರ್ಕ್ಸ್ ಯೂರೋಪಿನವನು, ಯೂರೋಪಿನ ವಿಮೋಚನಾ ಹೋರಾಟದ ಪರಂಪರೆಯವನು. ಗುಲಾಮಗಿರಿ ಎಂದರೆ ಗ್ರೀಸ್ ಮತ್ತು ರೋಮ್ ನೆನಪಿಗೆ ಬರುವಂತೆ ಯೂರೋಪ್ ಕೆಲವು ಲಕ್ಷಣಗಳನ್ನು ನೆನಪಿಗೆ ತರುತ್ತದೆ. ಉದಾಹರಣೆಗೆ, ಪ್ರಜಾಪ್ರಭುತ್ವ ವ್ಯವಸ್ಥೆ, ಧಾರ್ಮಿಕ ಸುಧಾರಣೆಗಾಗಿ ಚಳುವಳಿ, ಇತ್ಯಾದಿ. ಆದರೆ ಬೆಲ್ಜಿಯಂನ ಆಳುವ ವರ್ಗವು ಕಾಂಗೋನಲ್ಲಿ ಜನಾಂಗೀಯ ಹತ್ಯೆಯನ್ನು ನಡೆಸಿದ್ದು ಸುಳ್ಳೇ? ಅದೇ ಯೂರೋಪಿನಲ್ಲಿ ಪ್ಯಾರಿಸ್ ಕಮ್ಯೂನ್ ಇತ್ತು (೧೮೭೦ರಲ್ಲಿ), ಮಹಿಳಾ ಮತದಾನದ ಹಕ್ಕಿಗಾಗಿ ಹೋರಾಟವೂ ಇತ್ತು (ಬ್ರಿಟನ್ನಿನಲ್ಲಿ). ಜರ್ಮನಿ ಎಂದರೆ ಮಾರ್ಕ್ಸ್ ಇರುವಂತೆ ಹಿಟ್ಲರನೂ ಇದ್ದಾನೆ, ಬ್ರಿಟನ್ ಎಂದರೆ ಬರ್ಟ್ರಂಡ್ ರಸೆಲ್ ಇರುವಂತೆ ಮಾರ್ಗರೆಟ್ ಥ್ಯಾಚರ್ ಸಹ ಇದ್ದಾಳೆ. ವಿಶ್ವದ ಎಲ್ಲ ದೇಶಗಳಲ್ಲೂ ಬೆಳಕಿಗಾಗಿ ಹೋರಾಟ ನಡೆದಿದೆ; ಕತ್ತಲು ಸಹ ಇದ್ದುದರಿಂದ. ಶೋಷಣೆ ಮತ್ತು ವಿಮೋಚನೆ ಪ್ರತ್ಯೇಕ ಕೇಂದ್ರಗಳಲ್ಲಿಯೇ ಇರುವುದಿಲ್ಲ, ಅವು ಒಟ್ಟೊಟ್ಟಿಗೆ ಎಲ್ಲೆಡೆ ಇರುವಂಥವು. ಇತಿಹಾಸದ ದಾಖಲೆಗಳು ಅದಕ್ಕೆ ಪುರಾವೆ ಒದಗಿಸುತ್ತವೆ. ಋಗ್ವೇದದಲ್ಲಿ ಪಣಿಗಳೆಂಬ ಬುಡಕಟ್ಟಿನವರಿದ್ದಾರೆ, ಅವರನ್ನು ಸದಾ ಕತ್ತಲಲ್ಲೇ ಇಡಬೇಕೆಂದು ಇಂದ್ರನನ್ನು ಕೇಳಿಕೊಳ್ಳುವ ಋಷಿಗಳೂ ಇದ್ದಾರೆ! ಯೂರೋಪು ಮತ್ತು ವಸಾಹತುಗಳು ಹೊಂದಿರುವ ಸಂಬಂಧ ಅಂಥದು. ಎರಡೂ ಕಡೆ ಕತ್ತಲೆ ಮತ್ತು ಬೆಳಕಿನ ಪ್ರತಿನಿಧಿಗಳಿದ್ದಾರೆ. ಮಾರ್ಕ್ಸ್ ಒಬ್ಬ ಯೂರೋಪಿನ ಮಧ್ಯಮವರ್ಗದ ಬುದ್ಧಿಜೀವಿ. ಅದೇ ಲಕ್ಷಣ ಹೊಂದಿದ್ದವರೆಲ್ಲಾ ಸಾಮ್ರಾಜ್ಯಗಳನ್ನು ಉರುಳಿಸಬೇಕೆಂದು ಹೇಳಲಿಲ್ಲವಲ್ಲ! ಅಥವಾ ಕಾರ್ಖಾನೆಗಳ ದುಡಿಮೆಗಾರರ ಪರವಾಗಿಯೂ ನಿಲ್ಲಲಿಲ್ಲವಲ್ಲಾ! ಹೋಗಲಿ, ವಸಾಹತು ದೇಶಗಳ ಬುದ್ಧಿಜೀವಿಗಳೆಲ್ಲಾ ವಸಾಹತುಶಾಹಿಯ ವಿರೋಧಿಗಳಾಗಿ ನಿಂತರೆ? ಅಲ್ಲೆಲ್ಲಾ ವರ್ಗ ವಿಭಜನೆ, ಒಂದು ವರ್ಗದ ಪರವಾಗಿ ನಿಲ್ಲುವುದು, ಒಂದು ವರ್ಗದ ಹಿತವನ್ನು ಸಮಾಜದ ಹಿತವೆಂದು ಭಾವಿಸುವುದು, ಎಲ್ಲಾ ಇದೆ. ಮಾರ್ಕ್ಸ್ ಒಂದು ಸರಳ ಪ್ರಶ್ನೆ ಹಾಕಿದ: ಬೂರ್ಷ್ವಾ ಆದರ್ಶಗಳಾದ ಸ್ವಾತಂತ್ರ್ಯ, ಪ್ರಗತಿ, ವೈಚಾರಿಕತೆ, ಇವನ್ನೆಲ್ಲಾ ಇಡೀ ಸಮುದಾಯದ ಸಂದರ್ಭದಲ್ಲಿ ಆಚರಣೆಗೆ ತರಬೇಕೆಂದರೆ ಹೌಹಾರುತ್ತೀರಿ ಏಕೆ? ಅಂದರೆ, ಅವು ಯಾವುದೋ ಒಂದು ವರ್ಗದ ಸೊತ್ತಾಗಕೂಡದು ಎಂಬುದು ಅವನ ಆಶಯ.

ರಾಜಕೀಯ ವಿಮೋಚನೆಗಾಗಿ ಹೋರಾಟ ನಡೆಸುವವರು ಅದಕ್ಕೆ ಸಹಾಯಹಸ್ತ ನೀಡುವವರ ವಂಶಾವಳಿಯನ್ನೆಲ್ಲಾ ಕೆದಕಿ ನೋಡುತ್ತಾರೆಯೆ? ಮಾರ್ಕ್ಸ್ ಜರ್ಮನಿಯ ಒಬ್ಬ ಬೂರ್ಷ್ವಾ ಎಂದು ಕ್ಯೂಬದ ಫಿಡೆಲ್ ಕ್ಯಾಸ್ಟ್ರೋ ಅವನನ್ನು ಸಮುದ್ರಕ್ಕೆ ಒಗೆಯಲಿಲ್ಲ, ಅಲ್ಲವೆ? ಅಥವಾ, ಟ್ರಾಟ್ಸ್ಕಿಯು ರಷ್ಯಾದ ಒಬ್ಬ ಯಹೂದಿಯೆಂದು ಆಫ್ರಿಕದ ಒಬ್ಬ ಕರಿಯ ಯುವಕ ಅವನನ್ನು ತಳ್ಳಿಹಾಕುತ್ತಾನೆಯೆ? ಹಿಟ್ಲರನನ್ನು ಆರಾಧಿಸುವ ''ಅಚ್ಚ ಭಾರತೀಯ ಸಂಸ್ಕೃತಿಯ ಆರ್ಯರು'' ಭಾರತದಲ್ಲಿ ಇದ್ದಾರಲ್ಲವೆ? ದುಡಿಮೆಗಾರನ ತಲೆಯೊಳಗೆ ಇಂತಹ ವ್ಯತ್ಯಾಸಗಳ ಕಲ್ಪನೆ ಹೊಗುವುದಿಲ್ಲ, ಆ ಕಲ್ಪನೆಯೆಂಬ ಹುಳು ಆಯ್ದುಕೊಳ್ಳುವುದು ಮಧ್ಯಮ ವರ್ಗದ ಉದಾರವಾದಿ ಬುದ್ಧಿಜೀವಿಗಳ ತಲೆಗಳನ್ನು ಮಾತ್ರ! ಆದ್ದರಿಂದ ವಸಾಹತುಶಾಹಿ ವಿರುದ್ಧದ ಹೋರಾಟಗಾರರಿಗೆ ವಿಶ್ವದ ಯಾವ ದೇಶದಲ್ಲೂ ಮಾರ್ಕ್ಸ್‌ನ ಬಣ್ಣ, ಜನಿವಾರ, ಕಂಠ ಕೌಪೀನ, ಇತ್ಯಾದಿಗಳು ಪ್ರಸ್ತುತವಾಗಲಿಲ್ಲ. ''ಮೂರನೆಯ ವಿಶ್ವ'' ಮಾರ್ಕ್ಸ್‌ನನ್ನು ಆದರದಿಂದ ಬರಮಾಡಿಕೊಂಡಿದ್ದು

೨೦೦೭ರಲ್ಲಿ
೨೦-೨೦ ಮ್ಯಾಚ್‌ಫಿಕ್ಸ್
ಮಾಡಿಕೊಂಡ
ಜೆ.ಡಿ.ಎಸ್. – ಬಿ.ಜೆ.ಪಿ.ಗೆ
೨೦೧೩ರಲ್ಲಿ
೪೦-೪೦ರ ಫಲಿತಾಂಶ

ಅವನ ವರ್ಗ ಸಿದ್ಧಾಂತದ ಕಾರಣಕ್ಕಾಗಿಯೇ ಎಂಬುದು ನಿಚ್ಚಳವಾಗಿದೆ.

ಮಾರ್ಕ್ಸ್‌ನ ಮೇಲೆ ಮತ್ತೊಂದು ಆಪಾದನೆಯೂ ಇದೆ. ಮಾನವ ಪ್ರಗತಿಗೆ ಎಲ್ಲೆಯಿಲ್ಲವೆಂದವನು ಅವನು, ಪ್ರಕೃತಿಯ ಮೇಲೆ ಮಾನವ ಸಾರ್ವಭೌಮತ್ವ ಸಾಧಿಸಿ ಕೊಳ್ಳಬಲ್ಲ ಎಂದವನು ಅವನು, ಎಂಬುದು ಆ ಆಪಾದನೆ. ಅಂತಹ ಸುಳುವು ಅವನ ಬರಹಗಳಲ್ಲಿ ಇಲ್ಲವೇ ಇಲ್ಲವೆಂದು ಹೇಳಲಾಗದು. ೧೯ನೆಯ ಶತಮಾನದಲ್ಲಿ ಅಂತಹ ಸುಳುವು ಇದ್ದದ್ದೇ. ಆ ಕಾಲದಲ್ಲಿ ಪ್ಲಾಸ್ಟಿಕ್ ಬ್ಯಾಗುಗಳ ಹಾವಳಿ ಯಾಗಲಿ, ಪರಮಾಣು ಅಸ್ತ್ರಗಳಾಗಲಿ ಇರಲಿಲ್ಲವಲ್ಲ. ನದಿಗೆ ಕಟ್ಟೆ ಕಟ್ಟುವುದು, ವಿಷಮಶೀತಜ್ವರಕ್ಕೆ ಔಷಧಿ ಅರಸುವುದು, ನಗರಗಳನ್ನು ನಿರ್ಮಿಸುವುದು, ಇವೆಲ್ಲಾ ಸಾಮಾನ್ಯವಾಗಿದ್ದ ಕಾಲ ಅದು. ಅವೆಲ್ಲಾ ಪ್ರಕೃತಿಯನ್ನು ಹತೋಟಿಗೆ ತಂದುಕೊಳ್ಳುವ ಪ್ರಕ್ರಿಯೆಗಳೇ ಆಗಿದ್ದುವು, ಈಗಲೂ ಆಗಿವೆ. ಹತೋಟಿಯ ಹೆಸರಿನಲ್ಲಿ ಹಾವಳಿ ನಡೆಯುವುದು ವರ್ತಮಾನದ ಲಕ್ಷಣ. ಋಗ್ವೇದದ ಕವಿಗೆ ಪರಿಸರ ಪ್ರಜ್ಞೆಯು ಒಂದು ಸಾಂದ್ರ ಭಾವನೆಯಲ್ಲ; ಇಂದಿನ ಕವಿಗೆ ಆ ಸಾಂದ್ರತೆ ಇಲ್ಲದಿದ್ದರೆ ಅದು ಅವಲಕ್ಷಣ. ಕಾಡು ಕಡಿದು ನಾಡು ಮಾಡುತ್ತಿದ್ದ ಋಗ್ವೇದದ ಕವಿಯ ಜಾಗದಲ್ಲಿ, ಕಾಡೇ ಇಲ್ಲದ ನಾಡು ಮಾಡುವ ವೇದಾಂತ ಕಂಪನಿ, ಪಾಸ್ಕೊ, ಜನಾರ್ದನ ರೆಡ್ಡಿ, ಎಲ್ಲಾ ಬಂದು ಭಲ್ಲೆ ಹಿಡಿದು ನಿಂತಿದ್ದಾರೆ. ಪ್ರಕೃತಿಯೆದುರು ನಮ್ರವಾಗಿ ಗೌರವದಿಂದ ನಿಲ್ಲುವ ಭೀತ ಬಾಲಕ ಕರಗಿಹೋಗಿದ್ದಾನೆ, ಅವನ ಜಾಗದಲ್ಲಿ ದೈತ್ಯಾಕಾರದ ವ್ಯಕ್ತಿ ನಾಳೆಯ ಯೋಚನೆ ಇಲ್ಲದೆ ಕೊಡಲಿ ಹಿಡಿದು ನಿಂತಿದ್ದಾನೆ. ಅಂದಿನ ಮಾರ್ಕ್ಸ್‌ವಾದ ಮತ್ತು ಇಂದಿನ ಮಾರ್ಕ್ಸ್‌ವಾದ ಎಂದೇನಾದರೂ ಕರೆಯಬಹುದಾದರೆ ಪ್ರಕೃತಿ ಮತ್ತು ಮಾನವನ ನಡುವಣ ಸಂಬಂಧದ ಸತ್ಯ ಅವುಗಳ ಮೂಲ ಪ್ರೇರಣೆಯಾಗುತ್ತದೆ. ''ಸರಕುಗಳನ್ನು ಪೂಜಿಸುವ ಉನ್ಮತ್ತತೆ'' ಎಂದು ಬಂಡವಾಳಶಾಹಿಯನ್ನು ಮಾರ್ಕ್ಸ್ ಜರಿದಿದ್ದ. ಪ್ರಕೃತಿಯ ಮೇಲಿನ ಹಲ್ಲೆಯು ಆ ಉನ್ಮತ್ತತೆಯ ಪರಿಣಾಮ. ಪರಿಸರ ಪ್ರಜ್ಞೆಯು ಮಾರ್ಕ್ಸ್ ಮತ್ತು ಏಂಗೆಲ್ಸ್‌ರಿಗೆ ಸಹಜವಾಗಿತ್ತು. ಪ್ರಗತಿಯೆಂದರೆ ಪ್ರಕೃತಿಯ ಧ್ವಂಸವೆಂದು ಅವರು ತಿಳಿಯಲಿಲ್ಲ; ಧ್ವಂಸವು ನಿರಂತರವಾಗಿ ನಡೆದರೂ ಪ್ರಕೃತಿಗೆ ಬಾಧೆಯಿಲ್ಲ ಎಂಬ ಮಂಕುತನ ಅವರನ್ನು ಆವರಿಸಿರಲಿಲ್ಲ. ಸಾಮಾಜಿಕ ಸಂಬಂಧಗಳ ವಿಶ್ಲೇಷಣೆ ಮಾಡುವಾಗ ಮಾರ್ಕ್ಸ್ ಭೌಗೋಳಿಕ ಮತ್ತು ವಾಯುಗುಣದ ಅಂಶಗಳಿಗೆ ಒತ್ತುಕೊಡುತ್ತಾನೆಂಬುದು ಅವನ 'ದ ಜರ್ಮನ್ ಐಡಿಯಾಲಜಿ'ಯಿಂದ ತಿಳಿಯುತ್ತದೆ. ಪ್ರಕೃತಿಯಿಂದ ಸರ್ವಸ್ವವನ್ನೂ ಹಿರಿದುಕೊಳ್ಳುತ್ತಿರುವುದೇ ಪ್ರಗತಿ ಎಂಬ ಮೂರ್ಖತನವನ್ನು ಮಾರ್ಕ್ಸ್‌ವಾದವು ಪೋಷಿಸುವುದಿಲ್ಲ. ಮಾನವ ಮತ್ತು ಪ್ರಕೃತಿಯ ನಡುವೆ 'ಕೊಡುವುದು – ತೆಗೆದುಕೊಳ್ಳುವುದು' ಎಂಬ ಭಾವ ಇರಬೇಕೆಂದು ಮಾರ್ಕ್ಸ್ ತನ್ನ ''ಬಂಡವಾಳ'' ಎಂಬ ಗ್ರಂಥದಲ್ಲಿ ವಿವರಿಸಿದ್ದಾನೆ. ಸಾಮುದಾಯಿಕ ಹತೋಟಿಯಲ್ಲಿ ಇದು ಅಂತರ್ಗತವಾಗ ಬೇಕು, ಆಗುತ್ತದೆ, ಎಂಬುದು ಅವನ ವಾದ. ಸ್ವರ್ಗದಿಂದ ಧರೆಗೆ ಬೆಂಕಿ ತಂದವನು ಮಾತರಿಶ್ವನ್; ಗ್ರೀಸಿನ ಪುರಾಣ ದಲ್ಲಿ ಅದು ಪ್ರೊಮಿಥಿಯಸ್ ಮಾಡಿದ ಕೆಲಸ. ಮಾರ್ಕ್ಸ್‌ಗೆ ಅವನ ಪ್ರತಿಮೆ ಬಹಳ ಆಪ್ಯಾಯಮಾನವಾದ್ದು. ಬೆಂಕಿಯಿಂದ ಎಲ್ಲವನ್ನೂ ಸುಡಬಹುದು: ತಂತ್ರಜ್ಞಾನವನ್ನು ಎಲ್ಲೆಯಿಲ್ಲದೆ

## ಲಂಚ

ರಕ್ತ ಹೀರುವ ಸೊಳ್ಳೆ
ಬ್ಲಡ್‌ಗ್ರೂಪ್ ಕೇಳುವದಿಲ್ಲ;
ಸರಕಾರಿ ಅಧಿಕಾರಿಗಳೂ ಅಷ್ಟೇ !

ಶಿ. ಕಾ. ಬಡಿಗೇರ

ಬೆಳೆಸಬಹುದು, ಎಂಬರ್ಥದಲ್ಲಿ ಅಲ್ಲ; ಬೆಂಕಿಯು ಕ್ರಾಂತಿಯ ಕಿಡಿ, ಅದು ಸೃಷ್ಟ್ಯಾತ್ಮಕ ಧಾತು ಎಂಬರ್ಥದಲ್ಲಿ. ಕೆಲವು ಪರಿಸರವಾದಿಗಳು ಹುರುಳಿಲ್ಲದ ಆಪಾದನೆಯನ್ನು ಮಾರ್ಕ್ಸ್‌ನ ಮೇಲೆ ಹೊರಿಸುತ್ತಾರೆ. ಅಂತಹ ಆಪಾದನೆ ಗಳನ್ನು ಹೊರಲು ಸಾಕಾಗುವಷ್ಟು ವಿಶಾಲವಾದ ತಲೆಯನ್ನು ಮಾರ್ಕ್ಸ್ ಬೆಳೆಸಿಕೊಂಡಿದ್ದ. ಏಂಗೆಲ್ಸ್ ತನ್ನ ''ಡಯಲೆಕ್ಟಿಕ್ಸ್ ಆಫ್ ನೇಚರ್''ನಲ್ಲಿ ಬರೆದಿರುವುದನ್ನು ಗಮನಿಸಿ : ''ಪ್ರಕೃತಿಯನ್ನು ಗೆದ್ದಿರುವವರಂತೆ ವರ್ತಿಸುವುದು ಮಾನವರ ಲಕ್ಷಣವಲ್ಲ, ಪ್ರಕೃತಿಯು ಹಾಗೆ ಜಯಕ್ಕೆ ಶರಣಾಗಲು ಮಾನವ ಸಾರ್ವಭೌಮನಲ್ಲ, ಪ್ರಕೃತಿಯು ಸಾಮಂತ ರಾಜ್ಯವಲ್ಲ. ನಾವು ಪ್ರಕೃತಿಯ ಹೊರಗಿನವರಲ್ಲ. ಮಾಂಸ, ರಕ್ತ, ಮಿದುಳು, ಎಲ್ಲಾ ನಮಗಿದೆ; ಆದರೆ ನಾವು ಪ್ರಕೃತಿಯ ಒಂದು ಭಾಗ ಅಷ್ಟೆ. ನಾವು ಬದುಕಿರುವುದು ಪ್ರಕೃತಿಯ ಮಡಿಲಲ್ಲಿ. ಪ್ರಕೃತಿ ನಿಯಮಗಳನ್ನು ತಿಳಿದು ಅವನ್ನು ಅನ್ವಯಿಸಿಕೊಂಡು ನಡೆಯುವುದಷ್ಟೇ ನಮ್ಮ ಯಜಮಾನಿಕೆ.'' ಅದನ್ನು ಪುಷ್ಟೀಕರಿಸುವಂತೆ ಮಾರ್ಕ್ಸ್ ಹೇಳುತ್ತಾನೆ, ''ಪ್ರಕೃತಿಯು ಮಾನವ ಜನಾಂಗದ ಶರೀರ'' ಎಂದು. ಶರೀರವನ್ನು ಕತ್ತರಿಸಿದರೆ ಮಾನವ ಜನಾಂಗದ ಉಳಿವು ಅಸಾಧ್ಯ. ಉತ್ಪಾದನಾ ಸಾಧನಗಳನ್ನು ಮಾರ್ಕ್ಸ್, ಶರೀರದ ಅಂಗಗಳ ವಿಸ್ತರಣೆ ಎನ್ನುತ್ತಾನೆ. ನಾಗರಿಕತೆಯ ಸಕಲ ಭಾಗಗಳೂ ಶರೀರದ ಶಕ್ತಿಯ ವಿಸ್ತರಣೆಯೇ ಆಗಿದೆ. ಅದು ಸಂಗೀತ ಕಚೇರಿ ಇರಬಹುದು, ಮಂಗಳ ಗ್ರಹಕ್ಕೆ ರವಾನಿಸುವ ಯಂತ್ರವಿರಬಹುದು. ಶರೀರ ಮತ್ತು ಪ್ರಪಂಚ ಸಮತೋಲನದಲ್ಲಿರಬೇಕಾದ್ದು ಇದರಿಂದಾಗಿ ಅವಶ್ಯಕ. ಮಾನವನ ಇಂಗಿತವನ್ನು ಭಾಷೆಯು ಅಭಿವ್ಯಕ್ತಿಸುವಂತೆ ನಮ್ಮ ಪರಿಸರವೂ ಮಾಡುವಂತಿರಬೇಕು. ಹಾಗಾಗದಿದ್ದಾಗ ಅದು ಪರಕೀಯವಾಗುತ್ತದೆ. ಅದನ್ನು ಮಾರ್ಕ್ಸ್ 'ಏಲಿನಿಯೇಶನ್' ಎನ್ನುತ್ತಾನೆ. ರೂಕ್ಷ ಭೌತಿಕ ವಿಶ್ವದಲ್ಲಿ ಆಗ ನಮ್ಮ ಪ್ರತಿಫಲನವೇ ಇರುವುದಿಲ್ಲ. ಅಂದರೆ, ನಮ್ಮ ಅಂತಸ್ಸತ್ವದೊಡನೆ ನಮ್ಮ ಸಂಪರ್ಕ ಕಡಿದುಹೋದಂತೆ ಆಗುತ್ತದೆ.

ಪ್ರಕೃತಿಯೊಡನೆ ಕೊಡು-ಕೊಳೆಗಳ ಅಭಾವದಲ್ಲಿ ಮಾನವನ ಸಂಸರ್ಗವು ಅರ್ಥರಹಿತವಾಗಿಬಿಡುತ್ತದೆ. ಬಂಡವಾಳಶಾಹಿಯು ಉಂಟುಮಾಡುವ ಕೇಡುಗಳಲ್ಲಿ ಅದೂ ಒಂದು. ಏಕೆಂದರೆ, ಅದು ಪ್ರಕೃತಿಯಿಂದ ಎಷ್ಟಾದರೂ ಹಿರಿಯುತ್ತಿರಬಹುದು, ಅದಕ್ಕೆ ಯಾವ ರೂಪ ಬೇಕಾದರೂ ಕೊಡಬಹುದು, ಎಂದು ಬಗೆಯುತ್ತದೆ. ಇಂದಿನ ಪರಿಸರವು ಕಲುಷಿತವಾಗುತ್ತಿರುವುದು ಇಂತಹ ತಿಳಿಗೇಡಿತನದಿಂದ. ಅದರಿಂದ ಮಾನವನ ಸೌಂದರ್ಯ ಪ್ರಜ್ಞೆಯೂ ಊನ ವಾಗುತ್ತದೆ. ಪ್ರಕೃತಿಯನ್ನು ಸ್ವಾಯತ್ತ ಘಟಕವನ್ನಾಗಿ ಪರಿಗಣಿಸದೆ ಮಾನವನ ಉಪಯೋಗಕ್ಕಿರುವ ಸಾಧನವಷ್ಟೇ ಎಂಬ ಕುತ್ಸಿತ ದೃಷ್ಟಿ ಇದರ ಪರಿಣಾಮ. ಪ್ರಕೃತಿ, ದುಡಿಮೆ, ದುಃಖದುಮ್ಮಾನ, ಉತ್ಪಾದಕ ಶಕ್ತಿ ಇರುವ ಶರೀರ ಮತ್ತು ಅದರ ಅಗತ್ಯಗಳು – ಇವೆಲ್ಲಾ ಮಾನವ ಚರಿತ್ರೆಯಲ್ಲಿ ಸದಾ ಅಡಿಪಾಯದಂತಿರುತ್ತವೆ. ಮಾನವನು ತನ್ನ ಅಗತ್ಯಗಳ ಪೂರೈಕೆಗೆ ಹಲವು ಮಾರ್ಗಗಳನ್ನು ಕಂಡುಕೊಂಡಿದ್ದಾನೆ. ಅದು ಸಹಜ. ಆದರೆ ಅದು ಸಾಂಸ್ಕೃತಿಕವಾಗಿ, ಚಾರಿತ್ರಿಕವಾಗಿ, ಒಂದು ಚಿತ್ರಣ ನೀಡುತ್ತದೆ. ಪ್ರಕೃತಿ ಮತ್ತು ಮಾನವ, ಎರಡು ಘಟಕಗಳೂ ಸಾರ್ವಭೌಮತ್ವ ಉಳಿಸಿಕೊಳ್ಳಬಹುದು, ಇಲ್ಲವೆ ಘರ್ಷಣೆಯಲ್ಲಿ ತೊಡಗಬಹುದು. ಹೀಗಾಗಿ ಚರಿತ್ರೆಯಲ್ಲಿ ಮೂಡಿಬರುವ ಸಾಮಾಜಿಕ ಸಂರಚನೆಗಳು ಶಾಶ್ವತವಲ್ಲ, ಅವು ಬದಲಾವಣೆಗೆ ಗುರಿಯಾಗುತ್ತವೆ. ದುಡಿಮೆಯ ಮಹತ್ತರ ಪಾತ್ರವಿರುವುದು ಇಂತಹ ಬದಲಾವಣೆ ಉಂಟುಮಾಡುವುದರಲ್ಲಿ.

ಬಂಡವಾಳಶಾಹಿ ಮತ್ತು ಸಮಾಜವಾದಿ ವ್ಯವಸ್ಥೆಗಳ ನಡುವಣ ವ್ಯತ್ಯಾಸ ಇದು: ಬಂಡವಾಳಶಾಹಿಯು ಉತ್ಪಾದನೆಗೆ ಮಿತಿಯಿಲ್ಲ ಎಂಬ ಸೂತ್ರ ಹಿಡಿದು ಕಾರ್ಯ ಪ್ರವೃತ್ತವಾಗುತ್ತದೆ ಮತ್ತು ಸಮಾಜವಾದವು ಅದಕ್ಕೊಂದು ಎಲ್ಲೆಯಿದೆ ಎಂಬ ಪ್ರಜ್ಞೆಯಿಂದ ಪ್ರೇರಣೆ ಪಡೆಯುತ್ತದೆ. ಆ ಪ್ರೇರಣೆಗೆ ನೈತಿಕ ಮತ್ತು ಸೌಂದರ್ಯ ಪ್ರಜ್ಞೆ ಎಂಬ ಹೆಸರಿದೆ. ಅಂತಹ ಪ್ರೇರಣೆ ಇರುವಾಗಷ್ಟೇ ಮನುಕುಲದ ಪೂರ್ಣ ಬೆಳವಣಿಗೆಯ ಸೂಕ್ತಸ್ವರೂಪವನ್ನು ಹೊಂದುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಮಾರ್ಕ್ಸ್‌ವಾದವು ಮಾನವ ಸಂಸ್ಕೃತಿಯ ಸರ್ವಾಂಗೀಣ ಕಾಯ. ಜೀವನದ ಎಲ್ಲ ವಿಭಾಗ ಗಳಿಗೂ ಮಾರ್ಕ್ಸ್‌ವಾದವು ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿದೆ. ಮಾರ್ಕ್ಸ್‌ವಾದವೆಂದು ನಿರ್ದಿಷ್ಟವಾಗಿ ಹೇಳದಿದ್ದಾಗಲೂ ಮಾನವನ ಇತಿಹಾಸ, ಸಂಸ್ಕೃತಿ, ಆಕಾಂಕ್ಷೆ, ಸಾಧನೋಪಾಯ, ಸಮಾನತೆ, ಮುಂತಾದವನ್ನು ಚರ್ಚಿಸು ವಾಗ ಅಗತ್ಯವಾಗಿ ಮಾರ್ಕ್ಸ್‌ವಾದಿ ದೃಷ್ಟಿಕೋನ ಮತ್ತು ಸಿದ್ಧಾಂತದ ಛಾಯೆ ಅನಿವಾರ್ಯವಾಗಿ ತೋರಿಬರುತ್ತಿರುತ್ತದೆ.

ಇಂದು ಮಾನವನ ಉಳಿವಿಗೆ ಎರಡು ಪ್ರಬಲ ಆತಂಕ ಗಳಿವೆ : ಒಂದು ಮಿಲಿಟರಿ, ಇನ್ನೊಂದು ಪರಿಸರ. ಕ್ರಮೇಣ ಅವೆರಡೂ ಸನಿಹಕ್ಕೆ ಬಂದು ಕೂಡಿಕೊಳ್ಳುತ್ತಿವೆ. ಹೇರಳವಾಗಿ ಲಭ್ಯವಿಲ್ಲದ ಸಂಪನ್ಮೂಲಗಳನ್ನು ದಕ್ಕಿಸಿಕೊಳ್ಳಲು ಸಂಘರ್ಷ ಗಳು ಯುದ್ಧದ ರೂಪ ಪಡೆಯುವ ಸಾಧ್ಯತೆ ಇರುತ್ತದೆ. ಕಳೆದ ಒಂದು ಶತಮಾನದಲ್ಲಿ ಶಾಂತಿಗಾಗಿ ತಹತಹಿಸಿರು ವವರ ಪೈಕಿ ಕಮ್ಯುನಿಸ್ಟರು ಅಗ್ರಪಂಕ್ತಿಯಲ್ಲಿ ನಿಂತಿದ್ದಾರೆ. ಅದಕ್ಕೆ ಭಿನ್ನವಾಗಿ ಬಂಡವಾಳಶಾಹಿಯು ಯುದ್ಧವನ್ನು ಹತ್ತಿಕ್ಕುವ ನೆಲೆಯಲ್ಲಿ ನಿಂತಿದೆ. ಹೀಗಿರುವಾಗ ಮನುಕುಲವು ಮಾರ್ಕ್ಸ್‌ವಾದದ ಬಗ್ಗೆ ಅಸಡ್ಡೆ ತೋರುವುದು ಸ್ವ-ನಾಶದತ್ತ ನಡೆದಂತಾಗುತ್ತದೆಯೆಂಬ ಪರಿವೆ ನಮಗಿರಬೇಕು. ಇದು ಪರಿಸರದ ಬಗೆಗೂ ಹೇಳಬಹುದಾದ ಮಾತು. ಅಲ್ಲಿಯೂ ಬಂಡವಾಳಶಾಹಿಯು ಪರಿಸರದ ನಾಶಕ್ಕೆ ಹಾತೊರೆಯುತ್ತದೆ, ಮಾರ್ಕ್ಸ್‌ವಾದವು ಅದರ ರಕ್ಷಣೆಗೆ ಪಣ ತೊಟ್ಟಿದೆ. ಇಂತಹ ದುರ್ಭರ ಸನ್ನಿವೇಶದಲ್ಲಿ ಸಮಾಜವಾದ ಬೇಕೋ, ಬರ್ಬರತೆಗೆ ಹಿನ್ನಡೆ ಇಕ್ಕಬೇಕೋ ಎಂಬುದು ಮನುಕುಲಕ್ಕೆ ಬಿಟ್ಟಿರುವ ತೀರ್ಮಾನ.

ಡಾ|| ಜಿ. ರಾಮಕೃಷ್ಣ
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧
೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ ಬೆಂಗಳೂರು - ೮೫

# ರಾಮ ಮತ್ತು ರೇಪ್

'ರಾಮಾ ರೇಪ್ ಮಾಡು'
ಎಂದು ಯಾರೂ ರಾಮನಿಗೆ ಹೇಳಿರಲಿಲ್ಲ
ಆದರೂ ರಾಮ ರೇಪ್ ಮಾಡಿದ್ದಾನೆ
ಶಾಲೆಗೆ ಹೋಗುವ, ಹೋಗದಿದ್ದವ, ಎಂಬಿಎ ಪಾಸಾದವ, ಫೇಲಾದವ
ಫೇಸ್‌ಬುಕ್ ಮೇಲಿರುವ, ಚಾಟಿಂಗ್ ಮಾಡುವ
ಹೀಗೆ ಅನೇಕ ರಾಮರಲ್ಲಿ ಈ ರಾಮನೂ ಒಬ್ಬ
ಈ ಎಲ್ಲರೂ ರೇಪ್ ಮಾಡಬಲ್ಲವರಾಗಿದ್ದಾರೆ
ರಾಮ ಉಳಿದ ವೇಳೆಯಲ್ಲಿ ಸಂಭಾವಿತನಿದ್ದರೂ ಇರಬಹುದು
ಆದರೆ ಆತ ಕಮಲಳ ಮೇಲೆ ಒಂದು ಕಣ್ಣಿಟ್ಟಿದ್ದಾನೆ
ಅವಕಾಶ ಸಿಕ್ಕಾಗ ಅವಳ ಮೇಲೆ ದಾಳಿ ಮಾಡಿ
ನಂತರ ರೇಪ್ ಮಾಡುತ್ತಾನೆ
ಅನಂತರ ಅವಳನ್ನು ಅಮಾನುಷವಾಗಿ ಕೊಂದೂ ಹಾಕುತ್ತಾನೆ
ಅವಳ ದೇಹವನ್ನು ಸಾಧ್ಯವಿದ್ದರೆ ಸುಟ್ಟುಹಾಕುತ್ತಾನೆ
ಇಲ್ಲದಿದ್ದರೆ ನೀರಿಲ್ಲದ ಬಾವಿಗೆ ಎಸೆಯುತ್ತಾನೆ
ಕೆಲವೊಮ್ಮೆ ದೇಹವನ್ನು ತಂದೂರಿ ಭಟ್ಟಿಗೆ ಹಾಕಿ ಬೂದಿ ಮಾಡುತ್ತಾನೆ.
ರಾಮ ಕೆಟ್ಟವನಿದ್ದಾನೆ; ಭಯಾನಕ ಕೆಟ್ಟವ
ಆದರೆ ಅವನೊಬ್ಬನೇ ಕೆಟ್ಟವನಾಗಿಲ್ಲ; ಉಳಿದ ಅನೇಕ ರಾಮರೂ ಕೆಟ್ಟಿದ್ದಾರೆ
ಇವನಂತೆಯೇ ಅವರೂ ಅವಕಾಶ ಸಿಕ್ಕಾಗ
ಯಾರು ಬೇಕಾದರವರನ್ನು ರೇಪ್ ಮಾಡಲು ಹಿಂದೆ ಮುಂದೆ ನೋಡುವದಿಲ್ಲ
ಈ ಎಲ್ಲ ರಾಮರುಗಳು ಹೀಗೇಕೆ ಮಾಡುತ್ತಾರೆಂದು ಅವರ
ಕೇಸ್‌ಗಳನ್ನು ಅಭ್ಯಸಿಸಬೇಕೆಂದರೆ
ಅದು ಸಾಧ್ಯವಿಲ್ಲದ ಮಾತು; ಒಬ್ಬನೇ ಒಬ್ಬ
ರಾಮನ ಕೇಸನ್ನು ಸ್ಯಾಂಪಲ್ಲಿಗಾಗಿ ಅಭ್ಯಸಿಸಬೇಕೆಂದರೆ



ಇವನಿಗೆ ಉಳಿದೆಲ್ಲ ರಾಮರಂತೆಯೇ
ಹದಿನೈದು ಹದಿನಾರನೆಯ ವರ್ಷಕ್ಕೆ ಇರೆಕ್ಶನ್ ಬಂದಿತು
ಕಮಲಳು ಇವನಿಗಿಂತ ಮುಂಚೆಯೇ ದೊಡ್ಡವಳಾಗಿದ್ದಳು
ಇರೆಕ್ಶನ್ ಬಂದನಂತರ ಏನು ಮಾಡಬೇಕೆಂಬುದು
ಅವನ ಮಮ್ಮಿ ಡ್ಯಾಡಿ ಅವನಿಗೆ
ಏನನ್ನೂ ಹೇಳಿರಲಿಲ್ಲ
ಯಾಕೆಂದರೆ ಅವರಿಗೂ ಅವರ ಅಪ್ಪ ಅಮ್ಮ
ಏನನ್ನೂ ಹೇಳಿರಲಿಲ್ಲ.
ನಾಲ್ವತ್ತು ವರ್ಷಗಳ ಹಿಂದೆ ಹೆಲೆನ್ ಡಾನ್ಸ್ ಮಾಡುವಾಗ
ಆಕೆಯ ಕುಂಡಿಯ ಕುಲಕಾಟ ಕಂಡು
ರಾಮನ ಡ್ಯಾಡಿ ಹಸ್ತಮೈಥುನ ಮಾಡಿಕೊಂಡಿದ್ದ
ಅದಕ್ಕಾಗಿ ತನ್ನ ಅಪ್ಪನಿಂದ ಬಾಸುಂಡೆ ಏಳುವಂತೆ ಹೊಡೆತ ತಿಂದಿದ್ದ
ಈಗಂತೂ ಡಾನ್ಸಿನಲ್ಲಿ ತುಂಬ ಪ್ರಗತಿಯಾಗಿದೆ
ರಾಮನೆದುರು ಈಗ ಅನೇಕರು ಡಾನ್ಸ್ ಮಾಡುತ್ತಾರೆ.
ಮಲ್ಲಿಕಾ, ಮುನ್ನಿ, ಶೀಲಾ ಮುಂತಾದವರು
ಕ್ಯಾಮರಾದೆದುರು ಬರಿಬೆತ್ತಲಾಗುತ್ತಾರೆ, ಕ್ಯಾಮೆರಾಗೆ
ರಾಮ ಮತ್ತು ಆತನ ಗೆಳೆಯರಿಗೆ ಇದು ಲೈಕ್ ಆಗುತ್ತದೆಂದು ಗೊತ್ತಿದೆ
ಡಾನ್ಸ್ ಮಾಡುವವರಿಗೆ ಮತ್ತು ಕ್ಯಾಮೆರಾದ ಹಿಂದೆ ಇರುವವರಿಗೆ
ಬೇಜಾನ್ ಹಣ ಸಿಗುತ್ತಿರುತ್ತದೆ; ಇಂತಹ
ಸಾವಿರಾರು ರಾಮರನ್ನು ತಯಾರಿಸುವುದು ಕ್ಯಾಮೆರಾಗೆ ಗೊತ್ತಿದೆ
ಈ ಹಿಂದೆ ರಾಮನೂ ಹಸ್ತಮೈಥುನ ಮಾಡಿದ್ದ
ಅದನ್ನು ನೋಡಿದ ಅವನ ಮಮ್ಮಿ ಡ್ಯಾಡಿಗೆ ಚಾಡಿ ಚುಚ್ಚಿದ್ದಳು
ಡ್ಯಾಡಿ ತನ್ನ ಅಪ್ಪನಿಂದ ಹೊಡೆತ ತಿಂದಿದ್ದಕ್ಕೆ
ರಾಮನನ್ನು ಆತ ಬಾಸುಂಡೆ ಏಳುವಂತೆ ಹೊಡೆದ
ಆದರೆ ಬಾಸುಂಡೆಗಳಿಗೆ ಇರೆಕ್ಶನ್ ನಿಲ್ಲಿಸುವುದಾಗುವುದಿಲ್ಲ
ಹೀಗಾಗಿ ರಾಮನು ಮತ್ತೆ ಮತ್ತೆ ಡಾನ್ಸ್ ನೋಡುತ್ತಾನೆ.
ಎಫ್ ಚಾನೆಲ್ ಸೆಕ್ಸ್ ಚಾನೆಲ್‌ಗಳ ಗುಂಡಿ ಒತ್ತುತ್ತಾನೆ
ಬೆತ್ತಲು ಹುಡುಗಿಯರ ಫೋಟೋ ಪುಸ್ತಕದಲ್ಲಿ ಮುಚ್ಚಿಟ್ಟು
ನೋಡುತ್ತ ನೋಡುತ್ತ ತನ್ನಷ್ಟಕ್ಕೆ ತಾನೇ ಸ್ಖಲಿಸುತ್ತಾನೆ.
ರಾಮ ಒಬ್ಬ ಗಂಡಸು
ಆತನಿಗೆ ಅನೇಕರು ಅನೇಕ ರೀತಿಯಲ್ಲಿ
ಆತ ಗಂಡಸಾಗಿದ್ದರಿಂದ ಅದೆಷ್ಟು ಶ್ರೇಷ್ಠನೆಂಬುದನ್ನು ಹೇಳಿದ್ದಾರೆ.
ಡ್ಯಾಡಿ ಕುಟುಂಬದ ಯಜಮಾನ
ಮಮ್ಮಿಗೆ ಡ್ಯಾಡಿಯ ನಂತರದ ಸ್ಥಾನ
ರಾಮ, ನೀನು ಗಂಡಸು; ಹೆಂಗಸರಂತೆ ಅಳುವೆ ಏಕೆ ?
ರಾಮ, ನೀನು ಹುಡುಗರ ಜೊತೆಗೆ ಆಟವಾಡು; ಹುಡುಗಿಯರ ಜೊತೆಗಲ್ಲ
ರಾಮ, ಹುಡುಗಿಯರು ಕ್ರಿಕೆಟ್ಟಿನಲ್ಲಿ ಬರೀ ಡಾನ್ಸ್ ಮಾಡಲಷ್ಟೇ ಯೋಗ್ಯರು
ಕ್ರಿಕೆಟ್ ಇದು ಹುಡುಗರ ಆಟ; ಅವರಿಗೇ ಮಾತ್ರ ಅದು ಯೋಗ್ಯ



ರಾಮ, ನೀನು ಅಡುಗೆಮನೆಯೆಡೆಗೆ ಹೋಗುವ ಹಾಗಿಲ್ಲ
ರಾಮ, ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ
ಅವರು ಮನೆಯಲ್ಲಿದ್ದರೇ ಚೆನ್ನ
ರಾಮ, ನೀನು ಗಂಡಸು, ಹುಡುಗಿಯರನ್ನು ಗೆಲ್ಲುವುದು ನಿನ್ನ ಪೌರುಷಕ್ಕೆ ಸಾಕ್ಷಿ
ರಾಮ, ನೀನು ಎಷ್ಟೇ ಬಲಹೀನನಾಗಿದ್ದರೂ ನೀನೇ ಶ್ರೇಷ್ಠ ಜಗತ್ತಿನಲ್ಲಿ
ರಾಮ, ಸೀತೆ ಸತ್ತರೆ ಸಾಯಲಿ ನಿನಗಾಗಿ ಕಾದು ಕುಳಿತಿದ್ದಾಳೆ ಗೀತೆ
ಮೊದಲೇ ಇರೆಕ್ಶನ್ ಗಿರಾಕಿಗೆ
ಈ ಎಲ್ಲ ವಿಟಮಿನ್‌ಗಳು ಜೊತೆಯಾಗಿ
ರಾಮ ಬದನಾಮಿಗೆ ಹೆದರುವುದಿಲ್ಲ
ಇಂದು ಆತ ಕಮಲಳನ್ನು ರೇಪ್ ಮಾಡಿದ

ನಾಳೆ ಅವಳ ಗೆಳತಿಯರು, ಅಕ್ಕ ಪಕ್ಕದ ಊರಿನವರು
ಹಾದಿ ಬೀದಿಯಲ್ಲಿ ಮಲಗಿದ ಜನರು
ಕೊನೆಗೆ ಹಸಿವಿನಿಂದ ಕಂಗಾಲಾಗಿ ಮಲಗಿದ ಭಿಕ್ಷುಕಿ
ಯಾರನ್ನೂ ಬಿಡುವದಿಲ್ಲ ರಾಮ
ಅವನ ಸರ್ವಶರೀರದ ತುಂಬ ಕಾಮ
ರಾಮನಿಗೆ ಗಲ್ಲಿಗೇರಿಸಬೇಕೆಂದು ಜನರು ಹೇಳುತ್ತಾರೆ
ಕೆಂಪು ಕೋಟೆಯ ಮೇಲಿನಿಂದ ಅವನನ್ನು
ಕೆಳಗೆ ಒಗೆಯಬೇಕೆಂದು ಪತ್ರಿಕೆಗಳು ಬರೆದಿವೆ
ಅವನ ಲಿಂಗವನ್ನು ಕತ್ತರಿಸಿ ಷಂಡನನ್ನಾಗಿಸಬೇಕೆಂದು
ಮಹಿಳಾ ಸಂಘಟನೆಗಳು ಒತ್ತಾಯಿಸಿವೆ
ಇಡೀ ಜಗತ್ತು ರಾಮನಿಗೆ ಥೀ ಥೂ ಹಾಕುತ್ತಿದೆ
ಜರೂರ್ ! ಜರೂರ್ !! ರಾಮನಿಗೆ ಸಾರ್ವಜನಿಕವಾಗಿಯೇ
ಗಲ್ಲಿಗೇರಿಸಬೇಕು; ಈ ದೃಶ್ಯವನ್ನು ಎಲ್ಲ ಟಿವಿಗಳಲ್ಲಿ
ಲೈವಾಗಿ ಪ್ರಸಾರಿಸಬೇಕು; ಅದರಿಂದ ಉಳಿದ ರಾಮರು
ಸುಧಾರಿಸಬಹುದು; ಕಮಲಳಂಥವರು ಇಂತಹವರಿಂದ ಪಾರಾಗಬಹುದು
ಗಲ್ಲಿನಿಂದ ರಾಮ ಖಂಡಿತವಾಗಿ ಸಾಯುತ್ತಾನೆ
ಆದರೆ ಅವನಲ್ಲಿ ತುಂಬಿದ ಪೌರುಷತ್ವ ಎಂದೂ ಸಾಯುವುದಿಲ್ಲ
ಅವನು ಸದಾ ಇರೆಕ್ಶನ್‌ನಲ್ಲಿಯೇ ಅಡ್ಡಾಡುತ್ತಿರುತ್ತಾನೆ
ಎಲ್ಲೆಲ್ಲಿಯೂ ಅವನ ಕಣ್ಣುಗಳು ಕಮಲಳನ್ನು ಹುಡುಕುತ್ತಿರುತ್ತವೆ
ಕಮಲಳೇ ಇರಬಹುದು; ವಿಮಲಳೇ ಇರಬಹುದು
ಹೆಣ್ಣಿನಂತೆ ಕಾಣುವ ಯಾರೇ ಕಂಡರೂ
ಆತ ಅವರನ್ನು ರೇಪ್ ಮಾಡುತ್ತಾನೆ
ರೇಪ್ ಮಾಡಿದ ನಂತರ
ಅವರನ್ನು ಅಮಾನುಷವಾಗಿ ಕೊಂದೂ ಹಾಕುತ್ತಾನೆ.

**ಡಾ|| ಸರಜೂ ಕಾಟ್ಕರ್**
'ಕಾವ್ಯ', ಎಂಐಜಿ-೨೧೫, ಮಹಾಂತೇಶ ನಗರ, ಬೆಳಗಾವಿ - ೫೯೦ ೦೧೬




*ಚಿತ್ರದಲ್ಲಿ ಎಡದಿಂದ ಬಲಕ್ಕೆ : ಶ್ರೀ ರಂಗನಾಥ ಕಂಟನಕುಂಟೆ, ಶ್ರೀ ಹುಲಿಕುಂಟೆ ಮೂರ್ತಿ, ಶ್ರೀ ಕುಪ್ಪೆ ನಾಗರಾಜ, ಶ್ರೀ ಬಿ. ಎ. ಸನದಿ, ಪ್ರೊ|| ಎಸ್. ಜಿ. ಸಿದ್ಧರಾಮಯ್ಯ, ಶ್ರೀ ಆರ್. ಎಸ್. ರಾಜಾರಾಮ್, ಶ್ರೀ ಆನಂದ ವಿಂಗಕರ, ಶ್ರೀ ಸ. ರಘುನಾಥ*

ನವಕರ್ನಾಟಕ ಪ್ರಕಾಶನದ ಇತ್ತೀಚಿನ ಐದು ಪುಸ್ತಕಗಳ ಲೋಕಾರ್ಪಣೆ ನಗರದ 'ನಯನ' ಸಭಾಂಗಣದಲ್ಲಿ ಬಹು ಸಂಭ್ರಮದಿಂದ ಅಪೂರ್ವ ಸಾಹಿತ್ಯಿಕ ವಾತಾವರಣದಲ್ಲಿ ನೆರವೇರಿತು. **ಅಲೆಮಾರಿಯ ಅಂತರಂಗ** (ಶ್ರೀ ಕುಪ್ಪೆ ನಾಗರಾಜ), **ಶಾಂತಿಗೊಂದು ಸವಾಲು** (ಬಿ. ಎ. ಸನದಿ, ಸಂ|| ಎಸ್. ಜಿ. ಸಿದ್ಧರಾಮಯ್ಯ), **ವಿಶ್ವಕಥಾವಾಹಿನಿ** (ನಿರಂಜನರ ಮುನ್ನುಡಿಗಳ ಸಂಕಲನ), **ಗುರಜಾಡರ ಕಥೆಗಳು** (ಗುರಜಾಡ ಅಪ್ಪಾರಾವು, ಅನು : ಸ. ರಘುನಾಥ) ಮತ್ತು **ಅಕಾಲ ಮಳೆ ಸುರಿದಾಗಿನ ಕಥೆ** (ಆನಂದ ವಿಂಗಕರ, ಅನು : ಚಂದ್ರಕಾಂತ ಪೋಕಳೆ). **ಪ್ರೊ|| ಎಸ್. ಜಿ. ಸಿದ್ಧರಾಮಯ್ಯ** ಅವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಕೃತಿಗಳನ್ನು ಲೋಕಾರ್ಪಣೆ ಮಾಡಿದರು. ಡಾ|| ರಂಗನಾಥ ಕಂಟನಕುಂಟೆ ಹಾಗೂ ಹುಲಿಕುಂಟೆ ಮೂರ್ತಿ ಸೊಗಸಾಗಿ ಕೃತಿ ಪರಿಚಯ ಮಾಡಿಕೊಟ್ಟರು. ಲೇಖಕರು – ಅನುವಾದಕರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಅಕಾಲ ಮಳೆ ಸುರಿದಾಗಿನ ಕಥೆ ಮರಾಠಿ ಕೃತಿಯ ಲೇಖಕ ಶ್ರೀ ಆನಂದ ವಿಂಗಕರ ಹಾಗೂ ಗುರಜಾಡರ ಕಥೆಗಳು ಅನುವಾದಕ ಶ್ರೀ ಸ. ರಘುನಾಥ ಅವರ ಉಪನ್ಯಾಸ ಸಮಾರಂಭಕ್ಕೆ ಕಳೆ ತಂದಿತ್ತು.

# ಕುಸುಮಾ ಶಾನುಭಾಗ

ಆಫೀಸಿಗೆ ಹೊರಡುವ ತರಾತುರಿಯಲ್ಲಿದ್ದೆ. ಅಷ್ಟರಲ್ಲಿ ಮೊಬೈಲು ಕಿರುಗುಟ್ಟಿತು. ಬೆಳಿಗ್ಗೆ-ಬೆಳಿಗ್ಗೆ ಫೋನು ಮಾಡಿ ತೊಂದರೆ ಕೊಡುವವರು ಯಾರೆಂದು ಗೊಣಗಿಕೊಂಡೇ ಮೊಬೈಲು ಎತ್ತಿಕೊಂಡೆ. ಮಂಡ್ಯದಿಂದ ಗೋಲು ಸಹಾಯಕ ಮುದ್ದೇಗೌಡನ ಫೋನು. ''ಮ್ಯಾಡಂ, ಶ್ರೀಧರ ಸರ್ ಈಗ ಸ್ವಲ್ಪ ಹೊತ್ತಿಗೆ ಹಿಂದೆ ಹೋಗಿಬಿಟ್ಟರು'' ಎಂದು ಹೇಳಿದ. ತಿರುಗಿ ಮಾತಾಡಲು ನನಗೆ ಧ್ವನಿಯೇ ಹೊರಡಲಿಲ್ಲ. ಅವನೇ ಮಾತು ಮುಂದುವರಿಸಿದ: ''ಯಾವತ್ತು ಕೋಣೆಯಲ್ಲಿ ಮಲಗುವವರು, ನಿನ್ನೆ ರಾತ್ರಿ ಮನೆ ಹೊರಗೆ ಹಾಸಿಗೆ ಹಾಸಿಕೊಂಡು ಮಲಗಿದ್ದರು. ಬೆಳಿಗ್ಗೆ ಮನೆ ಕೆಲಸದವಳು ಬಂದವಳು ಅವರನ್ನು ಎಬ್ಬಿಸಲು ಪ್ರಯತ್ನಿಸಿದಳು. ಕೊನೆಗೆ ಅವರ ಮನೆ ಎದುರಿಗೇ ಇರುವ ನನ್ನ ಮನೆಗೆ ಬಂದು, ಸಾಹೇಬ್ರು ಮಲಗಿದಲ್ಲಿಂದ ಏಳುತ್ತಿಲ್ಲವೆಂದಳು. ನಾನು ಕೂಡಲೇ ಓಡಿದೆ. ಸರ್ ಮೈ ತಣ್ಣಗಾಗಿತ್ತು. ಮುಂದಿನ ರಸ್ತೆಯಲ್ಲಿದ್ದ ನರ್ಸಿಂಗ್ ಹೋಂ ವೈದ್ಯರೊಬ್ಬರನ್ನು ಕರೆದುಕೊಂಡು ಹೋದೆ. ಅವರು ಪರೀಕ್ಷಿಸಿ, ಬೆಳಗಿನ ಜಾವ ನಾಲ್ಕು ಗಂಟೆಗೆಲ್ಲ ಜೀವ ಹೋಗಿರಬೇಕು ಅಂದರು.''

''ಏನಾಯಿತು ಅಷ್ಟು ಬೇಗ ? ರಾತ್ರಿ ಹತ್ತು ಗಂಟೆಗೆ ಅವನೇ ನನಗೆ ಫೋನು ಮಾಡಿದ್ದನಪ್ಪ. ಮಂಡ್ಯಕ್ಕೆ ಬೆಳಿಗ್ಗೆ ಬರುತ್ತೀಯ ? ಬರೋದಾದರೆ ಒಂಭತ್ತು ಗಂಟೆಯೊಳಗೆ ಬಂದುಬಿಡು. ನಾನು, ನನ್ನ ಆಫೀಸಿನಲ್ಲಿ ಕಾಯುತ್ತಿರುತ್ತೇನೆ'' ಎಂದು ಹೇಳಿದ್ದ.'' ಮಂಡ್ಯಕ್ಕೆ ಯಾಕೆ ಕರೆಯುತ್ತಿದ್ದಾನೆ, ಅದೂ ಮರುದಿನ ಬೆಳಿಗ್ಗೆ ಒಂಭತ್ತು ಗಂಟೆಗೆ ಮೊದಲು ತಲುಪುವ ಹಾಗೆ ಎಂದು ಆಶ್ಚರ್ಯವಾಯಿತು. ''ಇಲ್ಲಪ್ಪ ಗೋಲು, ನಾಳೆ ಕಚೇರಿಯಲ್ಲಿ ತುಂಬ ಕೆಲಸ ಇರುತ್ತೆ. ನಾಡಿದ್ದು ಬೆಳಿಗ್ಗೆ ಬರುತ್ತೇನೆ ಎಂದು ಹೇಳಿದ್ದೆ. 'ಸರಿ, ಹಾಗಾದರೆ' ಎನ್ನುತ್ತ ಫೋನು ಇಟ್ಟ. ಈಗ ನೋಡಿದರೆ, ನೀನು ಅವನ ಸಾವಿನ ಸುದ್ದಿ ಕೊಡುತ್ತಿದ್ದೀಯ...'' ನಾನು ಅಸಹಾಯಕತೆಯಿಂದ ಒದರಿದೆ. ಸ್ವಲ್ಪ ಸುಧಾರಿಸಿಕೊಂಡು, ''ನಾನು ಹೊರಟು ಬರುತ್ತೇನೆ'' ಎಂದೆ. ''ಬೇಡ ಮ್ಯಾಡಂ. ನೀವು ಇಲ್ಲಿಗೆ ತಲುಪುವ ಹೊತ್ತಿಗೆ ಅವರ ಶವವನ್ನು ಅವರ ಹುಟ್ಟೂರಿಗೆ ತೆಗೆದುಕೊಂಡು ಹೋಗಿಬಿಟ್ಟಿರುತ್ತಾರೆ. ಅವರ ಅಣ್ಣನ ಮಗನೊಬ್ಬ ಮೈಸೂರಿನಲ್ಲಿದ್ದಾರೆ. ಅವರು ಬಂದಿದ್ದಾರೆ. ಈಗ ಶವವನ್ನು ಊರಿಗೆ ಕರೆದೊಯ್ಯಲು ವ್ಯವಸ್ಥೆ ಮಾಡಿಯಾಗಿದೆ. ಎಲ್ಲ ಮುಗಿಸಿ ಬಂದ ಮೇಲೆ, ನಾನೇ ಫೋನು ಮಾಡುತ್ತೇನೆ'' ಎಂದ ಮುದ್ದೇಗೌಡ. ನಾನು ಹುಂಗುಟ್ಟಿ ಹಾಗೇ ಕುಳಿತೆ.

ನನಗೆ ಸುಧಾರಿಸಿಕೊಳ್ಳಲು ಆಗಲಿಲ್ಲ. ದಿಕ್ಕೇ ತೋಚದಂತೆ ಕುಳಿತುಬಿಟ್ಟೆ. ನಿನ್ನೆ ರಾತ್ರಿ ಮಾತಾಡಿದ ಗೋಲು ಧ್ವನಿ ಕಿವಿಯಲ್ಲಿ ಇನ್ನೂ ಗುಯ್‌ಗುಡುತ್ತಿತ್ತು. ಗಂಟೆ ನೋಡಿದೆ. ಒಂಭತ್ತಕ್ಕೆ ಇನ್ನೂ ಐದು ನಿಮಿಷವಿತ್ತು. ಅವನು ಕೆಲಸ ಮಾಡುತ್ತಿದ್ದ ಟಿ.ವಿ. ಸುದ್ದಿ ಚಾನಲ್ ಹಾಕಿದೆ. ಅದರಲ್ಲಿ ಮಾಹಿತಿ ಕೊಡಬಹುದೆನಿಸಿತು. ಚಡಪಡಿಸುತ್ತಲೇ ಟಿ.ವಿ. ಎದುರು ಕುಳಿತೆ. ಒಂಭತ್ತು ಗಂಟೆವರೆಗೆ ಕಾಯಲು ನನಗೆ ವ್ಯವಧಾನ ಇರಲಿಲ್ಲ. ನಿಟ್ಟುಸಿರು ಬಿಟ್ಟುಕೊಂಡು, ಬರುತ್ತಿದ್ದ ಜಾಹೀರಾತುಗಳನ್ನೆ ಗದರಿಕೊಂಡು ಕುಳಿತೆ. ಸುದ್ದಿ ಮುಖ್ಯಾಂಶದಲ್ಲಿ ಅವನ ಫೋಟೊ ಹಾಕಿ, ''ನಮ್ಮ ಹಿರಿಯ ವರದಿಗಾರ ಶ್ರೀಧರ... ಹೃದಯಾಘಾತ...'' ಇಷ್ಟೇ ಕೇಳಿಸಿಕೊಂಡದ್ದು... ಹಾಗೇ ಕಣ್ಣುಮುಚ್ಚಿದೆ.

ಆಫೀಸಿಗೆ ಹೋಗದೆ ಮನೆಯಿಂದಲೇ ಸ್ಟೋರಿ ಫೈಲು ಮಾಡಲು ಯೋಚಿಸಿದೆ. ಗೋಲು ಇವತ್ತು ಮಂಡ್ಯಕ್ಕೆ ಬರುವಂತೆ ನನ್ನ ಕರೆದಿದ್ದ.. ಯಾಕೆ... ಯಾಕಿರಬಹುದು ? ಥಟ್ಟನೆ ನೆನಪಾಯಿತು. ನಿನ್ನೆ ಬೆಳಿಗ್ಗೆ ಮುದ್ದೇಗೌಡ ನನ್ನ ಆಫೀಸಿಗೆ ಬಂದು, ''ಶ್ರೀಧರ ಸರ್ ಇದನ್ನು ನಿಮಗೆ ತಲುಪಿಸಲು ಹೇಳಿದ್ದಾರೆ'' ಎಂದು ಕವರೊಂದನ್ನು ಕೊಟ್ಟು ಹೋಗಿದ್ದ. ಒದಬೇಕು ಅಂದುಕೊಳ್ಳುವಷ್ಟರಲ್ಲಿ ಸಹಾಯಕ ಸಂಪಾದಕರು ಕರೆದರು. ಕವರನ್ನು ಡ್ರಾಯರ್‌ನಲ್ಲಿಟ್ಟು ಹೋದೆ. ಮತ್ತೆ, ಮರೆತೇಬಿಟ್ಟೆ. ನಿನ್ನೆ ಅವನು ಫೋನು ಮಾಡಿದಾಗಲೂ, ಅವನು ಬರೆದ ಕಾಗದ ನೆನಪಾಗಲಿಲ್ಲ. ಅವನಾದರೂ ನೆನಪಿಸಬಹುದಿತ್ತು. ತಾನು ಏನು ಬರೆದಿದ್ದೆ ಎಂದು ಹೇಳಬಹುದಿತ್ತು. ಅವನಿಗೆ ಸಾಯುವುದು ಮೊದಲೇ ಗೊತ್ತಾಗಿ ಹೋಗಿತ್ತ...? ಅದಕ್ಕೆ ಒಂಭತ್ತು ಗಂಟೆಗೆ ಮೊದಲು ಬರಲು ಹೇಳಿದ್ದನ...? ಹಾಳು ಮರೆವು... ಕಾಗದ ಓದಿದ್ದರೆ... ಈಗ, ಮನಸ್ಸು ಕಾಗದ ಓದಲು ತವಕಿಸುತ್ತಿತ್ತು. ಆದರೆ ಅದೇ ವೇಗದಲ್ಲಿ ಕಾಲುಗಳು ಓಡಬೇಕಲ್ಲ! ಹಾಗೂ ಹೀಗೂ ಆಫೀಸಿಗೆ ಹೋಗಲು ರೆಡಿಯಾದೆ.

ನಮಗೆ ಬೇಕಾದವರು ತೀರಿಕೊಂಡಾಗ, ಅವರು ಆ ಕ್ಷಣದಲ್ಲಿ ನಮ್ಮ ಮನಸ್ಸಲ್ಲಿ ಬಹಳ ತೀವ್ರವಾಗಿ ಬದುಕಿರುತ್ತಾರೆ.

# ಎದೆಗೇ ಬಿದ್ದ ಪೆಟ್ಟು

ಗೋಲು... ಕಡೆಗೂ ನನಗೆ ಅರ್ಥವಾಗಲೇ ಇಲ್ಲ, ನಿಜ, ನಿಗೂಢವಾಗಿಯೆ ಬದುಕಿದ ! ಕಾಗದ ಬರೆದವನು... ''ನಿನ್ನೆ ಕಾಗದ ನೋಡಿದ್ಯ...?'' ಎಂದು ಒಂದು ಮಾತು ಕೇಳಿದ್ದರೆ... ಇನ್ನು ಸ್ವಲ್ಪ ಸಮಯ ಅವನು ಸಾವನ್ನ ಮುಂದೂಡುತ್ತಿದ್ದನೊ ಏನೊ... ಯೋಚಿಸಲೂ ಆಗದಷ್ಟು ನಾನು ಖಾಲಿ-ಖಾಲಿಯಾಗಿದ್ದೆ. ಗೋಲು ಎದೆಗೇ ಒದ್ದು ಹೋಗಿದ್ದ!



# ನೆಲಹಾಸು

**ಧೂ**ಳ ಸಂಗದಲಿ ಮಿಂದಿರುವ
ಬಿಳಿಯ ನೆಲಹಾಸು
ತಲೆ ತಗ್ಗಿಸಿ ಕಣ್ಣೊಳಗೆ ಕಣ್ಣಿಟ್ಟು
ಒಂದೇ ಸಮನೆ ಆಕೆ
ಒರೆಸುತ್ತಲೇ ಇದ್ದಾಳೆ, ಹಳೇ
ಅರಿವೆಯ ಚೂರಿನಿಂದ
ಒಂದೊಂದೇ ಕಣಗಳ ಬಿಟ್ಟೂ
ಬಿಡದೆ ವರ್ಗಾಯಿಸುತ್ತಿದ್ದಾಳೆ
ಹಿಡಿ ನೀರ ಪಾತ್ರೆಗೆ.

ಬಾಲ್ಯ ಮರಳುತ್ತಿದೆ
ಬೆಳಕಾಗುತ್ತಿದೆ
ಕನ್ನಡಿಯ ಕಡೆ ಬೆನ್ನು ಮಾಡಿ
ಕೂತ ಆಕೆಗೊಮ್ಮೆ
ಅದರೊಳಗೆ ತನ್ನನ್ನೇ
ಕಂಡುಕೊಳ್ಳುವ ತವಕ
ಮುಂಗುರುಳ ಸರಿಸಿ ಇಣುಕುತ್ತಿದ್ದಾಳೆ

ಅವಳಿಟ್ಟ ಬಿಂದಿ, ಕಿವಿಯ ಲೋಲಾಕು
ಎಲ್ಲವೂ ಅವಳದೇ
ನೆರಳಿನಂತೆ ಕಾಣುತ್ತಿವೆ
ಕೊನೆಗೊಮ್ಮೆ ಅವಳ ಕಣ್ಣೂ
ಕೂಡ.

**ದೀಪ್ತಿ ಭದ್ರಾವತಿ**
'ಸ್ನಿಗ್ಧ', ೨ನೇ ತಿರುವು ಬಲಭಾಗ,
ಶಂಕರಮಠ ರಸ್ತೆ
ಸಿದ್ಧಾರೂಢನಗರ, ಭದ್ರಾವತಿ



ಅವರ ಪ್ರತಿಯೊಂದು ಚಹರೆ, ಮಾತು-ಕಥೆ ಕಣ್ಣೆದುರು ಬಂದುಕೊಂಡೇ ಇರುತ್ತವೆ. ಗೋಲು ನನ್ನ ಸಮಯ, ಮನಸ್ಸನ್ನೆಲ್ಲ ಆವರಿಸಿ ತೀವ್ರವಾಗಿ ಬದುಕಲು ಬಂದುಬಿಟ್ಟಿದ್ದ.

ಸುಮಾರು ಹದಿನೈದು ವರ್ಷಗಳ ಹಿಂದೆ, ನಾನು ಮತ್ತು ಗೋಲು ಮಂಡ್ಯದಲ್ಲಿ ಬೇರೆ ಬೇರೆ ಪತ್ರಿಕೆಗಳಿಗೆ ವರದಿಗಾರರಾಗಿ ಕೆಲಸ ಮಾಡುತ್ತಿದ್ದೆವು. ಇಬ್ಬರೂ ಆ ಜಿಲ್ಲೆಗೆ ಹೊಸಬರೆ. ಆ ಕಾರಣಕ್ಕೊ ಏನೊ ಸ್ನೇಹಿತರಾಗಿದ್ದೆವು. ಗೋಲು ನನಗೆ ಆತ್ಮೀಯನಾದದ್ದು ಅವನ ಪೆದ್ದುತನದಿಂದ. ಅದೂ ಮಂಡ್ಯದಲ್ಲಿ ಒಂದು ವಾರ ನಡೆದ ರಾಷ್ಟ್ರ ಮಟ್ಟದ ಥ್ರೋಬಾಲ್ ಪಂದ್ಯದಲ್ಲಿ. ನನ್ನ ಪತ್ರಿಕೆಯ ಕ್ರೀಡಾ ವರದಿಗಾರ ಬೆಂಗಳೂರಿನಿಂದ ಬಂದಿದ್ದರು. ನನಗೆ ವರದಿ ಮಾಡುವ ಕೆಲಸವಿರಲಿಲ್ಲ. ನಾನು ಪಂದ್ಯ ನೋಡಲು ಹೋಗಿದ್ದೆ. ಗೋಲು ಪಂದ್ಯದ ವರದಿ ಮಾಡಬೇಕಿತ್ತು. ಕ್ರೀಡಾವರದಿಗಾರರ ಜೊತೆ ಕುಳಿತುಕೊಳ್ಳಲು ಹೇಳಿದರೂ ಹಟ ಮಾಡಿ ನನ್ನ ಪಕ್ಕ ಬಂದು ಕುಳಿತ. ಆಟ ಆಡುವವರು ಬಾಲ್ ಬಿಟ್ಟಾಗ ಅವನು ಮೆಲ್ಲನೆ, ''ಈಗ ಎಷ್ಟು ಗೋಲಾಯಿತು.. ಯಾರು ಯಾರಿಗೆ ಗೋಲು ಹೊಡೆದರು...'' ಎಂದು ಕೇಳುತ್ತಿದ್ದ. ಅವನ ಮಾತಿಗೆ ಕಿಸಕ್ಕನೆ ನಕ್ಕೆ. ಅವನ ಮೋರೆಯೆಲ್ಲಾ ಕೆಂಪಾಯಿತು. ಅವನಿಗೆ ಮುಜುಗುರ ಆಗಿರುವುದನ್ನು ಗಮನಿಸಿ, ನಾನು, ''ಸಾರಿ... ತಪ್ಪು ತಿಳ್ಕೊಳ್ಳಬೇಡ. ಹಾಕಿ ಆಟದಲ್ಲಿ ಗೋಲು ಆಗುತ್ತದೆ. ಈ ಆಟದಲ್ಲಿ ಗೋಲ್ ಆಗುವುದಿಲ್ಲ, ಪಾಯಿಂಟ್ ಇರುತ್ತದೆ'' ಎಂದೆಲ್ಲ ವಿವರಿಸಿ, ಅವತ್ತು ಸಂಜೆ ಅವನು ಬೆಂಗಳೂರಿಗೆ ಕಳುಹಿಸಬೇಕಿದ್ದ ಕ್ರೀಡೆಯ ವರದಿಯನ್ನು ಬರೆದುಕೊಟ್ಟೆ.

''ಈ ಆಟ-ಗೀಟ ನನ್ನ ತಲೆಗೆ ಹೋಗೋದಿಲ್ಲ. ಏನಿದ್ದರೂ ರಾಜಕಾರಣ, ಸಾಂಸ್ಕೃತಿಕ ವರದಿಗಳಷ್ಟೆ ನನಗೆ ಸರಿ'' ಎಂದು ನಕ್ಕ.

''ಇದನ್ನ ನಿಮ್ಮ ಸಂಪಾದಕರಿಗೆ ತಿಳಿಸೋದಲ್ವ ? ಮಹಾರಾಷ್ಟ್ರದವರು ರಾಜಸ್ತಾನದವರ ವಿರುದ್ಧ ನಾಲ್ಕು ಗೋಲು ಹೊಡೆದು ಮೊದಲ ಸುತ್ತಿನ ಥ್ರೋಬಾಲ್ ಪಂದ್ಯದಲ್ಲಿ ಗೆದ್ದರು ಎಂದು ಬರೆದರೆ. ಅದೇನೇ ಇರಲಿ, ಇನ್ನು ಮೇಲೆ ನಿನ್ನ ಹೆಸರು ಗೋಲು. ನಾನು ಗೋಲೂಂತ ಕರೆದಾಗ ಓಗೊಡದಿದ್ದರೆ ಮತ್ತೆ ಮಾತೇ ಇಲ್ಲ'' ಎಂದು ಕೀಟಲೆ ಮಾಡಿದೆ. ಕ್ರಮೇಣ ಅವನು ನನ್ನ ಬಾಯಲ್ಲಿ 'ಗೋಲು' ಆಗಿಬಿಟ್ಟ.

ಟೀ ಕುಡಿದರೆ, ತಿಂಡಿ ತಿಂದರೆ ಆ ಕ್ಷಣವೆ ಗೋಲು ಹೊಟೇಲಿಂದ ಹೊರಗೋಡಿ ಸಿಗರೇಟು ಹೊತ್ತಿಸಿಕೊಳ್ಳುತ್ತಿದ್ದ. ಸಿಗರೇಟು ಇಲ್ಲ ಅಂದರೆ ಚಡಪಡಿಸುತ್ತಿದ್ದ. ದಿನಕ್ಕೆ ಐದಾರು ಪ್ಯಾಕೇಟು ! ಅವನಿಗೆ ಸಿಗರೇಟು ಬಿಡಲು ಎಷ್ಟೆಲ್ಲ ಹೇಳಿದೆ. ''ದಿನಕ್ಕೊಂದು ಪ್ಯಾಕೇಟಿಗೆ ಇಳಿಯೊ ಮಾರಾಯ, ನಾಳೆಗೆ ಏನಾದರೂ ರೋಗ ಹಿಡಿದರೆ ಏನು ಗತಿ ? ನೋಡಿಕೊಳ್ಳಲಿಕ್ಕೆ ಹೆಂಡತಿಯೂ ಇಲ್ಲ'' ರೇಗಿಸಿದೆ. ''ಗೋಲು, ನಿನಗೆ ಕಡಿವಾಣ ಬಹಳ ಅಗತ್ಯ ಇದೆ. ನನ್ನ ಮಾತು ನೀನು ಕೇಳುವವನಲ್ಲ. ಬೇಗ ಮದುವೆ ಮಾಡಿಕೊ ಆಗಲೆ ನಿನಗೆ ಶಿಸ್ತು ಬರೋದು'' ಎಂದು ನಾನು ಒಂದು ಸಲ ಹೇಳಿದ್ದೆ. ಅಷ್ಟಕ್ಕೆ ಅವನು ರೇಗಾಡಿದ್ದು ನೋಡಿ ದಂಗಾಗಿದ್ದೆ.

''ನನಗೇನು ಶಿಸ್ತು ಇಲ್ಲಾಂತ ಹೇಳ್ತೀಯ. ಕೆಲಸದ ವಿಚಾರದಲ್ಲಿ ನಿನಗಿಂತ ಹೆಚ್ಚು ಸುದ್ದಿ ಕಳುಹಿಸುವವನು ನಾನೆ. ದಿನವೂ ಪೇಪರ್ ನೋಡಿದರೆ ಗೊತ್ತಾಗುತ್ತಲ್ಲ. ಸಿಗರೇಟು ಸೇದಿಬಿಟ್ಟರೆ ಶಿಸ್ತು ಇರೋದಿಲ್ಲಾಂತ ನೀನಷ್ಟೆ ಹೇಳಬೇಕು. ಇದಕ್ಕು ಮದುವೆಗು ಸಂಬಂಧವಿಲ್ಲ. ಸಂಬಂಧ ಇರೋದಾದರೆ ನೀನೇ ನನ್ನ ಮದುವೆಯಾಗು. ಆಗ್ತೀಯ ?'' ಗೋಲು ಹೀಗೆ ಕೇಳ್ತಾನೇಂತ ನಾನು ಅಂದುಕೊಂಡಿರಲಿಲ್ಲ. ಬಹಳ ಪೆಚ್ಚಾದೆ. ''ಇದಕ್ಕೆ ಯಾಕೆ ಇಷ್ಟು ರೇಗಾಟ. ನನಗನಿಸುತ್ತೆ ನಿನಗೆ ಮದುವೆಯಾಗಿರಬೇಕು, ಹೆಂಡತಿಯನ್ನ ಊರಲ್ಲೆ ಬಿಟ್ಟಿರಬೇಕು. ಇಲ್ಲದಿದ್ದರೆ ರೇಗುವ ಅಗತ್ಯವೇ ಇರಲಿಲ್ಲ.''

ಕ್ಷಣ ಹೊತ್ತು ಗೋಲು ಮಾತಾಡಲಿಲ್ಲ. ಆಮೇಲೆ, ''ಮದುವೆಯಾಗಿದ್ದಿದ್ದರೆ ಈ ಊರಲ್ಲಿ ಹೀಗೆ ಒಂಟಿಯಾಗಿ ಯಾಕಿರುತ್ತಿದ್ದೆ? ನೀವು ಸ್ತ್ರೀಯರೇ ಹೀಗೆ. ಒಂದು ಮಾತಾಡಿದರೆ, ರೇಗಿದರೆ ಅದನ್ನು ಕೂದಲೆಳೆ ಸೀಳುವಂತೆ ಸೀಳಿ, ಆ ವ್ಯಕ್ತಿಯ ಬಗ್ಗೆ ಒಂದು ನಿರ್ಧಾರಕ್ಕೆ ಬಂದು, ಅದೇ ಸತ್ಯ ಎಂದು ಮಾತಾಡುತ್ತೀರಿ. ಅದು ನನಗೆ ಸರಿ ಕಾಣೋದಿಲ್ಲ, ಅಷ್ಟೆ. ಬಿಡು, ಈ ಮಾತು ಇಲ್ಲಿಗೆ'' ಎಂದು ಹೇಳಿದ್ದ.

ನನಗೂ ಸಿಟ್ಟು ಬಂದಿತ್ತು. ''ಸುಮ್ಮನಿರು. ಹುಚ್ಚುಚ್ಚು ಮಾತಾಡ್ಬೇಡ'' ಎನ್ನುತ್ತ ಮುಖ ತಿರುಗಿಸಿದ್ದೆ. ಒಂದೆರಡು ನಿಮಿಷ ಅಷ್ಟೆ. ಮತ್ತೆ ರಾಜಿಯಾಗಿ ಯಥಾಪ್ರಕಾರ ಕೆಲಸ, ಸುದ್ದಿಗಳ ಬಗ್ಗೆ ಹರಟುತ್ತಿದ್ದೆವು. ಮಂಡ್ಯದ ಸುದ್ದಿಗಾರರ ಕುರಿತು, ಅವರ ಬರವಣಿಗೆ ಕುರಿತು, ಅವರು ಬರೆದ ಸುದ್ದಿಗಳನ್ನು ನಾವಿಬ್ಬರೂ ಬರೆದ ಸುದ್ದಿಗೆ ಹೋಲಿಕೆ ಮಾಡಿ ನಾನು ಮಾತಾಡುತ್ತಲೇ ಇರುತ್ತಿದ್ದೆ. ಗೋಲು ಹುಂಗುಟ್ಟುತ್ತಿದ್ದ. ಒಂದು ದಿನ, ''ಶಿಲ್ಪ, ನಾವೆಲ್ಲ ಮಿಶ್ರಣಗಳೆ; ಮೂಲವಸ್ತುಗಳಲ್ಲ. ರಕ್ತ ಅಂದರೆ ಏನೆಲ್ಲ ರಾಸಾಯನಿಕಗಳ ಮಿಶ್ರಣ, ನಾವು ಹೊರಗೆ ಹಾಕುವ ಮಲ-ಮೂತ್ರ ! ಅವೂ ಮತ್ತಿನ್ನೇನೊ ರಾಸಾಯನಿಕಗಳ ಮಿಶ್ರಣ. ನಾವು ತಗೊಳ್ಳುವ ಗಾಳಿ, ಪೂರ್ತಿ ಆಕ್ಸಿಜನ್ ಅಲ್ಲ. ಅದೂ ಮಿಶ್ರಣ. ಇನ್ನು ನಮ್ಮ ಸ್ವಭಾವಕ್ಕೆ ಬಾ. ಅಲ್ಲೂ ಅದು ಒಳ್ಳೇದು-ಕೆಟ್ಟದ್ದರ ಮಿಶ್ರಣ. ನಿನ್ನ ಕೆಲವು ಸ್ವಭಾವಕ್ಕೆ ನನ್ನ ಕೆಲವು ಸ್ವಭಾವ ಹೊಂದಿಕೊಳ್ತಿದೆಯಾದ್ದರಿಂದ ನಾವು ಸ್ನೇಹಿತರಾಗಿದ್ದೇವೆ. ಹಾಗಿದ್ದಾಗ ಹೊಂದಿಕೊಳ್ಳದ ಗುಣಗಳು ಯಾವುವು

ಎಂದು ಯಾಕೆ ತಲೆ ಕೆರೆದುಕೊಳ್ಳಬೇಕು ? ತಲೆ ಕೆರೆದು ಕೊಳ್ಳೋದನ್ನ ನಾವು ನಿಲ್ಲಿಸದಿದ್ದರೆ ವ್ಯಕ್ತಿತ್ವದ ಬಗ್ಗೆ ಜಡ್ಜ್‌ಮೆಂಟ್ ಕೊಡುತ್ತಾ ಹೋಗ್ತೀವೆ. ಅದಕ್ಕೆ ನಾನು ಹೇಳೋದು ತಲೆ ಕೆರೆದುಕೊಳ್ಳೋದು ಬೇಡ, ಜಡ್ಜ್‌ಮೆಂಟ್ ಕೊಡೋದು ಬೇಡ.''

ನಾನು ಕೇಳಿದೆ, ''ಈ ಮಾತು ಯಾಕೀಗ ?''

''ನೀನು ಆಗಾಗ ಜಡ್ಜ್ ಆಗ್ತಿರುತ್ತೀಯ. ಅದಕ್ಕೆ ಹೇಳ್ತಿದ್ದೇನೆ. ಜಡ್ಜ್ ಆಗೋದು ನಿಲ್ಲಿಸು, ಎಷ್ಟು ನಿರುಮ್ಮಳ ಆಗಿರ್ತೀಯ ನೋಡು.'' ಅವನ ಮಾತಿನಿಂದ ನನಗೆ ಸ್ವಲ್ಪ ಇರುಸುಮುರುಸಾದರೂ, ಅವನು ಹೇಳಿದ್ದು ನಿಜವಾಗಿತ್ತು. ಅವನನ್ನ ಮಂಡ್ಯದಿಂದ ಓಡಿಸಲು ಕೆಲವು ಪತ್ರಕರ್ತರು ಇನ್ನಿಲ್ಲದ ಪ್ರಯತ್ನ ಮಾಡುತ್ತಿದ್ದರು. ಇದು ತಿಳಿದೂ ತಿಳಿಯದಂತೆ ತನ್ನ ಪತ್ರಿಕೆಗೆ ಕೆಲಸ ಮಾಡಿಕೊಂಡೇ ಇರುತ್ತಿದ್ದ. ನಾನು ಕೆದಕಿ-ಬೆದಕಿ ಕೇಳಿದಾಗಲೂ, ''ನಡೀತಿರುವ ದಾರಿ ಸರಿಯಾಗಿದ್ದರೆ ತಪ್ಪುವ ಪ್ರಶ್ನೆ ಇಲ್ಲ'' ಎಂದು ಹೇಳಿ ನನ್ನ ಬಾಯಿ ಮುಚ್ಚಿಸಿದ್ದ.

ನಾನು ಗೋಲು ಜೊತೆ ಮಾರಾಮಾರಿ ಜಗಳ ಆಡಿದ್ದು ಕಾವೇರಿ ಚಳವಳಿಯಲ್ಲಿ. ತೀರ ಅರ್ಜೆಂಟ್ ಸುದ್ದಿ ಎಲ್ಲಾ ಎಡಿಷನ್‌ಗಳಿಗೆ ಬರಲೇಬೇಕಿತ್ತು. ಬೆಂಗಳೂರಿಗೆ ಕಾರು ಮಾಡಿಕೊಂಡು ಹೋಗಿದ್ದೆವು. ಬರುವಾಗ, ಅದೂ ಮಧ್ಯರಾತ್ರಿಯಲ್ಲಿ; ಬಾರ್ ಎದುರು ಕಾರು ನಿಲ್ಲಿಸಿ, ಡ್ರೈವರನ್ನೂ ಕರೆದುಕೊಂಡು ಒಳಗೆ ಹೋದವನು ಹೊರಗೆ ಬಂದದ್ದು ರಾತ್ರಿ ಒಂದು ಗಂಟೆಗೆ. ಮಧ್ಯಾಹ್ನದಿಂದ ಹೊಟ್ಟೆಗೆ ಏನೂ ಇಲ್ಲದೆ ಹಸಿವೆಯಿಂದ ಕುಳಿತಿದ್ದ ನಾನು, ಗೋಲು ಮೇಲೆ ಕೆಂಡಾಮಂಡಲವಾಗಿದ್ದೆ. ಮಂಡ್ಯ ತಲುಪಿದ ಮೇಲೆ ಪೂಜೆ ಮಾಡಲೇಬೇಕೆಂದು ಬಾಯಿ ಬಿಗಿ ಹಿಡಿದು ಕುಳಿತಿದ್ದೆ. ಮಂಡ್ಯ ತಲುಪಿದ್ದೇ ತಡ ಡ್ರೈವರಿಗೆ, ಗೋಲುಗೆ ಬಾಯಿಗೆ ಬಂದಂತೆ ಮಾತಾಡಿದೆ. ಮನೆವರೆಗೆ ಕಾರಲ್ಲಿ ಬಿಟ್ಟುಬರುವುದಾಗಿ ಗೋಲು ಕೇಳಿಕೊಂಡರೂ ಕಿವಿಗೊಡದೆ, ಮಂಡ್ಯ ಟೌನಿಗೆ ಮೊದಲೇ ಇಳಿದು ಮನೆಗೆ ನಡೆದುಕೊಂಡು ಹೋಗಿದ್ದೆ. ಮಧ್ಯಾಹ್ನವೇ ಮನೆಗೆ ಬಂದು ಕ್ಷಮೆ ಕೇಳಿ, ಇನ್ನು ಮುಂದೆಂದೂ ಹೀಗಾಗುವುದಿಲ್ಲವೆಂದು ಹೇಳಿದ.

ಮುಂದೆ ಕೆಲವೇ ತಿಂಗಳಲ್ಲಿ ನಾನು ಬೆಂಗಳೂರಿಗೇ ವಾಪಸು ಬಂದೆ. ಟಿ.ವಿ.ಯಲ್ಲಿ ಸುದ್ದಿ ಚಾನಲ್‌ಗಳು ಬಂದಾಗ ಪ್ರಮುಖ ಸುದ್ದಿ ಚಾನಲ್‌ವೊಂದು ಅವನನ್ನು ವರದಿಗಾರನಾಗಲು ಆಹ್ವಾನಿಸಿತ್ತು. ಅವನು ಪತ್ರಿಕೆ ಬಿಟ್ಟು ಟಿ.ವಿ.ಗೆ ಸೇರಿಕೊಂಡ. ಸಂಬಳ ಜಾಸ್ತಿ ಕೊಡ್ತಾರೇನೊ, ಗೋಲು ? ಎಂದು ಕೇಳಿದ್ದೆ. ಸ್ಪೆಷಲ್ ಸ್ಟೋರಿಗೆ ವಿಶೇಷ ಹಣ, ಮೆಡಿಕಲ್ ಅಲೊಯೆನ್ಸ್... ಹೀಗೆ ಏನೇನೊ ಹೇಳಿದ್ದ. ಬೆಂಗಳೂರಿಗೆ ಬಂದಾಗ ಮನೆಗೂ ಬರುತ್ತಿದ್ದ. ಕಚೇರಿಯಲ್ಲಿದ್ದರೆ ಅಲ್ಲಿಗೂ ಬಂದು ಹರಟೆ ಹೊಡೆದು ಹೋಗುತ್ತಿದ್ದ. ವಾರಕ್ಕೊಮ್ಮೆಯಾದರೂ ಫೋನಿನಲ್ಲಿ ಮಾತಾಡುತ್ತಿದ್ದೆವು. ವರ್ಷಗಳು ಉರುಳುತ್ತಿದ್ದವು. ಗೋಲು ಇಳಿದುಹೋಗಿದ್ದ. ಕೇಳಿದರೆ ವಯಸ್ಸಾಯಿತು, ಕೆಲಸ ಹೆಚ್ಚು. ಹೀಗೆ ಉತ್ತರ ಸಿದ್ಧವಿರುತ್ತಿತ್ತು. ಕಡೆಗೂ ಗದರಿದ ಮೇಲೆ ಡಾಕ್ಟರಲ್ಲಿಗೆ ಹೋದ. ''ಹೆಚ್ಚೇನು ತೊಂದರೆಯಿಲ್ಲ, ಸಕ್ಕರೆ ಕಾಯಿಲೆ ಇದೆ'' ಎಂದಿದ್ದರು ಡಾಕ್ಟರ್. ಈ ಸಲ ನಾನು ಅವನಿಗೆ ಸಿಗರೇಟು, ಮದ್ಯ ನಿಲ್ಲಿಸುವಂತೆ ಕಟ್ಟುನಿಟ್ಟಾಗಿ ಹೇಳಿದೆ. ಶುಗರ್ ನಾರ್ಮಲ್, ಬೆಳಗಿನ ವಾಕ್ ರೆಗ್ಯುಲರ್... ಹೀಗೆ ವರದಿ ಕೊಡುತ್ತಿದ್ದ.

''ಸಿಗರೇಟು ಬಿಟ್ಟಿದ್ದೀಯೇನೊ ? ಕುಡ್ತ ನಿಲ್ಲಿಸಿದೇನೊ ?''

''ಎಲ್ಲ ನಿಲ್ಲಿಸಿ ಬಹಳ ದಿನಗಳಾದವು. ಈಗ ಯಾವ ಹ್ಯಾಬಿಟ್ಟೂ ಇಲ್ಲ''

ಅವನ ಉತ್ತರದಿಂದ ನೆಮ್ಮದಿಯಾಯಿತು.

ಮತ್ತೊಂದು ದಿನ ಅವನ ಮೊಬೈಲಿಗೆ ಕರೆ ಮಾಡಿದೆ. ಎತ್ತಿಕೊಳ್ಳಲಿಲ್ಲ. ಲ್ಯಾಂಡ್‌ಲೈನಿಗೆ ಮಾಡಿದೆ. ಮುದ್ದೇಗೌಡ ತೆಗೆದುಕೊಂಡ. ಗೋಲು ಮೈಸೂರಿಗೆ ಹೋಗಿದ್ದ. ನಡೆದಾಡಲು ಆಯಾಸ, ಮಾತಾಡಲು ಆಯಾಸ. ಈಗ ಎರಡು ತಿಂಗಳಿಂದ ಟ್ರೀಟ್‌ಮೆಂಟ್‌ನಲ್ಲಿದ್ದಾನಂತೆ. ಲಂಗ್ಸ್‌ನಲ್ಲಿ ನೀರು ತುಂಬಿಕೊಳ್ಳುತ್ತಿದೆ. ಆ ನೀರು ತೆಗೆಸಿಕೊಂಡು ಬರಲು ಹೋಗಿರುವುದಾಗಿ ತಿಳಿಯಿತು. ಇದನ್ನು ಯಾಕೆ ಗುಟ್ಟು ಮಾಡಿದ ? ಇರಲಿ, ಸಂಜೆ ವಿಚಾರಿಸಿ ಕೊಳ್ಳಬೇಕು ಅಂದುಕೊಂಡೆ. ರಾತ್ರಿ ಅವನದೇ ಫೋನು.

''ಡೋಂಗಿಯೆಲ್ಲ ಸಾಕು. ಏನಾಗಿದೆ ಬೊಗಳು'' ರೇಗಿದೆ.

''ಎಲ್ಲ ಸರಿಯಾಗಿದೆ. ಲಂಗ್ಸ್‌ನಲ್ಲಿ ನೀರು ತುಂಬಿಕೊಳ್ತಿದೆ. ಅದೇನು ಮಹಾ ದೊಡ್ಡ ಸಮಸ್ಯೆಯಲ್ಲ, ಬೇಗ ವಾಸಿಯಾಗುತ್ತೆ.''

''ದೊಡ್ಡ ಸಮಸ್ಯೆಯೇ ಅದು. ನೀನು ನನ್ನ ಮನೆಗೆ ಬಾ. ಇಲ್ಲೆ ಒಳ್ಳೆ ವೈದ್ಯರಿಗೆ ತೋರಿಸೋಣ. ಚಿಕಿತ್ಸೆಗೆ ಹಣ ಇದೆಯೇನೋ ? ನಿನ್ನ ಟಿ.ವಿ.ಯವರು ಕಾಯಿಲೆ ವೆಚ್ಚ ನೋಡಿಕೊಳ್ತಾರಾ ? ಹಣಕ್ಕೆ ತೊಂದರೆಯಾದರೆ ಹೇಳು. ನಿನಗೆ ಯಾರೂ ಇಲ್ಲಾಂತ ನಿನ್ನ ಮೇಲೆ ನೀನೆ ಕರುಣೆ ತೋರಿಸಿಕೊಂಡು, ಕೇಳೋದು ಹೇಗೆ ಅಂತ ದಾಕ್ಷಿಣ್ಯ ಮಾಡಿಕೊಂಡು ಕೂರಬೇಡ.''

''ಹಾಗ್ಯಾಕೆ ಮಾಡಲಿ, ನಿನ್ನಂಥ ಸ್ನೇಹಿತರು ಇರುವಾಗ ?''

''ಯಾಕೆ ಅಂದ್ರೆ, ಅದು ನಿನ್ನ ಸ್ವಭಾವ. ಇಲ್ಲದಿದ್ದರೆ ಈಗ ಹೀಗಾಗಿರೋದು ನನ್ನಲ್ಲಿ ಹೇಳದೆ ಯಾಕೆ ಗುಟ್ಟು ಮಾಡುತ್ತಿದ್ದೆ ?''

ಅವನು ಮೌನವಾದ. ಮತ್ತೊಮ್ಮೆ ಹಣ ಬೇಕಿದ್ದರೆ ಕೊಡುತ್ತೇನೆಂದು ಹೇಳಿದೆ. ಅವನು ಸಮಯ ಬಂದಾಗ ಖಂಡಿತ ಕೇಳುವುದಾಗಿ ಹೇಳಿದ. ಮರು ವಾರ ಅವನಿಗೆ ಯಾವ ಸುದ್ದಿಯನ್ನೂ ಕೊಡದೆ, ನಾನು ಸ್ವಲ್ಪ ಹಣ ತೆಗೆದುಕೊಂಡು ಮಂಡ್ಯಕ್ಕೆ ಹೋದೆ. ಗೋಲು ನನ್ನ ನೋಡಿ ದಂಗಾಗಿ ಹೋದ. ಅವನ ಚರ್ಮ ಮೂಳೆಗೆ ಅಂಟಿಕೊಂಡಿತ್ತು. ಮುದುಕನಂತೆ ಕಾಣುತ್ತಿದ್ದ. ಹಿಂದಿನ ದಿನವಷ್ಟೆ ಅವನಿಗೆ ಎರಡು ಬಾಟಲಿ ರಕ್ತ ಕೊಟ್ಟಾಗಿತ್ತು. ಬಲವಂತ ಮಾಡಿ ಅವನ ಮೆಡಿಕಲ್ ರಿಪೋರ್ಟ್ ನೋಡಿದೆ. ಅವನಿಗೆ ಲಂಗ್ಸ್ ಕ್ಯಾನ್ಸರ್ ಆಗಿತ್ತು. ಇಪ್ಪತ್ತು ಸಾವಿರ ರೂಪಾಯಿ ಅವನಿಗೆ ಕೊಡಲು ಹೋದೆ. ಬೇಡವೇ ಬೇಡವೆಂದು ಹಟ ಮಾಡಿದ. ಅರ್ಜೆಂಟಿಗೆ ಇರಲಿ ಎಂದು ಅವನ ಮೇಜಿನ ಮೇಲಿಟ್ಟು ಬಂದೆ.

ಗೋಲು, ಅವನ ಕಾಯಿಲೆ ಬಗ್ಗೆ ಸುಳ್ಳು ಹೇಳೋದು ಗೊತ್ತಾಗಿ, ಮುದ್ದೇಗೌಡನಿಗೆ ಫೋನು ಮಾಡಿ ತಿಳಿದು ಕೊಳ್ತಿದ್ದೆ. ಟಿ.ವಿ.ಯಲ್ಲಿ ಅವನ ಸ್ಟೋರಿಗಳು ಬರುತ್ತಿದ್ದವು. ಈಗ ಚೇತರಿಸಿಕೊಳ್ಳುತ್ತಿದ್ದಾನೆ ಎಂದು ಮುದ್ದೇಗೌಡ ಹೇಳುತ್ತಿದ್ದ. ಈ ದಿನಗಳಲ್ಲೆ ಮುದ್ದೇಗೌಡ ಕಚೇರಿಗೆ ಬಂದು ಗೋಲು ಕಾಗದ ಕೊಟ್ಟಿದ್ದಾಗಿತ್ತು. ಇನ್ನೇನು ಅನಾಹುತವನ್ನು ಆ ಕಾಗದ ಹೇಳುತ್ತಿದೆಯೋ ಎಂದು ಗಂಟೆ ನೋಡಿದೆ. ಹತ್ತು! ಭಾರವಾದ ಮನಸ್ಸಿನಿಂದ ಆಫೀಸಿಗೆ ಹೋದೆ. ನನ್ನ ಎದೆ ಡವಗುಟ್ಟುತ್ತಿರುವುದು ನನಗೇ ಕೇಳುತ್ತಿತ್ತು. ಡ್ರಾಯರ್ ಎಳೆದು ಕವರು ಎತ್ತಿಕೊಂಡೆ.

''ಪ್ರೀತಿಯ ಶಿಲ್ಪ,

ನನಗೆ ಅರ್ಜೆಂಟಾಗಿ ಐವತ್ತು ಸಾವಿರ ಬೇಕಿತ್ತು. ಹೀಗೆ ಹಣ ಕೇಳುವುದು ನಿನ್ನಲ್ಲಿ ಮಾತ್ರ ನನಗೆ ಸಾಧ್ಯ. ಏನೂ ತಿಳ್ಕೊಳ್ಳಬೇಡ. ಎರಡು ತಿಂಗಳಲ್ಲಿ ಹಣ ಹಿಂದಿರುಗಿಸ್ತೇನೆ... ಪ್ರೀತಿಯ ಗೋಲು.''

ನನಗೆ ಹಿಂದಿನಿಂದ ಬಂದು ಯಾರೊ ಬೆನ್ನಿಗೆ ಬಲವಾಗಿ ಗುದ್ದಿದಂತಾಯಿತು. ಮೇಜು ಬದಿಯನ್ನು ಗಟ್ಟಿಯಾಗಿ ಹಿಡಿದು ನಿಂತುಕೊಂಡೆ. ರಾತ್ರಿ ಅವನು ಮಾಡಿದ ಫೋನು, ನಾನು ಕೊಟ್ಟ ಉತ್ತರ.... ಅದಕ್ಕೆ ಸರಿಯಾಗಿ ಅವನ ಸಾವು ! ರಜೆ ಬರೆದು ಮನೆಗೆ ಹಿಂದಿರುಗಿದೆ.

ರಾತ್ರಿ ಮುದ್ದೇಗೌಡನ ಫೋನಿಗೆ ಕಾಯುತ್ತಿದ್ದೆ. ಹನ್ನೆರಡು ಗಂಟೆಗೆ ಅವನ ಕರೆ ಬಂತು.

''ಮ್ಯಾಡಂ, ಎಲ್ಲ ಮುಗಿಯುವಾಗ ಸಂಜೆ ಐದು ಗಂಟೆ. ಶ್ರೀಧರ ಸರ್ ಅವರ ತಾಯಿ, ಅಣ್ಣ, ಅಕ್ಕ, ಮತ್ತೆ... ಅವರ ಹೆಂಡತಿ...''

ನಾನು ನಡುವೆ ಬಾಯಿ ಹಾಕಿ, ''ಯಾರ ಹೆಂಡತಿ ?'' ಎಂದು ಕೇಳಿದೆ.

''ಶ್ರೀಧರ ಸರ್ ಮದುವೆ ಆಗಿದ್ರಂತೆ ಮ್ಯಾಡಂ. ಅವರ ಅಕ್ಕನ ಮಗಳನ್ನೆ. ಒತ್ತಾಯದ ಮದುವೆಯಂತೆ. ಒಂದು ದಿನವೂ ಒಟ್ಟಿಗೆ ಬಾಳಲಿಲ್ಲವಂತೆ... ಪಾಪ ! ಅವರು ಶವದ ಹತ್ತಿರ ಸುಮ್ಮನೆ ಬಂದು ನಿಂತುಕೊಂಡಿದ್ರು. ಆದ್ರೆ ಹಿರಿಯರು ಬಿಡಬೇಕಲ್ಲ, ಅವರಿಗೆ ಏನೇನೊ ಶಾಸ್ತ್ರ ಮಾಡಿದರು.. ಇವತ್ತು ಸರ್ ಮೈಸೂರಿಗೆ ಏನೊ ಥೆರಪಿ ಮಾಡಿಸಿಕೊಳ್ಳೋಕೆ ಹೋಗಬೇಕಿತ್ತಂತೆ.... ಹಣ ಸಾಕಾಗಲಿಲ್ವಂತೆ. ರಾತ್ರಿ ಹನ್ನೊಂದು ಗಂಟೆ ಹೊತ್ತಲ್ಲಿ ಪಕ್ಕದ ಮನೆ ಕೆಲಸದವನನ್ನು ಕರೆದು, ಹಾಸಿಗೆಯನ್ನು ಮನೆ ಹೊರಗಡೆ ಜಗುಲಿಗೆ ಎತ್ತಿ ಕೊಡಲು ಹೇಳಿದ್ರಂತೆ. ಬೆಳಗಾಗುವವರೆಗೆ ಜೀವ ಇದ್ರೆ, ಬೆಳಿಗ್ಗೆ ಬಂದು ಹಾಸಿಗೆ ಒಳಗಿಟ್ಟುಕೊಡಲು ಹೇಳಿದ್ರಂತೆ. ಅದೇ ಅವರ ಕೊನೆ ಮಾತು... ಸರ್ ಜೊತೆ ನಾಲ್ಕು ವರ್ಷಗಳಿಂದ ಇದ್ದೇನೆ. ಆದ್ರೂ ಅವರು ಬಹಳ ಗುಟ್ಟಾಗಿ ಬದುಕಿದ್ರು ಮ್ಯಾಡಂ...'' ಮುದ್ದೇಗೌಡ ಅಳುತ್ತ ಮಾತಾಡುತ್ತಿದ್ದ ಹಾಗೆ ಅನಿಸಿತು. ಮುಂದೆ ಮಾತನಾಡಲಾಗದೆ ಫೋನು ಇಟ್ಟ.

ಗೋಲು... ಕಡೆಗೂ ನನಗೆ ಅರ್ಥವಾಗಲೇ ಇಲ್ಲ, ನಿಜ, ನಿಗೂಢವಾಗಿಯೆ ಬದುಕಿದ ! ಕಾಗದ ಬರೆದವನು... ''ನಿನ್ನೆ ಕಾಗದ ನೋಡಿದ್ಯ...?'' ಎಂದು ಒಂದು ಮಾತು ಕೇಳಿದ್ದರೆ... ಇನ್ನು ಸ್ವಲ್ಪ ಸಮಯ ಅವನು ಸಾವನ್ನ ಮುಂದೂಡುತ್ತಿದ್ದನೊ ಏನೊ... ಯೋಚಿಸಲೂ ಆಗದಷ್ಟು ನಾನು ಖಾಲಿ-ಖಾಲಿಯಾಗಿದ್ದೆ. ಗೋಲು ಎದೆಗೇ ಒದ್ದು ಹೋಗಿದ್ದ !

**ಕುಸುಮಾ ಶಾನುಭಾಗ**
ಫ್ಲಾಟ್ ನಂ. ೧೦, ೨ನೇ ಮಹಡಿ, ಎಂ.ಐ.ಜಿ., 'ಎಮ್' ಬ್ಲಾಕ್
ಸರ್‌ಕ್ಯೂಟರ್ ರಸ್ತೆ, ಸಿ-೩, ನಂದಿನಿ ಬಡಾವಣೆ
ಬೆಂಗಳೂರು - ೫೬೦ ೦೯೬

# ಪರಕೀಯತೆಗೆ ಪ್ರೇರಣೆ ನೀಡುವ ಪ್ರವೃತ್ತಿಗಳು

**ಎಂ. ಇಕ್‌ಬಾಲ್ ಹುಸೇನ್**

ಎಲ್ಲರ ಜೊತೆಯಲ್ಲಿ ನಾನು, ನನ್ನ ಜೊತೆ ಎಲ್ಲರೂ ಎಂದು ಭಾವಿಸಿದ್ದ ನನಗೆ ನಾನೇ ಬೇರೆ ಎಂದು ಗೊತ್ತಾಗಿದ್ದು ಶಾಲೆಯಲ್ಲಿ 'ಸರಸ್ವತಿ ಪೂಜೆ' ಮಾಡಿದಾಗ, ಸರಸ್ವತಿ ಪೂಜೆಗೆ ಎಲ್ಲಾ ವಿದ್ಯಾರ್ಥಿಗಳು ಚಂದಾ ಹಣವಾಗಿ ನಾಲ್ಕಾಣೆ ನೀಡಬೇಕೆಂದು ಕಡ್ಡಾಯ ಮಾಡಿದಾಗ. ನಾವು ಪೂಜಿಸದ ದೇವರನ್ನು ಅವರು ಪೂಜೆ ಮಾಡುತ್ತಾರೆ, ಮಾಡಿಕೊಳ್ಳಲಿ. ಆದರೆ ನಾನ್ಯಾಕೆ ಕಡ್ಲೆಉಂಡೆಗೆ ನಾಲ್ಕಾಣೆ ಕೊಡಲಿ? ಅಂಗಡಿಯಲ್ಲಿ ಒಂದಾಣೆಗೆ ಅಷ್ಟು ದೊಡ್ಡ ಕಡ್ಲೆಉಂಡೆ ಕೊಡುತ್ತಾರೆ ಎನ್ನಿಸಿತು. ಅದರಲ್ಲೂ ನಮ್ಮನ್ನೆಲ್ಲಾ ದೂರ ನಿಲ್ಲಿಸಿ ದಾನ ಕೊಡುವಂತೆ ಕೊಡುವ ಉಂಡೆಗೆ ಎನ್ನಿಸಿ ಸುಮ್ಮನಾಗಿದ್ದೆ. ಏನೇನೋ ಹೇಳಿ ನಾಲ್ಕು ಆಣೆ ಉಳಿಸಿ, ಮನೆಯಲ್ಲಿ ಅಪ್ಪನ ಬಳಿ ಪಡೆದಿದ್ದ ನಾಲ್ಕಾಣೆಯಲ್ಲಿ ಹೊರಗಡೆ ಉಂಡೆ, ಕಡ್ಲೆಕಾಯಿ, ಬತ್ತಾಸು ತಿಂದು ಮುಗಿಸಿದ್ದೆ. ಕಾಲೇಜಿನಲ್ಲಿ ಈ ಸಮಸ್ಯೆ ಇರಲಿಲ್ಲ, ಅಲ್ಲದೆ, ನಾವೇ ವಿದ್ಯಾರ್ಥಿ ಚಳುವಳಿ ನಾಯಕರು. ಹೀಗಾಗಿ ಹಳೆಯದನ್ನು ಮರೆತುಬಿಟ್ಟಿದ್ದೆ.

ಆದರೆ, ಸರಕಾರಿ ನೌಕರಿಗೆ ಸೇರಿದ ನಂತರ ಮತ್ತೆ ಸಮಸ್ಯೆ ಪ್ರಾರಂಭವಾಯಿತು. ಕಛೇರಿಯಲ್ಲಿ ಪ್ರತಿ ಶುಕ್ರವಾರ ಸಂಜೆ ಪೂಜೆ ಕಾರ್ಯಕ್ರಮ. ಪೂಜೆಯ ನಂತರ ಪ್ರತಿ ಟೇಬಲಿನ ಬಳಿ ಆರತಿ ತಟ್ಟೆ. ಪ್ರಸಾದ ರೂಪದಲ್ಲಿ ಕಾರಮಂಡಕ್ಕಿ, ಕೊಬ್ಬರಿ ಚೂರು. ಇದಕ್ಕಾಗಿ ಪ್ರತಿಯೊಬ್ಬ ಗುಮಾಸ್ತ ಸಂಬಳದ ದಿನ ಎರಡು ರೂಪಾಯಿ ಕೊಡಬೇಕು ಎಂದು ನಿಗದಿಪಡಿಸಿದ್ದರು. ಸಂಬಳದ ದಿನ, ನಾನು, ''ಎರಡು ರೂಪಾಯಿ ಕೊಡುವುದಿಲ್ಲ; ಅದರಲ್ಲಿ ನನಗೆ ನಂಬಿಕೆ ಇಲ್ಲ'' ಎಂದೆ. ಉಳಿದ ಸಹೋದ್ಯೋಗಿಗಳು ನನ್ನನ್ನು ಗುರಾಯಿಸಿ ನೋಡಿದರು. ಹಿಂದುಯೇತರ ನೌಕರರು ಕರೆದು, ''ಹಾಗೆಲ್ಲಾ ಮಾಡಬಾರದು, ನೀನು ಕಮ್ಯುನಿಸ್ಟ್ ಪಕ್ಷದಲ್ಲಿ ಇದ್ದೆಯಂತೆ, ಅದಕ್ಕೆ ಹೀಗೆಲ್ಲಾ ಮಾಡುತ್ತೀ, ಹಾಳಾಗಲಿ ಎಂದು ಎರಡು ರೂಪಾಯಿ ಬಿಸಾಕು. ಕಾರಮಂಡಕ್ಕಿ ತಿಂದೆವು ಎಂದು ಸುಮ್ಮನಿದ್ದರಾಯಿತು'' ಎಂದು ಸಮಾಧಾನ ಹೇಳಿದರು. ನಾನು, ''ನನಗೆ ಕಾರಮಂಡಕ್ಕಿ ಕೊಬ್ಬರಿಯೂ ಬೇಡ. ಎರಡು ರೂಪಾಯಿ ಕೊಡುವುದೂ ಬೇಡ'' ಎಂದು ತಿಳಿಸಿದೆ. ಸ್ವಲ್ಪ ದಿನ ಗೊಣಗಾಡಿದ ನಂತರ ಎಲ್ಲವೂ ತಣ್ಣಗಾಯಿತು. ಮಂಗಳಾರತಿ ತಟ್ಟೆ ನನ್ನ ಟೇಬಲನ್ನು ದಾಟಿಹೋಗುತ್ತಿತ್ತು, ಕಾರಮಂಡಕ್ಕಿ ಮಾತ್ರ ಇಡುತ್ತಿದ್ದರು. ಇದನ್ನು ನೋಡಿ ಕೆಲವು ನೌಕರರು ಪೂಜಾರಿಕೆ ಮಾಡುತ್ತಿದ್ದ ಗುಮಾಸ್ತನಿಗೆ ಲೆಕ್ಕ ಕೇಳಲು ಶುರು ಮಾಡಿದರು. ತಾಲೂಕು ಕಛೇರಿ ಎಂದರೆ ಆಗ ಖಜಾನೆ, ನೋಂದಣಿ ಇಲಾಖೆ, ಆಹಾರ, ಅಬಕಾರಿ ಹಾಗೂ ಸರ್ವೆ ಇಲಾಖೆಗಳು ತಹಸೀಲ್ದಾರರ ಉಸ್ತುವಾರಿಯಲ್ಲಿದ್ದವು. ಹೀಗಾಗಿ ದೊಡ್ಡ ಸಂಖ್ಯೆಯಲ್ಲಿದ್ದ ನೌಕರರಲ್ಲಿ ಎಲ್ಲಾ ಧರ್ಮದ ಜನರೂ ಇದ್ದೆವು. ಆದರೆ ಶುಕ್ರವಾರ ಹಾಗೂ ರಾಷ್ಟ್ರೀಯ ಹಬ್ಬಗಳಲ್ಲಿ, ರಾಷ್ಟ್ರಧ್ವಜಾರೋಹಣ ಸಮಯದಲ್ಲಿ, ಗಣಪತಿ, ಭಾರತಮಾತೆಯ ಪೂಜೆಯ ಹೆಸರಿನಲ್ಲಿ ನಡೆಯುತ್ತಿದ್ದ ಪೂಜೆ ಹಾಗೂ ಮಂಗಳಾರತಿ ಮುಜುಗರ ಉಂಟುಮಾಡುತ್ತಿತ್ತು. ಎಲ್ಲರೂ ಪೂಜೆ ಸಡಗರದಲ್ಲಿ ಭಾಗವಹಿಸುವಾಗ ನಾವು ಕೆಲವರು ದೂರದಲ್ಲಿ ಸುಮ್ಮನೆ ನೋಡುತ್ತಾ ನಿಲ್ಲುತ್ತಿದ್ದೆವು. ಪೀಕಲಾಟ ಎಂದರೆ ಸೂರ್ಯಪೂಜೆ ಅಥವಾ ಅಗ್ನಿಪೂಜೆಯ ಸಂಕೇತವಾದ ಮಂಗಳಾರತಿಯನ್ನು ಎಲ್ಲರೂ ಭಕ್ತಿಯಿಂದ ಎರಡೂ ಕೈಯಿಂದ ನಮಿಸಿ ಕಣ್ಣಿಗೆ ಒತ್ತಿಕೊಳ್ಳುವಾಗ ಪಕ್ಕದಲ್ಲಿ ಪರಕೀಯರಾಗಿ ನಿರ್ಲಿಪ್ತರಾಗಿ ಮುಂದಕ್ಕೆ ಹೋಗಿ ಎಂದು ಪೂಜಾರಿಗೆ ಸಂಕೇತ ನೀಡುವುದು.

ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ ಹಣೆಗೆ ಕುಂಕುಮ ಢಾಳಾಗಿ ಹಚ್ಚಿಕೊಂಡು 'ತಾಯಿ ಭುವನೇಶ್ವರಿ' ಮೆರವಣಿಗೆಯಲ್ಲಿ ಸಾಗುವ ವ್ಯಕ್ತಿಗಳಲ್ಲಿ, ಸ್ತಬ್ಧ ಚಿತ್ರಗಳಲ್ಲಿ ಅಲ್ಪಸಂಖ್ಯಾತರನ್ನು, ಪ್ರತಿನಿಧಿಸುವ ಯಾವ ಕುರುಹೂ ಕಾಣುವುದಿಲ್ಲ. ಬಿಜಾಪುರದ ಗೋಳಗುಮ್ಮಟ, ಬೀದರ್‌ನ ಸಾಂಸ್ಕೃತಿಕ ಕಟ್ಟಡ, ಕಲೆಗಳು, ಗುಲಬರ್ಗಾದ ವಿಶಿಷ್ಟ ಧ್ವನಿ ವ್ಯವಸ್ಥೆಯ (ಪಿಸುಗುಟ್ಟಿದರೂ ಮಸೀದಿಯ ಪ್ರತಿ ಮೂಲೆಗೆ ಕೇಳಿಸುವ) ಏಷಿಯಾ ಖಂಡದ ಎರಡನೇ ಅತಿವಿಸ್ತಾರದ ಮಸೀದಿ, ಸವಣೂರಿನ ನವಾಬರು, ಬಿಜಾಪುರದ ಸುಲ್ತಾನರು, ಟಿಪ್ಪು-ಹೈದರ್ ಇತ್ಯಾದಿ ಯಾರೂ, ಯಾವುದೂ ಕಾಣುವುದಿಲ್ಲ. ಬದಲಿಗೆ, ಹರಿಹರ ನಗರದಲ್ಲಿ ಪ್ರತಿವರ್ಷ ರಾಜ್ಯೋತ್ಸವ ಸಮಯದಲ್ಲಿ ಒಬ್ಬರು 'ಮದಕರಿ ನಾಯಕ'ನ ವೇಷ ಧರಿಸುತ್ತಿದ್ದರು. ಬಿಚ್ಚುಗತ್ತಿ ಹಿಡಿದು ಟ್ರ್ಯಾಕ್ಟರ್ ಟ್ರಾಲಿಯ ಮೇಲೆ ನಿಂತು ಸಾಗುತ್ತಿದ್ದ 'ಮದಕರಿ ನಾಯಕ'ರ ಮೆರವಣಿಗೆ ನೋಡಲು ಬೀದಿಬದಿ ನಿಂತಿರುತ್ತಿದ್ದ ಮುಸ್ಲಿಮರನ್ನು ಕಂಡ ತಕ್ಷಣ ಬಿಚ್ಚುಗತ್ತಿಯನ್ನು 'ಎಚ್ಚರಿಕೆ!' ಎನ್ನುವಂತೆ ಅವರತ್ತ ಗುರಿಮಾಡಿ, ಕಣ್ಣು ಅಗಲಿಸಿ ಮೀಸೆ ಹುರಿ ಮಾಡುತ್ತಿದ್ದ. ಮುಸ್ಲಿಮರೆಲ್ಲಾ, ''ನೋಡಿದೆಯಾ ಪೊಗರು, ಗೌರ್‌ಮೆಂಟಿನವರೇ ದುಡ್ಡು ಕೊಟ್ಟು ಸಾಬರನ್ನು ಹೆದರಿಸಲು ಇಂತಹ ಜಲ್ಸಾ ಮಾಡ್ತಾರೆ'' ಎಂದು ತಿರಸ್ಕಾರದಿಂದ ಹೋಗುತ್ತಿದ್ದರು. ಸಾಯಂಕಾಲದ ಸಾಂಸ್ಕೃತಿಕ ಕಾರ್ಯಕ್ರಮ ಕೂಡ ಆರೆಸ್ಸೆಸ್ ಕಾರ್ಯಕ್ರಮದಂತೆ ಪ್ರಾರ್ಥನೆ, ಪೂಜೆ, ನೃತ್ಯಗಳಿಂದ ತುಂಬಿರುತ್ತಿತ್ತು. ಇದರಿಂದಾಗಿ ಅಲ್ಪಸಂಖ್ಯಾತರು ಯಾರೂ ಆ ಕಡೆ ತಲೆ ಹಾಕಲು ಮನಸ್ಸು ಬಾರದಂತೆ ಅಘೋಷಿತ ಬೇಲಿ ನಿರ್ಮಾಣವಾಯಿತು.

ವಾರ, ಹದಿನೈದು ದಿನಗಳವರೆಗೆ ನಡೆಯುವ ಗಣಪತಿ ಉತ್ಸವ, ಮೆರವಣಿಗೆ, ದಸರಾ ಸಮಯದಲ್ಲಿ ದುರ್ಗಾ ಪೂಜೆಯ ನೆಪದಲ್ಲಿ ಕಟ್ಟುವ ಭಗವಾಧ್ವಜಗಳು, ವಿಜಯದಶಮಿಯ ಪಥಸಂಚಲನ, ಇದನ್ನು ಆಶೀರ್ವದಿಸುವ ಸ್ವಾಮೀಜಿಗಳ ಗುಂಪು, ಸಾರ್ವಜನಿಕ ರಸ್ತೆಗಳನ್ನು ಆಕ್ರಮಿಸಿಕೊಂಡು ಹಾಕುವ ಪೆಂಡಾಲು, ಬಿತ್ತರಿಸುವ ಕರ್ಕಶ ಹೊಸ ಸಿನಿಮಾ ಸಂಗೀತ – ಜನಗಳ ನೆಮ್ಮದಿ, ಪ್ರಶಾಂತತೆಯನ್ನು ಹಾಳು ಮಾಡುವುದಲ್ಲದೆ, ಇಲ್ಲಿ ನಾವು ಏನು ಮಾಡಿದರೂ ನಡೆಯುತ್ತೆ ಎನ್ನುವ ವರ್ತನೆಗಳು ಉಳಿದವರ ಮನದಲ್ಲಿ ಅಸಮಾಧಾನಗಳಿಗೆ ಮೂಲವಾಗುತ್ತವೆ. ಪಟಾಕಿ, ಡೊಳ್ಳು, ಬ್ಯಾಂಡು, ಹಾಡು, ಅಸಭ್ಯ ಕುಣಿತ, ಸಾಂಸ್ಕೃತಿಕ ಮೆರವಣಿಗೆಯ ಬದಲಿಗೆ ಭಯೋತ್ಪಾದನಾ ಮೆರವಣಿಗೆಯಾಗಿ ತೋರುತ್ತದೆ. ಧ್ವನಿವರ್ಧಕ ''ಮಂದಿರ್ ವಹೀಂ ಬನಾಯೇಂಗೆ...'' ಎಂಬ ಕೂಗು ಮೂರು ಬೀದಿಗಳನ್ನು ದಾಟುವಂತೆ ಮೊಳಗುತ್ತೆ. ಉತ್ಸವಗಳು, ಮೆರವಣಿಗೆಗಳು ದೇಶದ ಬಹುಸಂಖ್ಯಾತರು ಹಾಗೂ ಅಲ್ಪಸಂಖ್ಯಾತರ ನಡುವೆ ಬಹುದೊಡ್ಡ



ಕಂದಕವನ್ನು ಸೃಷ್ಟಿಸುತ್ತಾ ನಡೆದಿವೆ. ಅವರೇ ಬೇರೆ, ನಾವೇ ಬೇರೆ ಎನ್ನುವ ಭಾವನೆಗಳನ್ನು ಬಲಗೊಳಿಸುತ್ತಿವೆ.

ಇಂತಹ ಅವಾಂತರಗಳಿಗೆ ಮುಸ್ಲಿಮರೇನೂ ಹೊರತಲ್ಲ. ಹಿಂದುಗಳು ಅವರ ಹಬ್ಬದಲ್ಲಿ ಮಾಡಿದರು ಎಂದೇ ಮುಸ್ಲಿಮರು 'ಈದ್-ಮಿಲಾದ್', 'ಉರುಸ್'ಗಳ ಸಂದರ್ಭಗಳಲ್ಲಿ ತಮ್ಮ ತಾಕತ್‌ನ ಪ್ರದರ್ಶನಕ್ಕೆ ಇಳಿಯುತ್ತಾರೆ. ಯಾವ ಮುಸ್ಲಿಂ ರಾಷ್ಟ್ರಗಳಲ್ಲಿಯೂ ಇಲ್ಲದ ರೀತಿ-ರಿವಾಜು ಮಾಡುತ್ತಾರೆ. ಈದ್-ಮಿಲಾದ್ ಪೈಗಂಬರರ ಜನ್ಮ ದಿನಾಚರಣೆ. ಅಂದು ಪೈಗಂಬರರು ಬೋಧಿಸಿದ ಶಾಂತಿ, ಪ್ರೀತಿ, ಸಹಬಾಳ್ವೆಗಳ ಆದರ್ಶಗಳನ್ನು ಪ್ರಚುರಪಡಿಸುವ ಬದಲು ತಮ್ಮ ದ್ವಿಚಕ್ರ, ಆಟೋ, ಲಾರಿ, ಮಿನಿ ವಾಹನಗಳು, ಅಪಾರ ಜನಸಂದಣಿಯಿಂದ ಸಂಚಾರವನ್ನು ಅಸ್ತವ್ಯಸ್ತಗೊಳಿಸುತ್ತಾರೆ. ಘೋಷಣೆಗಳನ್ನು ಕೂಗುತ್ತಾ ಕುಣಿದಾಡುತ್ತಾರೆ. ಸಾರ್ವಜನಿಕರಿಗೆ ತೊಂದರೆ, ಕಿರಿಕಿರಿ, ವಿಳಂಬ ಉಂಟುಮಾಡುತ್ತಾರೆ. ಇದನ್ನು ನೋಡುವ ಉಳಿದವರಿಗೆ ಸಹಜವಾಗಿ ಅಸಮಾಧಾನ ಉಂಟಾಗುತ್ತದೆ. ಈಗ ಕ್ರಿಶ್ಚಿಯನ್ನರೂ ಇವರನ್ನು ಅನುಸರಿಸಿ 'ಮೇರಿ ಜಾತ್ರೆ' ಮೆರವಣಿಗೆ ಮಾಡುತ್ತಿದ್ದಾರೆ. ಸಣ್ಣ ಪಟ್ಟಣ, ನಗರಗಳಿಗೂ ಈ ಖಾಯಿಲೆ ವ್ಯಾಪಿಸುವಂತೆ ವ್ಯವಸ್ಥಿತವಾಗಿ ಎಲ್ಲಾ ಧರ್ಮದವರೂ ನಡೆದುಕೊಳ್ಳುತ್ತಿದ್ದಾರೆ.

ಇನ್ನು ವಿಧಾನಸೌಧದಿಂದ ಪ್ರಾರಂಭಿಸಿ, ಸರ್ಕಾರದ ಮಂತ್ರಿಗಳು, ಶಾಸಕರು, ಜನಪ್ರತಿನಿಧಿಗಳು ಯಾವುದೇ ಕಾರ್ಯಕ್ರಮ ಉದ್ಘಾಟನೆ, ಗುದ್ದಲಿ ಪೂಜೆ, ಭೂಮಿ ಪೂಜೆ, ಪುರೋಹಿತರು, ಹೋಮ ಹವನಗಳಿಂದಲೇ ಪ್ರಾರಂಭವಾಗಬೇಕು ಎನ್ನುವ ಸಂಪ್ರದಾಯ ಬೆಳೆದಿದೆ. ಸಾವಿರಾರು ಸರ್ಕಾರಿ ಕಛೇರಿಗಳು, ಪೊಲೀಸ್ ಠಾಣೆಗಳು ಅನಧಿಕೃತ ದೇವಸ್ಥಾನಗಳ, ಅರ್ಚಕರ ಆಶ್ರಯತಾಣಗಳಾಗಿವೆ. ಹಿಂದೆ ಬ್ರಿಟಿಷರ ಕಾಲದಲ್ಲಿ ನೂತನವಾಗಿ ಕಟ್ಟುತ್ತಿದ್ದ ಪ್ರತಿ ಪೊಲೀಸ್ ಕಾಲನಿಗಳಲ್ಲಿ ದೇವಸ್ಥಾನ, ಮಸೀದಿ, ಅಗತ್ಯಬಿದ್ದರೆ ಚರ್ಚ್ ಅಥವಾ ಗುರುದ್ವಾರಗಳಿಗೂ ಜಾಗ ಮೀಸಲು ಇಡುತ್ತಿದ್ದರು ಇಲ್ಲವೇ ಕಟ್ಟಿಸುತ್ತಿದ್ದರು. ಈಗ ದೇವಸ್ಥಾನಗಳನ್ನು ಅಪಾರ್ಟ್‌ಮೆಂಟುಗಳ ಅಂಗಳದಲ್ಲಿಯೇ ವಿಶಾಲವಾಗಿ, ಸುಂದರವಾಗಿ ಕಟ್ಟಲಾಗುತ್ತಿದೆ. ಇದರ ಅರ್ಥ ಇಲ್ಲಿ ಉಳಿದವರಿಗೆ ಜಾಗವಿಲ್ಲ ಎನ್ನುವುದು.

ರಾಜ್ಯ ಸರ್ಕಾರದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಆಯಾ ಡಿಪೋಗಳಿರುವ ಪ್ರದೇಶಗಳ ದೇವರು ಬಸ್ಸಿನಲ್ಲಿ ಆವಾಹನೆಯಾಗಿರುತ್ತಾನೆ. ಧರ್ಮಸ್ಥಳದ ಮಂಜುನಾಥ, ಯಡಿಯೂರು ಸಿದ್ಧಲಿಂಗೇಶ್ವರ, ಕೊಲ್ಲೂರು ಮೂಕಾಂಬಿಕೆಗಳ ರಕ್ಷಣೆಯಲ್ಲಿ ಕೆಲವು ಬಸ್ಸುಗಳು ಸಾಗಿದರೆ ಉಳಿದವು ಅವರವರ ಭಕ್ತಿಗೆ ತಕ್ಕಂತೆ ಡ್ರೈವಿಂಗ್ ಸೀಟಿನ ಮುಂಭಾಗದಲ್ಲಿ ದೇವರ ಪಟಗಳನ್ನು ಹಾಕಿ, ವಿಭೂತಿ, ಕುಂಕುಮಗಳಿಂದ ಅಲಂಕರಿಸಿರುತ್ತಾರೆ. ಅಪರೂಪಕ್ಕೆ ಕೆಲವರು ಎಲ್ಲಾ ಧರ್ಮಗಳ ಸಂಕೇತವಾಗಿ ಫೋಟೋ ಹಾಕಿರುತ್ತಾರೆ.

ಸಾರ್ವಜನಿಕ ಆಸ್ಪತ್ರೆಯ ವಾರ್ಡುಗಳಲ್ಲಿ ಸಹ ದೇವರಿದ್ದಾನೆ. ಖಾಸಗಿ ನರ್ಸಿಂಗ್ ಹೋಂಗಳು ಅವರ ಸ್ವಂತ ಮನೆಗಳು. ಈಗ ತುಮಕೂರು ವಿಶ್ವವಿದ್ಯಾಲಯ ತನ್ನ ಅಧಿಕೃತ ಲಾಂಛನವಾಗಿ 'ಸರಸ್ವತಿ' ದೇವತೆಯನ್ನು ವಿಶ್ವವಿದ್ಯಾಲಯದ ಸ್ವಾಗತ ಕಮಾನು, ಕಟ್ಟಡ, ಆಡಳಿತದಲ್ಲಿ ಬಳಸಿಕೊಂಡಿದೆ. ವಿಶ್ವವಿದ್ಯಾಲಯಕ್ಕೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ತಾವು ಪದವಿ ಪಡೆಯಲು 'ಸರಸ್ವತಿ'ಯ ಕರುಣೆ, ಕೃಪೆ ಪಡೆಯಬೇಕು ಎನ್ನುವ ಸಂದೇಶವನ್ನು ಮಾನ್ಯ ವಿದ್ಯಾ ಸಚಿವರು, ಕುಲಪತಿ, ಉಪ-ಕುಲಪತಿಗಳು ನೀಡಿದ್ದಾರೆ.

ಹೀಗೆ, ಬದುಕಿನ ಪ್ರತಿ ಹೆಜ್ಜೆ, ಪ್ರತಿ ಕ್ಷೇತ್ರ, ಸರಕಾರ, ಸಾಹಿತ್ಯ, ಸಂಸ್ಕೃತಿ, ಪತ್ರಿಕೋದ್ಯಮ, ದೂರದರ್ಶನ, ಇತ್ಯಾದಿಗಳು ನಮಗೆ ಮತ್ತೆ ಮತ್ತೆ ನೆನಪಿಸುವ ಸಂಗತಿಗಳು ಎಂದರೆ, ''ನೀನು ಎಲ್ಲರ ನಡುವೆ ಇದ್ದರೂ, ಈ ರಾಜ್ಯದ, ದೇಶದ ಪ್ರಜೆಯೇ ಆಗಿದ್ದರೂ ನಿನ್ನ ಸಂಸ್ಕೃತಿ, ಧರ್ಮ ಹಾಗೂ ದೇಶದ ಆಡಳಿತದಲ್ಲಿ ನೀನು ವಹಿಸುವ ಪಾತ್ರ ಬೇರೆ'' ಎಂಬುದು. ''ಈ ದೇಶದ ಬಹುಸಂಖ್ಯಾತರಾದ ನಾವೇ ಬೇರೆ. ಧಾರ್ಮಿಕವಾಗಿ ಬಹುಸಂಖ್ಯಾತರು ನಮ್ಮ ಎದುರಾಳಿಗಳು, ನಮ್ಮನ್ನು ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಸರ್ವರೀತಿಯಲ್ಲಿಯೂ ತುಳಿಯುತ್ತಿದ್ದಾರೆ. ನಮ್ಮ ಅಸ್ಮಿತೆಯನ್ನು ನಾವು ಉಳಿಸಿಕೊಳ್ಳದಿದ್ದರೆ ಈ ದೇಶದಲ್ಲಿ ನಮಗೆ ಉಳಿಗಾಲವಿಲ್ಲ'' – ಹೀಗೆ ಪ್ರತಿ ಅಲ್ಪಸಂಖ್ಯಾತ ಮನದಲ್ಲಿ ಮೂಡುವ ಈ ಅಸಂತೋಷ ಅಸಹನೆಯಾಗಿ, ಅಸಹನೆ ದ್ವೇಷ-ಕ್ರೋಧಗಳಾಗಿ, ಕೋಮು-ಗಲಭೆಗಳಿಗೆ ಕಿಡಿ ಹತ್ತಿಸುತ್ತದೆ. ದೇಶದ ಏಕತೆ, ಸಮಗ್ರತೆ, ಸಮಾನತೆಗಳಿಗೆ ಬಿರುಕು ಮೂಡಿಸುತ್ತದೆ.

ಪರಕೀಯತೆ ಬೆಳೆಯುತ್ತಾ ಹೋದಂತೆ, ನಾವು ಎಲ್ಲರೂ ಈ ದೇಶದ ಈ ಮಣ್ಣಿನ ಮಕ್ಕಳು ಎನ್ನುವ ಸಮಷ್ಟಿ ಪ್ರಜ್ಞೆ ಮಾಯವಾಗುತ್ತದೆ. ಆ ರೀತಿಯ ದುರಂತ ಘಟಿಸದಂತೆ ಜಾಗರೂಕತೆ ವಹಿಸುವುದು, ಪರಕೀಯ ಪ್ರಜ್ಞೆಗೆ ಪ್ರೇರಣೆ ನೀಡುವ ಸಂಗತಿಗಳನ್ನು ನಿಯಂತ್ರಿಸುವುದು ದೇಶದ ಹಿತದೃಷ್ಟಿಯಿಂದ ಒಳ್ಳೆಯದು.

ಎಂ. ಇಕ್‌ಬಾಲ್ ಹುಸೇನ್
ಅಡ್ವೋಕೇಟ್, ನಂ. ೫ಎ, ೧ನೇ ಮಹಡಿ, ೨ನೇ ಮುಖ್ಯರಸ್ತೆ, ೧ನೇ ಬ್ಲಾಕ್, ಆರ್. ಟಿ. ನಗರ, ಬೆಂಗಳೂರು-೫೬೦೦೩೨

# ಮಣ್ಣ ಹುಳು



- ೧ -

ಮಣ್ಣ ಹುಳು ನಾನು
ಹಕ್ಕಿಗಳು ಕುಕ್ಕಿ ರುಚಿ ನೋಡಿವೆ
ವಿಲವಿಲನೆ ಒದ್ದಾಡಿ
ಮತ್ತೆ ಚಿಗುರಿಕೊಂಡಿದ್ದೇನೆ
ಸತ್ತಿರುವುದು ನನ್ನ ನೆರಳಷ್ಟೆ.

- ೨ -

ಮಣ್ಣ ಹುಳು ನಾನು ಸಾಗಲಾರೆ
ತೆವಳುತ್ತೇನೆ
ಅಪ್ಪಿಕೊಂಡಿದೆ ನನ್ನ
ನೆಲವು ಚಾಚಿದ ಬೇರು,
ನನ್ನದೊಂದು ಸಣ್ಣ ಪ್ರಪಂಚ
ತಲೆಯೆತ್ತಿ ನೋಡಿದೆ ಒಮ್ಮೆ
ಆಕಾಶವೂ ಸಹ
ತೀರಾ ಚಿಕ್ಕದಲ್ಲವೇ ?

- ೩ -

ಮಣ್ಣ ಹುಳು ನಾನು
ಭೂಮಿ ಬಾಯ್ತೆರೆದಿದೆ
ಸಂಕೇತಗಳಿಲ್ಲದ ನನ್ನ ವೇದನೆಗೆ
ನಾನು ಅಳುವುದಿಲ್ಲ
ನಗುತ್ತೇನೆ
ಯಾವ ಅರ್ಥವೂ ಇಲ್ಲ
ನನ್ನ ಅಭಿವ್ಯಕ್ತಿಗೆ !

- ೪ -

ಮಣ್ಣ ಹುಳು ನಾನು
ಬದುಕುವುದು ನನ್ನ ಧರ್ಮ
ಹಸಿವು ನನಗೆ
ಮಣ್ಣಿನಲಿ ಸುಖ ಕೊಟ್ಟಿದೆ,
ನನ್ನ ಹಸಿವೆಗೆ ಭಗವಂತನ
ಒಡಲು ಸಿಕ್ಕಿದೆ !

ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೧೫,
ಶಿರಸಿ (ಉತ್ತರ ಕನ್ನಡ)



ಇಲೆಕ್ಟ್ರಾನಿಕ್ ಕ್ರಾಂತಿಯಿಂದ ಸುಲಭ ಲಭ್ಯ ಬೆಲೆಯಲ್ಲಿ ವಾಚ್ ಮತ್ತು ಗಡಿಯಾರಗಳು ಲಭ್ಯವಿರುವ ಈ ದಿನಗಳಲ್ಲಿ ವಾಚ್ ಕಟ್ಟದ ವ್ಯಕ್ತಿಯೇ ಇಲ್ಲ. ಕಳ್ಳೇಕಾಯಿ, ತರಕಾರಿ, ಹಾಲು ಮಾರುವವರಿಂದ ಕಸಗುಡಿಸುವವರು, ಪುರೋಹಿತರು, ಅಡುಗೆ ಭಟ್ಟರೆಲ್ಲರೂ ಕಾಲರಾಯನ ಭಕ್ತರೇ! ನಿಯಮಿತವಾದ ಅವಧಿಗಿಂತ ತಮ್ಮ ಸಮಯದ ಒಂದು ನಿಮಿಷವೂ 'ಬಿಟ್ಟಿ' ಸರಕಾರಿ ಸೇವೆಗೆ ವ್ಯರ್ಥವಾಗಕೂಡದು ಎಂದು ದೃಢವಾಗಿ ನಂಬಿರುವಂಥ, ನೇಮ-ನಿಷ್ಠೆಯಲ್ಲಿ ಅಪೂರ್ವ ವಿಶ್ವಾಸವಿಟ್ಟ ನೌಕರರಂತೂ ಐದು ಗಂಟೆಗೇ ಆಫೀಸು ಬಿಡುವದು ಅನಿವಾರ್ಯವಲ್ಲವೇ? ಹೀಗಾಗಿ ಕಾಲರಾಯನನ್ನು ಮುಂಗೈ ಮೇಲೆಯೇ ಇರಿಸಿಕೊಂಡು ಪುನಃ ಪುನಃ ಕಣ್ತುಂಬ ನೋಡುವದು, ಜೀವನದ ಅತಿ ಮುಖ್ಯ ಅವಶ್ಯಕತೆಯಾಗಿ ಬಿಡುವದು ಸುಳ್ಳಲ್ಲ!

ನಮ್ಮ ರಾಯರಿಗೆ ಕಾಲರಾಯನ ನಿರ್ಬಂಧ ಎಂದೂ ಬಾಧಿಸಿಲ್ಲ. ಇತ್ತೀಚೆಗಂತೂ ಕೆಲ ವರ್ಷಗಳಿಂದ ವಾಚ್ ಧರಿಸುವದಿಲ್ಲ. ಅವರು ದುಡ್ಡು ಕೊಟ್ಟು ಕೊಂಡ ಪ್ರಥಮ ವಾಚು, ಕೊನೆಯದೂ ಆಗಿ ಪರಿಣಮಿಸಿದ ವಿಚಾರ ರೋಚಕ ವಾಗಿದೆ. ಅದು ಮೂವತ್ತೈದು ವರ್ಷ ಕಾಲ ಎಡಬಿಡದೇ ಇವರ ಸೇವೆ ಮಾಡಿತ್ತು. ಒಂದೇ ಬಾರಿಗೆ ರಿಪೇರಿಗೆ ಒಳಪಟ್ಟ ಆ ಸ್ಯಾಂಡೋಜ್ ವಾಚು, ಈ ಅಪರೂಪದ ಅಲೆಮಾರಿ ಯೊಡನೆ ಪ್ರಪಂಚವೆಲ್ಲ ಸುತ್ತಾಡಿ ಬಂದಿತು. ಅಮೆರಿಕ, ಯೂರೋಪ್, ಈಜಿಪ್ಟ್, ಪಾಕಿಸ್ತಾನಗಳಲ್ಲದೇ ನಮ್ಮವೇ ಮಹಾರಾಷ್ಟ್ರ, ರಾಜಸ್ಥಾನ, ಪಶ್ಚಿಮ ಬಂಗಾಲ, ಬಿಹಾರ, ಮಧ್ಯಪ್ರದೇಶ, ಹಿಮಾಚಲ ಪ್ರದೇಶಗಳ ಕಾಡು-ಮೇಡು

# ಕಾಲಾತೀತರೊಡನೆ

ಗಳಲ್ಲೆಲ್ಲ ಸುತ್ತಾಡಿತು. ಕೊನೆಗೊಮ್ಮೆ ನಮ್ಮ ಹೆಮ್ಮೆಯ ಕರ್ನಾಟಕದಲ್ಲೇ ಕೊಡಚಾದ್ರಿ ಶಿಖರಾರೋಹಣ ಮಾಡಿ ಯಾವುದೋ ಕುಗ್ರಾಮದಲ್ಲಿ ಇದ್ದಕ್ಕಿದ್ದ ಹಾಗೆ ಕಣ್ಮರೆಯಾಗಿಬಿಟ್ಟಿತು! ಏಕೆ? ಹೇಗೆ? ಯಾವಾಗ? ಈ ದೀರ್ಘಕಾಲದ ಒಡನಾಡಿ, ಇವರನ್ನು ಯಾಕೆ ತ್ಯಜಿಸಿಬಿಟ್ಟಿತು? ಅದು ಇವತ್ತಿಗೂ ಗೂಢವಾಗಿದೆ!

ಈ ದುಃಖದ ಸಮಾಚಾರವನ್ನು ಅವರು ಟ್ರಿಪ್ಪಿನಿಂದ ಮರಳಿ ಬಂದು ಹೇಳಿದಾಗ ನನಗೆ ಸಹಾನುಭೂತಿ ತೋರಿಸಲಾಗಲಿಲ್ಲ! ಬದಲು, ಸಂತೋಷದಿಂದ ಆ ಕಳ್ಳನನ್ನು ಒಳಗೊಳಗೇ ಅಭಿನಂದಿಸಿದೆ. ಈ ನೆವದಿಂದಲಾದರೂ ರಾಯರು ತಮ್ಮ ದಷ್ಟಪುಷ್ಟ ವ್ಯಕ್ತಿತ್ವಕ್ಕೆ, ಬಲಿಷ್ಠವಾದ ಮುಂಗೈಗೆ ಅತ್ಯಾಧುನಿಕ ಹೊಸ ವಾಚ್ ಒಂದನ್ನು ಕೊಂಡಾರು, ಎಂದು ಖುಷಿಪಟ್ಟೆ.

ಆದರೆ ನನಗೆ ಘೋರ ನಿರಾಶೆ ಕಾದಿತ್ತು. ಅವರ ಎಡಮುಂಗೈಯನ್ನು ಅಲಂಕರಿಸುವ, ದೇಹವನ್ನು ಸ್ಪರ್ಶಿಸುವ ಯೋಗ್ಯತೆ ಯಾವ ವಾಚಿಗೂ ಲಭಿಸಲಿಲ್ಲ! ಅವರಿಗೆ ಅದರ ಅವಶ್ಯಕತೆಯೇ ಇಲ್ಲವೆಂಬ ಕಠೋರ ಸತ್ಯ, ದಿನಗಳೆದಂತೆ ಸ್ಪಷ್ಟವಾಗತೊಡಗಿತು. ವೃತ್ತಿಯಿಂದ ವೈಜ್ಞಾನಿಕ ಛಾಯಾಚಿತ್ರಕಾರರಾಗಿದ್ದ ನನ್ನವರಿಗೆ ಪ್ರತಿ ಸೆಕೆಂಡಿನ ೧/೧೦೦ ಅಂಶದ ಸಮಯಪ್ರಜ್ಞೆ ಮೈಗೂಡಿ ಹೋಗಿದೆ. ಕತ್ತಲೆಕೋಣೆಯಲ್ಲಿ ಗಂಟೆಗಟ್ಲೆ ಆಯಾ ಫೋಟೊಗಳಿಗೆ ರೂಪುಗೊಳ್ಳಲು ಬೇಕಾದ ಅವಧಿಯ ಬಗ್ಗೆ ಸಂಪೂರ್ಣ ಜ್ಞಾನವಿದೆ. ಅರೆಕ್ಷಣದಲ್ಲಿ ದ್ರಾವಕಗಳಲ್ಲಿ ಅದ್ದಿಸಿಕೊಂಡು ಮೂಡಿಬರುವ ಚಿತ್ರಗಳ ಒಡನಾಟದಿಂದಾಗಿ ಪ್ರತಿವರ್ಗದ ಚಿತ್ರಗಳಿಗೆ ಬೇಕಾದ ನಿರ್ದಿಷ್ಟ ಅರೆಕ್ಷಣದ ಅಂಶವನ್ನೂ ಲೀಲಾಜಾಲವಾಗಿ ಮೈಗೂಡಿಸಿಕೊಂಡಿದ್ದಾರೆ. ಇದಕ್ಕೆಲ್ಲ ವಾಚಿನ 'ಕೃತ್ರಿಮ' ಸಹಾಯ ಅವರಿಗೆ ಬೇಕಿಲ್ಲ.

ಅದೇನು ಈ ಸಮಯಪ್ರಜ್ಞೆಯು ಡಾರ್ಕ್‌ರೂಮಿನ ಸಹವಾಸದಲ್ಲಿ ಅಷ್ಟೆ ಎಂದು ಭಾವಿಸಬೇಡಿ! ಯಾವ ಕಾಲದಲ್ಲಿ ಅವರಿಗೆ ವೇಳೆ ಎಷ್ಟು, ಎಂದು ವಿಚಾರಿಸಿ! ಅರೆಕ್ಷಣದಲ್ಲಿ ಹೇಳಿಬಿಡುತ್ತಾರೆ. ವಾಚುಗಳು ಇಷ್ಟೊಂದು ಪ್ರಚಲಿತವಿರದ ವರ್ಷಗಳಲ್ಲಿ, ಹಳ್ಳಿಯ ದಾರಿಹೋಕರು ಇವರನ್ನು ವೇಳೆ ಎಷ್ಟೆಂದು

ನಿವೃತ್ತಿಯ ನಂತರ ನಡೆಯುವ ಸತ್ಕಾರ, ಗೌರವಕೂಟಗಳಲ್ಲಿ ಉಡುಗೊರೆಯಾಗಿ ಮೂರು ಗೋಡೆ ಗಡಿಯಾರಗಳು ಬಂದವು. ಕಾಯಂ ಮುಂದೆ ಓಡುವ ಒಂದನ್ನು ಅತಿಥಿ ಗಳಿಗೆ ಮೀಸಲಿದ್ದ ಸೋಫಾ ಎದುರುಗೋಡೆಗೆ ರಾಯರು ಜೋಡಿಸಿದರು, ಕೆಲಸ ಮುಗಿಸಿ ಬೇಗ ಹಿಂದಿರುಗಲು ಅವರಿಗೆ ಸಹಾಯವಾಗಲಿ ಎಂದು! ಇನ್ನೊಂದನ್ನು ಡ್ರೆಸಿಂಗ್ ಟೇಬಲ್ ಎದುರಿಗೆ ಫಿಕ್ಸ್ ಮಾಡಿದರು. ಸಮಯದ ಲಭ್ಯತೆ, ಬಂದವರ ಮೇಕಪ್-ಅಲಂಕಾರ ಗಳಿಗೆ ಒದಗಲೆಂದು! ಮೂರನೆಯದನ್ನು ಟಾಯ್ಲೆಟ್‌ಗೆ ಜೋಡಿಸುವುದರಲ್ಲಿದ್ದರು! ನಾನು ಬಲವಾಗಿ ಪ್ರತಿಭಟಿಸಿದೆ. ಕೊನೆಗೆ ಅದು ಕಾಯಂ ನಿರುದ್ಯೋಗಿಯಾಗಿರುವ ನಿವೃತ್ತಳ ಬರೆಯುವ ಟೇಬಲ್ ಮೇಲೆ ಸಂಭ್ರಮದಿಂದ ವಿರಾಜಮಾನವಾಯಿತು.

ಡಾ|| ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್

ಕೇಳಿದ್ದುಂಟು. ವಾಚಿನ ಕಡೆಗೆ ನೋಡದೆಯೇ ಹೇಳಿಬಿಡುವರು. ಜೊತೆಗಿದ್ದ ನಾನು ನನ್ನ ವಾಚ್ ನೋಡಿದರೆ ಸರಿಯಾಗಿಯೇ ಇರುತ್ತಿತ್ತು.

ಒಮ್ಮೊಮ್ಮೆ ಮಧ್ಯರಾತ್ರಿ ಎಚ್ಚರವಾಗಿ, ಟಾಯ್ಲೆಟ್ಟಿಗೆ ಹೋಗಬೇಕಾದ್ದು ಅನಿವಾರ್ಯವಾಗುತ್ತದೆ. ಸೂಕ್ಷ್ಮ ನಿದ್ರೆಯ ಇವರು ಆ ಕೂಡಲೇ ಎಚ್ಚರವಾಗಿ ಬರವಣಿಗೆ ಪ್ರಾರಂಭಿಸಿಬಿಡುತ್ತಾರೆ. ಕಣ್ಣುಬಿಡುವುದಕ್ಕೆ ಮೊದಲೇ ''ಈಗ ಎಷ್ಟು ವೇಳೆ ಇರಬಹುದ್ರಿ ?'' ಎಂದು ಕೇಳುತ್ತೇನೆ. ''ಬೆಳಗಿನ ಮೂರೂವರೆ ಗಂಟೆ!'' ಎಂದು ಥಟ್ಟನೆ ಹೇಳಿಬಿಡುತ್ತಾರೆ.

ಇನ್ನೊಂದು ಬಾರಿ ಇದೇ ಪ್ರಶ್ನೆ ಕೇಳಿದಾಗ, ''ನಿನಗಿನ್ನೂ ಸುಖ ಶಯನದ ಒಂದು ಗಂಟೆ ಬಾಕಿ ಇದೆ'' ಎನ್ನುತ್ತಾರೆ, ಗಡಿಯಾರ ನೋಡದೇ.

ನಾನು ಎದ್ದು ತುರ್ತು ಕೆಲಸ ಮುಗಿಸಿ ಸ್ವಿಚ್ ಹಾಕಿ ನೋಡಿದಾಗ ರಾಯರು ಹೇಳಿದ ಸಮಯ ಸರಿಯಾಗಿ ಇರುತ್ತದೆ. ಇದು ಹಲವು ಬಾರಿ ನಡೆದದ್ದುಂಟು. ಕೆಲವೊಮ್ಮೆ ಒಂದೆರಡು ನಿಮಿಷಗಳ ವ್ಯತ್ಯಾಸವಿರುತ್ತದೆ, ಅಷ್ಟೆ.

ಅವರೊಂದು ಜೀವಂತ ಗಡಿಯಾರ! ಲ್ಯಾಬಿಗೆ ಹೋಗುವ ವೇಳೆ, ಅದನ್ನು ಮುಚ್ಚುವ ವೇಳೆ, ಊಟ-ವಿಶ್ರಾಂತಿಗಳ ವೇಳೆ, ವಾಕ್ ವೇಳೆ, ಎಷ್ಟು ನಿರ್ದಿಷ್ಟವಾಗಿ ಇರುತ್ತವೆಂದರೆ ಇವರ ಓಡಾಟದ ವೇಳೆ ನೋಡಿಯೇ ಯಾರೊಬ್ಬರೂ ಗಡಿಯಾರ ಸೆಟ್ ಮಾಡಬಹುದು.

ಆದರೆ ನನ್ನ ಸ್ವಭಾವ ತದ್ವಿರುದ್ಧವಾಗಿತ್ತು, ಗಡಿಯಾರಗಳು ಸುಲಭವಾಗಿ ಸಿಗದಿದ್ದ ಕಾಲದಲ್ಲಿ, ಮೊದಲೆರಡು ತಿಂಗಳ ಗಳಿಕೆಯನ್ನು ವಾಚ್ ಖರೀದಿಗೆ ಮೀಸಲಿಟ್ಟಿದ್ದೆ. ವಾಚ್ ಬಂದೂ ಆಯಿತು. ಅದನ್ನು ಕಟ್ಟಿಕೊಂಡು ಕೆಲ ದಿನ ಮೆರೆದದ್ದೂ ಆಯಿತು. ಆದರೆ ಮರೆವು ಗಡಿಯಾರಕ್ಕಿಂತ ಜೋರಾಗಿ ಕೆಲಸ ಮಾಡುತ್ತಿದ್ದುದರಿಂದ ಒಮ್ಮೆ ದಿನವಿಡೀ ಕಟ್ಟಿಕೊಂಡು, ಹಾಗೇ ಮಲಗಿ, ಮರುದಿನ ಸ್ನಾನವನ್ನೂ ಮಾಡಿ ಬಂದಾಗ ಗೊತ್ತಾಯ್ತು, ಅದು ಸೋಪು ಮತ್ತು ನೀರನ್ನು ಯಥೇಷ್ಟ ಹೀರಿಕೊಂಡು, ನಿವೃತ್ತಿಯನ್ನು ಘೋಷಿಸಿತ್ತು!

ಆಗ ಧಾರವಾಡದಲ್ಲಿದ್ದ ನಾನು ಅಲ್ಲಿದ್ದ ಓರ್ವರೇ ದಕ್ಷ ಆದರೆ ನಿಷ್ಠುರರೆಂದು ಹೆಸರುವಾಸಿಯಾಗಿದ್ದ ವಾಚ್+ಗಡಿಯಾರ ರಿಪೇರಿಯವರ ಹತ್ತಿರ ಹೋಗಲು ಹಿಂಜರಿದೆ. ರಿಪೇರಿ ಮಾಡಲಾಗದ ವಾಚನ್ನು ತಂದರೆ, ಎರಡು ಸಲ ವಾಚನ್ನು, ಎರಡು ಸಲ ಗ್ರಾಹಕರನ್ನು ದಿಟ್ಟಿಸಿ ನೋಡಿ, ''ನೋಡ್ರಿ, ಇದನ್ನ ಎದ್ರಿಗೆ ಕೆರಿ ಅದS ಅಲ್ಲಾS ? ಒಯ್ದು ಅದರಾಗ ಒಗೀರಿ!'' ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುತ್ತಿದ್ದರು. ಅವರನ್ನು ಎದುರಿಸುವ ಧೈರ್ಯವಿಲ್ಲದೆ ನಾನೇ ನನ್ನ ಹೊಸವಾಚಿಗೆ ವಿದಾಯ ಹೇಳಿದೆ.

ಆ ಅನುಭವಿ ವಾಚ್ ರಿಪೇರರ್ ಹೇಳಿದ 'ಕೆರಿ', ಹಾಲುಗೆರೆ ಎಂದು ಹಿಂದೊಮ್ಮೆ ಸಾಯಂಕಾಲ ವಾಕ್ ಹೋಗುತ್ತಿದ್ದವರ ಜನಪ್ರಿಯ ತಾಣವಾಗಿತ್ತು. ರಿಪೇರಿ ಮಾಡಲಾಗದ ವಾಚ್‌ಗಳಿಂದಲೇ ಅದು ಅರ್ಧ ತುಂಬಿರಬೇಕು! ಮಾರ್ಕೆಟ್ ಮಧ್ಯಭಾಗದಲ್ಲಿದ್ದ ಆ ಕೆರೆಯನ್ನು ಮುನಸಿಪಾಲ್ಟಿಯವರು ಕೊನೆಗೊಮ್ಮೆ ಮುಚ್ಚಿಸಿ ತರಕಾರಿ, ಹಣ್ಣು, ಕಿರಾಣಿ ಸಾಮಾನು ಮಳಿಗೆಗಳಿಗೆ ಅವಕಾಶ ಮಾಡಿದ್ದರು. ಕೆರೆಯಿದ್ದ ಜಾಗವನ್ನು ತುಳಿ-ತುಳಿದು ಹೋಗುತ್ತಿದ್ದವರ ರಸ್ತೆ ಕೆಳಗೆ ಅದೆಷ್ಟು ಕಾಲರಾಯನ ಪ್ರತಿನಿಧಿಗಳು ಚಿರನಿದ್ರೆಯಲ್ಲಿದ್ದವೋ ಏನೋ! ಪಾದಪ್ರಹಾರ ಅವಕ್ಕೆ ತಟ್ಟುತ್ತಿರಲಿಲ್ಲ ಸದ್ಯ.

ಕೈಗಡಿಯಾರ, ದಿನಕರ ದೇಸಾಯಿ ಅವರ ಬಾಲಗೀತದ ಕೇವಲ ''ವೇಳೆಯ ತಿಳಿಯಲು ನೀನಾಧಾರ/ಗಂಟೆಯ ನೆಂಟನೆ ಓ ಗಡಿಯಾರ!'' ಆಗಬೇಕಿಲ್ಲ, ಅದು ಅಮೂಲ್ಯ ಒಡವೆಯೂ ಆಗಿರುತ್ತದೆಂದು ನನ್ನ ಅನುಭವ. ಒಮ್ಮೆ ಒಡವೆಗಳಿಂದ ಹೇರಲ್ಪಟ್ಟ ಕೈಯಲ್ಲಿ ಒಡವೆಗಳ ನಡುವೆ ಮಿನುಗುತ್ತಿದ್ದ ವಾಚ್ ಧರಿಸಿದ ರಾಜಸ್ಥಾನಿ ಮಹಿಳೆ, ನನ್ನ ಸಹ-ಪ್ರಯಾಣಿಕಳಾಗಿದ್ದಳು. ಎಂದಿನಂತೆ ನನ್ನ ವಾಚ್ ಸಂಪು ಹೂಡಿದ್ದರಿಂದ, ಅವಳಿಗೆ ಸಮಯವನ್ನು ಕೇಳಿದಾಗ ತನ್ನ ವಾಚಿನ ಮುಂಗೈಯನ್ನೇ ಮುಖಕ್ಕೆ ಹಿಡಿದಳು. ''ಮಾರಾಯ್ತಿ! ಈ ವಾಚಿನ ವಜ್ರ ಮತ್ತು ಚಿನ್ನ ನನ್ನದು! ವೇಳೆ ಮಾತ್ರ ನೋಡೋ ಅಧಿಕಾರ ನಿನ್ನದು! ಉಳಿದದ್ದು ತೊಗೊಂಡು ನಾ ಏನ್ ಮಾಡ್ಲಿ?'' ಎಂಬ ಭಾವ ಅವಳ ಮುಖದಲ್ಲಿತ್ತು. ಆಕೆಗೆ ಓದುಬರಹ, ಸಂಖ್ಯೆಗಳ ಪರಿಚಯ ಇರಲಿಲ್ಲ, ಈಗಂತೂ ಬಿಡಿ. ಹಸ್ತಾಲಂಕಾರಗಳಲ್ಲಿ ಪ್ಲಾಟಿನಮ್ ಜೋಡಣೆಯ ವಜ್ರಖಚಿತ ವಾಚ್‌ಗಳಿಗೆ ಪ್ರಥಮ ಸ್ಥಾನವಿದೆ.

ನನಗೆ ಸಮಯಾನುಸಾರಿಣಿ, ಆಕಾಶವಾಣಿಯಲ್ಲಿ ನೌಕರಿ ಸಿಕ್ಕಾಗ ವೇಳೆ ತಿಳಿದುಕೊಳ್ಳುವ ಗೊಂದಲ ತಪ್ಪಿತು! ಹೆಚ್ಚಿನ ಸಮಯ ಕಳೆಯಬೇಕಾಗಿದ್ದ ಸ್ಟುಡಿಯೋಗಳಲ್ಲಿ, ಎಲ್ಲಿ ನೋಡಿದರಲ್ಲಿ, ನಾಲ್ಕೂ ದಿಕ್ಕುಗಳಲ್ಲಿ ರಾಕ್ಷಸಾಕಾರದ ಗಡಿಯಾರಗಳು ದೊಡ್ಡ ಸೂಚಕಗಳೊಂದಿಗೆ ಹಸಿರು-ಕೆಂಪು ನಿಶಾನೆ ತೋರಿಸಲು ರಾರಾಜಿಸುತ್ತ, ''ಆಯುಷ್ಯ ಸವೀತಾ ಅದS! ಸೊಟ್ಟವಾಚಿಗೆ ಯಾಕ ಬಾಯ್‌ಬಿಡ್ತಿ?'' ಅಂತ ಎಚ್ಚರಿಸುತ್ತಲೇ ಇರುತ್ತಿದ್ದವು! ನನಗೂ ಕ್ರಮೇಣ ವಾಚಿನ ಅವಶ್ಯಕತೆ ತಪ್ಪಿತು.

ಆದರೆ ಮುಂಬೈಗೆ ವರ್ಗವಾದಾಗ, ಲೋಕಲ್ ಟ್ರೇನ್ ಮೂಲಕ ಪ್ರವಾಸ ಅನಿವಾರ್ಯವಾದಾಗ, ವಾಚ್ ಬೇಕಾಯ್ತು! ನನ್ನ ಮೈದುನ 'ಮಿನಿ ದುಬಾಯ್' ಎಂದು ಹೆಸರಾಗಿದ್ದ ಭಟ್ಕಳದಿಂದ ಒಂದು 'ಫಾರಿನ್' ವಾಚ್ ಮತ್ತು ತನ್ನ ಅಣ್ಣನಿಗೂ 'ಸಿಟಿಜನ್' ವಾಚ್ ತಂದು ಉಡುಗೊರೆಯಾಗಿತ್ತ. ನನ್ನದು ಮುಂಬೈನ 'ಶೃಂಗದಟ್ಟಣೆಯ ಕೋಲಾಹಲ'ದಲ್ಲಿ ಕಣ್ಮರೆಯಾದರೆ, ರಾಯರಿಗೆ ಬಂದ ವಾಚ್ ಅವರ ಕಮ್ಮಟದಲ್ಲಿ ಉಪಯೋಗಿಸದ ಎತ್ತರ ಎನ್‌ಲಾರ್ಜರ್‌ನ ಶಿಖರವನ್ನೇರಿ ಸಿಂಹಾವಲೋಕನಕ್ಕೆ ಮೀಸಲಾಯಿತು.

ನಿವೃತ್ತಿಯ ಬಳಿಕ ವೈನಿಗೆ ದೋಸೆ ಹುಯ್ಯಲು, ಒಗ್ಗರಣೆ ಹಾಕಲು, ಸಮಯ ಸರಿಯಾಗಿ ತಿಳಿಯಲೆಂದು ಕಿಚನ್ ಟೇಬಲ್ ಮೇಲಿಡಲು ಪುಟ್ಟ ಗಡಿಯಾರ ಒಂದನ್ನು ನನ್ನ ನಾದಿನಿ ಉಡುಗೊರೆಯಾಗಿತ್ತಳು. ಒಮ್ಮೆ ಅದರ ಪಕ್ಕದಲ್ಲಿದ್ದ ಬೆಣ್ಣೆಯ ಬೌಲ್ ಏರಲು ಹವಣಿಸುತ್ತಿದ್ದ ಜಿರಳೆಗೆ ಲಟ್ಟಣಿಗೆಯಿಂದ ಹೊಡೆಯ ಹೋಗಿ ಬೌಲ್ ಜೊತೆಗೆ ಪುಟ್ಟ ಗಡಿಯಾರಕ್ಕೂ ಏಟುಬಿದ್ದು ಎರಡೂ ಒಡೆದು ಹೋದವು. ಗಡಿಯಾರದ ಕರುಳೆಲ್ಲ ಬಗಿದುಬಿದ್ದಿತ್ತು. ಜಿರಳೆ ಮಾತ್ರ ಯಾವುದೋ ಮಾಯದಲ್ಲಿ ತಪ್ಪಿಸಿಕೊಂಡಿತ್ತು!

ನಿವೃತ್ತಿಯ ನಂತರ ನಡೆಯುವ ಸತ್ಕಾರ, ಗೌರವ ಕೂಟಗಳಲ್ಲಿ ಉಡುಗೊರೆಯಾಗಿ ಮೂರು ಗೋಡೆ ಗಡಿಯಾರಗಳು ಬಂದವು. ಕಾಯಂ ಮುಂದೆ ಓಡುವ ಒಂದನ್ನು ಅತಿಥಿಗಳಿಗೆ ಮೀಸಲಿದ್ದ ಸೋಫಾ ಎದುರುಗೋಡೆಗೆ ರಾಯರು ಜೋಡಿಸಿದರು, ಕೆಲಸ ಮುಗಿಸಿ ಬೇಗ ಹಿಂದಿರುಗಲು ಅವರಿಗೆ ಸಹಾಯವಾಗಲಿ ಎಂದು! ಇನ್ನೊಂದನ್ನು ಡ್ರೆಸಿಂಗ್ ಟೇಬಲ್ ಎದುರಿಗೆ ಫಿಕ್ಸ್ ಮಾಡಿದರು. ಸಮಯದ ಲಭ್ಯತೆ, ಬಂದವರ ಮೇಕಪ್-ಅಲಂಕಾರಗಳಿಗೆ ಒದಗಲೆಂದು! ಮೂರನೆಯದನ್ನು ಟಾಯ್ಲೆಟ್‌ಗೆ ಜೋಡಿಸುವುದರಲ್ಲಿದ್ದರು! ನಾನು ಬಲವಾಗಿ ಪ್ರತಿಭಟಿಸಿದೆ. ಕೊನೆಗೆ ಅದು ಕಾಯಂ ನಿರುದ್ಯೋಗಿಯಾಗಿರುವ ನಿವೃತ್ತಳ ಬರೆಯುವ ಟೇಬಲ್ ಮೇಲೆ ಸಂಭ್ರಮದಿಂದ ವಿರಾಜಮಾನವಾಯಿತು.

'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನ ಬಾಯಲ್ಲಿ ವಾಕ್ಯವೊಂದು ಬರುತ್ತದೆ. ಸಂಯಮವುಳ್ಳಾತ, ಜನಸಾಮಾನ್ಯರ ರಾತ್ರಿಯಲ್ಲಿ ಎಚ್ಚರವಾಗಿದ್ದು, ಎಲ್ಲರೂ ಎಚ್ಚರವಾಗಿರುವಾಗ ಮುನಿಯಾಗಿದ್ದವನು ಮಲಗಿರುತ್ತಾನಂತೆ. ಆಧ್ಯಾತ್ಮಿಕ ಸಂದೇಶ ಈ ಮಾತಿನಲ್ಲಿದ್ದರೂ, ಗೀತೆಯನ್ನು ಓದದಿದ್ದ, ಎಂದೂ ಮುನಿಯದ ನನ್ನ ಕೃಷ್ಣಾ(ನಂದ)ರು, ಲೌಕಿಕವಾಗಿ ಈ ಸಂದೇಶವನ್ನು ಸಾಧಿಸಿಕೊಂಡುಬಿಟ್ಟದ್ದಾರೆ! ಅವರು ಎದ್ದೇಳುವುದು ಬೆಳಿಗ್ಗೆ ಮೂರು ಗಂಟೆಗೆ. ಪ್ರಾತರ್ವಿಧಿ ಮುಖಮಾರ್ಜನ, ಕಾಫಿ, ಬರವಣಿಗೆ-ವಾಕಿಂಗ್-ಸ್ನಾನ-ನಾಶ್ತಾ ಮುಗಿಸಿದಾಗ ಬೆಂಗಳೂರಿಗರು ಏಳಲೋ ಬಿಡಲೋ ಎನ್ನುವ ಸಮಯ, ಎಂಟು ಗಂಟೆ. ಊಟ ಹನ್ನೊಂದು ಗಂಟೆಗೆ, ಬಳಿಕ ವಿಶ್ರಾಂತಿ, ಚಹ, ಛಾಯಾಗ್ರಹಣ ವೃತ್ತಿಜೀವನದ ಮುಂದರಿಕೆ. ರಾತ್ರಿಯೂಟ ಮುಗಿಸಿ ಹಾಸಿಗೆ ಸೇರಬೇಕಾದರೆ ಸುತ್ತಲಿನ ಜನರು ಇನ್ನೂ ಮೂರನೆಯ ಡೋಸ್ ಕಾಫಿ ಹೀರುತ್ತಿರುತ್ತಾರೆ! ಇತರರ ಇರುಳು ಹಗಲುಗಳು ನನ್ನವರಿಗೆ ತದ್ವಿರುದ್ಧ!

ಜನಸಾಮಾನ್ಯರಿಗೆ ಅತ್ಯವಶ್ಯವಿರುವ ವಾಚು-ಗಡಿಯಾರಗಳ ಗೊಡವೆ ಇವರಿಗೇಕೆ ? ಅದರ ಹಂಗು ಬೇಕೇಕೆ ?

ಇವರಿಗೇಕೆ ಗಡಿಯಾರ - ಗಂಟೆ ?
ಬೇಕಿಲ್ಲ ಕಾಲದ ನಂಟೇ !
ಇನ್ನೇಕೆ ವಾಚಿನ ತಂಟೆ ?
ಇಂಥಾವ್ರು ಎಲ್ಲಾದ್ರೂ ಉಂಟೆ ?
... ... ಇದ್ದರು !

ಡಾ|| ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್
'ಶಶಿಕಿರಣ ಅಪಾರ್ಟ್‌ಮೆಂಟ್ಸ್', ನಂ. ೧೮೦, ೧೮ನೇ ಅಡ್ಡರಸ್ತೆ
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

## ಬೀಜ

ಹುಳಿ ಹೀರಿ
ಎಸೆದ ಹುಣಸೇ ಬೀಜ
ದುಃಖಿಸುವುದಿಲ್ಲ
ನೆಲ ಹೊಕ್ಕು ಮರವಾಗಿ
ಮತ್ತೇ ಬರುವ ಭರವಸೆ !

ಶಿ. ಕಾ. ಬಡಿಗೇರ

ಡಾ॥ ಕೆ. ಎನ್. ದೊಡ್ಡಮನಿ

# ಖಡ್ಗದ ಹರಿತ ಕಳೆದುಕೊಂಡ ಲೇಖನಿ

ಬೌದ್ಧಿಕ ವಲಯದಲ್ಲಿ ಕರುಳುಗಳು ಹುರಿಗೊಂಡು ಅಕ್ಷರಗಳು ರೂಪ ಪಡೆಯಬೇಕಾದ ಪ್ರಸ್ತುತ ಸಂದರ್ಭದಲ್ಲಿ, ಬಹಳಷ್ಟು ಬುದ್ಧಿವಂತರು ಕರುಳಿನಿಂದ ಮಾತನಾಡದೆ, ಬುದ್ಧಿಶಕ್ತಿಯ ಪ್ರಯೋಗದ ಮೂಲಕ ಸ್ವಹಿತಾಸಕ್ತಿಯ ಲೆಕ್ಕಾಚಾರವನ್ನು ಚುಕ್ತಾ ಮಾಡಿಕೊಳ್ಳುವ ತಂತ್ರಗಾರಿಕೆಗೆ ಉಪಯೋಗಿಸುತ್ತಿದ್ದಾರೆ. ಭಾರತೀಯ ಸಾಮಾಜಿಕ ಪರಂಪರೆಯಲ್ಲಿ ಕೆಲವರಿಗೆ ಮಾತ್ರ ಸೀಮಿತವಾಗಿದ್ದ ಈ ಬುದ್ಧಿವಂತಿಕೆಯ ತಂತ್ರಗಾರಿಕೆ ಇಂದು ಜಾತಿ, ವರ್ಗ, ಲಿಂಗ, ಮತ, ಪಂಗಡಗಳನ್ನು ಮೀರಿ ಬೆಳೆಯುತ್ತಿದೆ. ಕೊಳೆತ ಕರುಳುಗಳ ಬುದ್ಧಿವಂತಿಕೆಯ ಮಾತುಗಳು ಹಿರಿಯ ಅನುಭಾವಿತಲೆಗಳಿಗೆ ಮಾತ್ರ ಸೀಮಿತಗೊಳ್ಳದೆ, ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಎನ್ನುವಂತೆ, ಎರಡು ಮೂರನೆಯ ತಲೆಮಾರಿನಲ್ಲಿಯೂ ಅದರ ಬೇರುಗಳು ಹಬ್ಬಿಕೊಂಡು ಬೆಳೆಯುತ್ತಿವೆ. ಹಸಿದ ಹೊಟ್ಟೆಗಳು, ಬೆಂದ ಜೀವಗಳು, ಬೀದಿ ಸುತ್ತುತ್ತಿರುವ ಪದವೀಧರರು, ಕೊಳೆಗೇರಿಗಳಲ್ಲಿ ನಾರುತ್ತಿರುವ ಕ್ರಾಂತಿಕಾರಿಗಳು ಇಂಥ ಸೋಗಲಾಡಿತನಕ್ಕೆ ಒಳಗಾಗದೆ ಸತ್ಯಕ್ಕೆ ಮುಖಾಮುಖಿಯಾಗಬೇಕಾದ ಜರೂರಾದ ಅಗತ್ಯವಿದೆ. ಬದ್ಧತೆಯ ಬರಹಗಾರರು ಲೇಖನಿಯನ್ನು ಖಡ್ಗಕ್ಕಿಂತ ಹರಿತಗೊಳಿಸುವ ಅನಿವಾರ್ಯತೆಯಿದೆ.



'ಲೇಖನಿ ಖಡ್ಗಕ್ಕಿಂತ ಹರಿತ!' ಬರವಣಿಗೆಯ ಜವಾಬ್ದಾರಿ ನಿರ್ವಹಣೆಗೆ ಎಂದೋ ಯಾವುದೋ ಕಾಲದಲ್ಲಿ ಪ್ರಜ್ಞಾವಂತರು ಜಾರಿಗೊಳಿಸಿದ ಈ ಮಾತಿಗೆ ಪೂರಕವಾಗಿ ಲೇಖನಿ ಮಾನವ ಇತಿಹಾಸದ ಉದ್ದಕ್ಕೂ ತನ್ನ ವಿಶೇಷ ಪಾತ್ರ ನಿರ್ವಹಿಸುತ್ತ ಬಂದಿದೆ. ನೈತಿಕತೆ ಅಧಃಪತನಕ್ಕಿಳಿದು ಅಮಾನವೀಯತೆ ಅಟ್ಟಹಾಸ ಮೆರೆದಾಗಲೆಲ್ಲ 'ಲೇಖನಿ' ತನ್ನ 'ಖಡ್ಗತನ'ಕ್ಕೆ ಅರ್ಥ ನೀಡುತ್ತ ಮತ್ತು ಆ ಅರ್ಥವನ್ನು ಕಾಪಾಡಿಕೊಳ್ಳುತ್ತ ಬಂದಿದೆ. ಲೇಖನಿ ಖಡ್ಗಕ್ಕಿಂತ ಹರಿತಗೊಂಡಾಗಲೆಲ್ಲ ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ರಾಂತಿಗಳು ಸಂಭವಿಸುತ್ತ ಬಂದಿವೆ. ಇಂಥ ಲೇಖನಿಯ ಪ್ರಭಾವದಿಂದ ಇಲ್ಲಿ ಬುದ್ಧ ಮೈತ್ರಿ ಮನುಷ್ಯತ್ವದ ದೀವಿಗೆ ಹಚ್ಚಿ, ಭವಿಷ್ಯತ್ವದ ಲೇಖನಿಗಳಿಗೆ ಸಾಣೆ ಹಿಡಿದಿದ್ದಾನೆ. ಬಸವಾದಿ ಶಿವಶರಣರು ಅಮಾನವೀಯ ಎದೆ ಸೀಳಿ ಮಾನವ ಧರ್ಮದ ಮಾರ್ಗ ಸೃಷ್ಟಿಸಿದ್ದಾರೆ. ಅಂಬೇಡ್ಕರರಂಥವರು ಮಣ್ಣುಗೂಡಿದ ದುರ್ಬಲ ಬದುಕಿನ ಮಣ್ಣಿನ ಮೂರ್ತಿಗಳಿಗೆ ಜೀವ ತುಂಬಿ, ಲೇಖನಿಯ ಹರಿತ ಕಾಯ್ದುಕೊಂಡು ಹೋಗಲು ಕಾರಣಕರ್ತರಾಗಿದ್ದಾರೆ. ಲೇಖನಿ ಸುಮ್ಮನೆ ಹರಿತಗೊಳ್ಳುವುದಿಲ್ಲ. ಅದನ್ನು ವೈಯಕ್ತಿಕ ಹಾಗೂ ಸಾಮಾಜಿಕ ಬದ್ಧತೆಯ ಕಲ್ಲಿಗೆ ಸಾಣೆ ಹಿಡಿಯಬೇಕಾಗುತ್ತದೆ. ಮನುಷ್ಯಪರವಾದ ಈ ಅಭಿವ್ಯಕ್ತಿ ಸ್ವಾತಂತ್ರ್ಯ ಪ್ರಭುತ್ವ ವ್ಯವಸ್ಥೆಯ ಒಡಲೊಳಗಿನಿಂದಲೇ ಜನಿಸಿ, ಪರ್ವತಗಳ ಸಾಲುಗಳನ್ನು ಕೊರೆದು ಹಾದಿ ಮಾಡಿಕೊಂಡು ಹರಿದುಬಂದ ನದಿ, ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಸಾಗರದ ಪಾತ್ರಕ್ಕೆ ಹರಡಿಕೊಂಡಿದೆ.

ಅಭಿವ್ಯಕ್ತಿ ಸ್ವಾತಂತ್ರ್ಯದ ಸಾಗರದ ಸುನಾಮಿಗೆ ಬರಹದ ಬೌದ್ಧಿಕ ವಲಯ ಕೇಂದ್ರಬಿಂದು. ಈ ಸವಾಲನ್ನು ಪ್ರಜ್ಞಾವಂತ ವಲಯ ಕಾಲಕ್ಕೆ ತಕ್ಕಂತೆ ತನ್ನ ಶಕ್ತಿಗನುಸಾರವಾಗಿ ನಿಭಾಯಿಸುತ್ತ ಬಂದಿದ್ದು, ಬರಹಗಾರರು ಈ ಸವಾಲನ್ನು ಹೇಗೆ ಸ್ವೀಕರಿಸಿದ್ದಾರೆ ಮತ್ತು ಸ್ವೀಕರಿಸುತ್ತಾರೆ ಎಂಬುದು ಅವರ ಸಾಮಾಜಿಕ ಬದ್ಧತೆ, ಪ್ರಾಮಾಣಿಕತೆಯ ಪ್ರಮಾಣೀಕರಣ ಸಾಬೀತುಗೊಳ್ಳುತ್ತ ಹೋಗುತ್ತವೆ. 'ಸತ್ಯ ಹೇಳುವುದು' ಎನ್ನುವುದಕ್ಕಿಂತ 'ವಾಸ್ತವ ಸತ್ಯವನ್ನು ಬಯಲಿಗೆಳೆಯುವುದರಲ್ಲಿ' ಲೇಖನಿ ತನ್ನ ಹರಿತವನ್ನು ಸಾಕ್ಷೀಕರಿಸುತ್ತದೆ. ಸತ್ಯವನ್ನು ಬಯಲಿಗೆಳೆಯಲು ಪ್ರಜ್ಞಾವಂತ ಬರಹಗಾರನಿಗೆ ಸಮಾಜ ಅಧಿಕೃತವಾಗಿ ಆದೇಶ-ಆಜ್ಞೆ ನೀಡದೆ ಇದ್ದರೂ ಹೆಚ್ಚು ಕಡಿಮೆ ಅದೇ ಧಾಟಿಯಲ್ಲಿ ನೈತಿಕ ಜವಾಬ್ದಾರಿಯನ್ನು ನಿರ್ವಹಿಸಲು ಸೂಚಿಸುತ್ತ, ಎಚ್ಚರಿಸುತ್ತ ಬಂದಿದೆ. ಈ ರೀತಿ ಸೂಚಿಸಲು ಮತ್ತು ಎಚ್ಚರಿಸಲು ಕಾರಣವಿಷ್ಟೇ – ಆತ ತಿಳುವಳಿಕೆಯುಳ್ಳವ, ಬುದ್ಧಿವಂತ, ಜ್ಞಾನಿ, ದಾರ್ಶನಿಕ; ಇವೆಲ್ಲದಕ್ಕಿಂತ ಮುಖ್ಯವಾಗಿ 'ಮರ್ಯಾದಸ್ಥ' ಎಂದು ಸಮಾಜ ಮರ್ಯಾದೆ ನೀಡುತ್ತ ಇನ್ನುಳಿದವರಿಗಿಂತ ಭಿನ್ನವಾಗಿ ನೋಡುತ್ತ ಬಂದಿದೆ. ಕಾಲದ ಅಗತ್ಯತೆಯ ಅನುಸಾರವಾಗಿ ಬೌದ್ಧಿಕ ವಲಯ ಅಭಿವ್ಯಕ್ತಿ ಸ್ವಾತಂತ್ರ್ಯದ ಇತಿಮಿತಿಗಳಲ್ಲಿ ಹಾಗೂ ಅನೇಕಸಲ ಆ ಗೆರೆಗಳನ್ನು ದಾಟಿ ಜವಾಬ್ದಾರಿಯನ್ನು

ನಿಭಾಯಿಸುತ್ತ ಬಂದಿದೆ. ಈ ವಲಯದ ಕೆಲವರು ಮರ್ಯಾದೆಯನ್ನು ಉಳಿಸಿಕೊಳ್ಳುವುದರ ಜೊತೆಗೆ ಮತ್ತೆ ಕೆಲವರು ಹರಾಜು ಹಾಕಿರುವುದುಂಟು. ನೈತಿಕ ಜವಾಬ್ದಾರಿಯನ್ನು ನಿಭಾಯಿಸಲು ವಿಪುಲವಾದ ಅವಕಾಶ ಇರುವ ವಾತಾವರಣದಲ್ಲಿ ಬುದ್ಧಿಜೀವಿಗಳ ಕಾರ್ಯ ವೈಖರಿ ಕೀಳುಮಟ್ಟ ತಲುಪಿದಾಗ ಸಮಾಜ ಅವರನ್ನು ಮತ್ತೂ ಎಚ್ಚರಿಸುತ್ತಲೇ ಬಂದಿದೆ.

ಪ್ರಸ್ತುತ ಸಂದರ್ಭದಲ್ಲಿ 'ಲೇಖನಿ ಖಡ್ಗಕ್ಕಿಂತ ಹರಿತವಾಗಲಿ' ಎಂದು ಅನೇಕ ಬಗೆಯಲ್ಲಿ ಪುನರುಚ್ಚರಿಸುತ್ತ, ಬೌದ್ಧಿಕ ವಲಯಕ್ಕೆ ಸಮಾಜ ಎಚ್ಚರಿಕೆಯ ಗಂಟೆಯನ್ನು ಬಾರಿಸುತ್ತಲೇ ಇದೆ. ಈ ರೀತಿ ಗಂಟೆಯನ್ನು ಬಾರಿಸಿದರೂ ನಿಗದಿತ ಮಟ್ಟದಲ್ಲಿ ಬೌದ್ಧಿಕತೆ ಜಾಗೃತಿಗೊಳ್ಳದೇ ಇರುವುದು ಅದರ ಕಾರ್ಯವೈಖರಿಯ ಕೆಳಮಟ್ಟ ಸಹಜವಾಗಿ ತೆರೆದುಕೊಳ್ಳುತ್ತದೆ. ಹಾಗಂತ ಸತ್ಯವನ್ನು ಬಯಲಿಗೆಳೆಯುವ ಬೌದ್ಧಿಕ ವಲಯ ಸಂಪೂರ್ಣವಾಗಿ ಅಧೋಗತಿಗಿಳಿದಿದೆ ಎಂದು ಷರಾ ಬರೆಯಬೇಕಾಗಿಲ್ಲ. ಆದರೆ, ಅದರ ಪ್ರಮಾಣ ಮಾತ್ರ ಕಡಿಮೆ ಇರುವುದರಿಂದ ಪರಿಣಾಮದ ತೀವ್ರತೆ ತುಂಬ ಗೌಣವಾಗಿದೆ. ಇಂದು ಬೌದ್ಧಿಕತೆ ನಪುಂಸಕತ್ವದ ಸಂಭ್ರಮಾಚರಣೆಯಲ್ಲಿ ಮೈಮರೆತಿರುವುದು ಒಂದೆಡೆಯಾದರೆ, ಕೋಲು ಮುರಿಯಲೂ ಬಾರದು, ಹಾವು ಸಾಯಲೂ ಬಾರದು ಎನ್ನುವ ರೀತಿಯಲ್ಲಿ ನಯವಂಚನೆಯ ಜಾಣತನದ ಇನ್ನೊಂದು ಮುಖ ಕಾಣಸಿಗುತ್ತದೆ. ಏಕೆಂದರೆ, ಸತ್ಯ ಹೇಳುವುದರಲ್ಲೂ ಆಯಾಮಗಳಿವೆ. ಲೇಖನಿ ಖಡ್ಗಕ್ಕಿಂತ ಹರಿತಗೊಂಡಾಗ ಸತ್ಯ ಬಯಲಿಗೆಳೆಯುವುದಕ್ಕೆ ಯಾವುದೇ ಆಯಾಮ ಇರುವುದಿಲ್ಲ. ಅದಕ್ಕಿರುವುದು ಮನುಷ್ಯತ್ವದ ಬದ್ಧತೆಯ ಆಯಾಮ ಮಾತ್ರ. ಆದರೆ, ಕೆಲ ಬುದ್ಧಿವಂತರು ಕರುಳಿನ ಬಗ್ಗೆ ಮಾತನಾಡುತ್ತ, ಸತ್ಯವನ್ನು ಬಯಲಿಗೆಳೆಯುವಾಗ 'ಸತ್ಯ ಹೇಳಿಲ್ಲ' ಎಂಬ ಆಪಾದನೆಗೆ ಒಳಗಾಗದೆ, ತಮಗೆ ಹಾಗೂ ತಮ್ಮ ಅನುಕೂಲಸ್ಥ ಪರಿಸ್ಥಿತಿಗೆ ಧಕ್ಕೆಯಾಗದಂತೆ ಡಿಪ್ಲೊಮೆಟಿಕ್ಕಾಗಿ ಸತ್ಯ ಹೇಳಿ, ಅದರಿಂದ ಜಾರಿಕೊಳ್ಳುವ ನಾಜೂಕುತನವನ್ನು ರೂಢಿಸಿಕೊಂಡಿರುತ್ತಾರೆ. ಈ ಬಗೆಯ ಅನುಕೂಲಸ್ಥರಿಗೆ ಅಥವಾ ನೇರವಾಗಿ ಹೇಳುವುದಾದರೆ ಅವಕಾಶವಾದಿಗಳಿಗೆ ಸಾಮಾಜಿಕ ಬದ್ಧತೆಯ ಹೆಸರಿನಲ್ಲಿಯೇ ವೈಯಕ್ತಿಕ ಹಿತಾಸಕ್ತಿ ಚುಕ್ತಾ ಮಾಡಿಕೊಳ್ಳುವುದು ಮುಖ್ಯವಾಗಿರುತ್ತದೆ. ಇಂಥವರು ವ್ಯವಸ್ಥೆಯ ಪರವಾಗಿಯೇ ವಕೀಲಿ ವಹಿಸುವುದರಿಂದ ಇವರು ಮೂಲಭೂತವಾದಿಗಳಿಗಿಂತ ತುಂಬ ಅಪಾಯಕಾರಿ ಎನ್ನುವುದಕ್ಕೆ ಇತಿಹಾಸದ ಪುಟಗಳಲ್ಲಿ ಹಾಗೂ ವರ್ತಮಾನದ ತೆರೆದ ಪುಸ್ತಕದಲ್ಲಿ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಸತ್ಯದ ಮುಖವಾಡಧಾರಿಗಳಾದ ಇವರು ಸೂಕ್ಷ್ಮಮತಿಗಳಿಗೆ ತಕ್ಷಣ ಅರಿವಿಗೆ ಬಂದರೂ ಮುಗ್ಧರು ಇಂಥವರಿಂದ ದೊಡ್ಡ ಪ್ರಮಾಣದ ನಷ್ಟ ಅನುಭವಿಸಬೇಕಾಗುತ್ತದೆ. ಅವಕಾಶವಾದಿಗೆ ಸತ್ಯ ಬರೆಯಲು ಯಾವುದೇ ನೈತಿಕ ಹಕ್ಕು ಇರುವುದಿಲ್ಲ ಮಾತ್ರವಲ್ಲ, ಅವನ ಮನಸ್ಸು ಅದಕ್ಕೆ ಒಪ್ಪಿಗೆ ನೀಡುವುದೂ ಇಲ್ಲ. ಸತ್ಯವಾಗಿ ಬದುಕುವವನಿಗೆ ಮಾತ್ರ ಸತ್ಯವನ್ನು ಬಯಲಿಗೆಳೆಯುವ ಧೈರ್ಯವಿರುತ್ತದೆ.

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಒಳದಾರಿಗಳು ಪ್ರಭುತ್ವ, ಬಂಡವಾಳ ಹಾಗೂ ಮೂಲಭೂತವಾದಿಗಳಿಗೆ ಹೆಚ್ಚು ಅವಕಾಶಗಳಿರುವುದರಿಂದ ನಿಜಾಂಶವನ್ನು ಹೊರಗೆ ಎಳೆಯುವ ಸಂದರ್ಭದಲ್ಲಿ ಭೀಕರ ಪರಿಣಾಮ ಎದುರಿಸಬೇಕಾಗುತ್ತದೆ ಎಂಬ ಸತ್ಯವನ್ನೂ ಮರೆಯುವಂತಿಲ್ಲ. ಈ ಅವಘಡಗಳನ್ನು ನಿಜವಾದ ಬೌದ್ಧಿಕ ವಲಯ ನಿಭಾಯಿಸುತ್ತಲೇ ಸತ್ಯವನ್ನು ಬಯಲಿಗೆಳೆಯುತ್ತ ಬಂದಿರುವುದರಿಂದ ಮಾನವ ಹಿತಕ್ಕೋಸ್ಕರ ಕ್ರಾಂತಿಗಳು ಸಂಭವಿಸುತ್ತ ಬಂದಿವೆ.

ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಹಾಗೂ ಮುಕ್ತ ಮಾರುಕಟ್ಟೆ ಯಂತಹ ಜಾಗತಿಕ ನಿರ್ಣಾಯಕ ನೀತಿಗಳಿಂದಾಗಿ ಮುಂದುವರಿದ ರಾಷ್ಟ್ರಗಳ ಕೇಂದ್ರೀಕೃತ ಏಕಮುಖಿ ಸಾಂಸ್ಕೃತಿಕ ಪ್ರತಿಷ್ಠಾಪನೆಯ ಬಲವಂತದ ಹಿಂದೆ ಸ್ಥಳೀಯ ಬದುಕೆಲ್ಲಾ ಹತ್ತಿಕ್ಕಲ್ಪಡುತ್ತಿರುವ ಪ್ರಸ್ತುತ ಸಂದರ್ಭದಲ್ಲಿ 'ಖಡ್ಗಕ್ಕಿಂತ ಲೇಖನಿ ಹರಿತವಾಗಲಿ!' ಎಂಬ ಪುನರುಚ್ಚರಣೆಯ ವೇದನೆ, ಅಳಲು-ಆಕ್ರೋಶದ ಹಿಂದೆ ಸಾಮಾಜಿಕ ಬದುಕಿನ ಅಧೋಗತಿಯ ಮಟ್ಟವನ್ನು ನಿರ್ದೇಶಿಸುತ್ತದೆ. ಮಾನಸಿಕ ದಾರಿದ್ರ್ಯತನ ಗಟಾರಾಗಿ ಹರಿಯುತ್ತಿದ್ದು, ಮಾನವೀಯ ಮೌಲ್ಯಗಳು ಮಣ್ಣು ಗೂಡುತ್ತಿವೆ. ಆರ್ಥಿಕ ಭ್ರಷ್ಟಾಚಾರ ಹಾಗೂ ಆದರ್ಶದ ಮುಖವಾಡಗಳು ಶೋಷಣೆಯ

---

## ದಯವಿಟ್ಟು ಬಿಟ್ಟುಬಿಡಿ



ರವಿಶಂಕರ ಒಡ್ಡಂಬೆಟ್ಟು

'ಸುಮ್ಮನೆ', ಡೋರ್ ನಂ. ೩-೭೯/೩, ಪಲ್ಲಕೆರೆ
ಬಜಾಲ್ ಅಂಚೆ, ಮಂಗಳೂರು - ೫೭೫ ೦೦೭

ಮಾಂಸವ ತಿನ್ನಿ ಕತ್ತರಿಸಿ -
ತೊಂದರೆಯಿಲ್ಲ ನನಗೆ
ಕೆಚ್ಚಲ ರಕ್ತಹೀರುವಂತೆ
ಕರೆ ಕರೆ ಕರೆದು ಹಾಲು ಹೀರುವಾಗ
ದಿನಾ ಸಾಯುವುದಕ್ಕಿಂತ
ಸಹ್ಯ ನನಗೆ ತ-ಕ್ಷಣವೆ
ನನ್ನ ಕರುವಿಗೂ ಹೊತ್ತು ನಿಮ್ಮ ನೊಗ
ಭೂಮಿ ಮೈಗೆ ಎಳೆದಾಗ ಬರೆ
ಉತ್ತ ನೋವು ಗೊತ್ತೆ ನಿಮಗೆ ?
ಉತ್ತವರೆ ನೀವು ಎಂದಾದರೂ ?
ಸವೆದಾಗಲೂ ಗೊರಸು
ಒರೆಸಿದ್ದೀರಾ ಕಣ್ಣೀರು ?
ಗೊತ್ತು ನನಗೆ
ನಿಮಗೆ ಬೇಕಿರುವುದು ಗಂಜಳವೆ
ಬೆರಣಿ ತಟ್ಟಿ ಅನ್ನ ಬೆಂದರೆ
ಮತ್ತೆ ದೀಪಾವಳಿಗೇ ನೆನಪು
ಹಣೆಗೆ ತಿಲಕ ಮೈ ತುಂಬ ಹಾರ
ಧೂಪ ದೀಪ ಸಿಂಗಾರ
ಮತ್ತೆ ಕೊರಳಿಗೆ ಅದೇ ಹಗ್ಗ, ಅದೇ ಗೂಟ

ಬಿಟ್ಟರುವಾಗ ಹುಲ್ಲು ನೀನು ಭೂಮಿ ಮೈಗೆ
ಎಲ್ಲಿದೆ ನನಗೆ ಪೈರು
ಸಾಯುವವರೆಗೆ ಅರ್ಧ ಬಸಿರು
ಹಾಲು ಕೊಡದಿದ್ದರೆ ಗೊಡ್ಡು -
ಕಟುಕರ ಕೈಗೆ, ಕದ್ದು -
ಮುಚ್ಚಿ ಮಾರುವಾಗ
ಕಡೆಗಣ್ಣಿನಲ್ಲಾದರೂ ಕರುಣೆಯುಂಟೆ ?
ವಿಸರ್ಜಿತ ಮೂತ್ರ ಪಂಚಗವ್ಯವಾಯಿತೆ ?
ಅರ್ಬುದಕ್ಕೂ ಅರ್ಕವಾಯಿತೆ ?
ಅಥವಾ ನೀವು
ಮೂತ್ರ ಕುಡಿಯಲಷ್ಟೆ ಅರ್ಹರೆ ?
ಮುಕ್ಕೋಟಿ ದೇವರುಗಳ ಮೈಗಂಟಿಸಿ
ಪುಣ್ಯಕೋಟಿಯ ಮಾಡಿ
ಕೋಟಿ ಪಾಪ ಕಳೆವ ಹುನ್ನಾರವೆ ?
ಪ್ರಾಣಿ ಪಕ್ಷಿಗಳ ಬಿಡಿ
ನಿಮ್ಮವರನ್ನೆ ತಿನ್ನುವ ನಿಮಗಿಂತ -
'ಅರ್ಬುತ'ವೇ ವಾಸಿ
ದಯವಿಟ್ಟು ಬಿಟ್ಟುಬಿಡಿ ನನ್ನ ತಲೆಬಿಸಿ.

ಪ್ರಬಲ ಅಸ್ತ್ರಗಳಾಗಿ ಮಾರ್ಪಟ್ಟು ಕಾಲಡಿ ಬಿದ್ದವರನ್ನು ಹೊಸಕಿಹಾಕುತ್ತಿವೆ. ಇದರಿಂದಾಗಿ ಜಾತೀಯತೆಯಂಥ ಸಾಂಪ್ರದಾಯಿಕ ಕಂದಕಗಳು ಹೊಸ ರೂಪ ಪಡೆದುಕೊಂಡು ಬೃಹದಾಕಾರವಾಗಿ ಬೆಳೆಯುತ್ತಿವೆ. ಮುಗ್ಧರು, ಅಸಹಾಯಕರು, ದುರ್ಬಲರು ಈ ಕಂದಕ ಗಳಲ್ಲಿ ಮಣ್ಣಾಗುತ್ತಿರುವುದಕ್ಕೆ ಯಾವುದೇ ಬಗೆಯ ಕನಿಕರವಿಲ್ಲ. ಅನೀತಿ-ಅತ್ಯಾಚಾರ ಪ್ರವೃತ್ತಿಗಳು ಬೀದಿನಾಯಿ ಗಳಂತೆ ಚೆಲ್ಲಾಟಗಳಾಗಿವೆ. ಸ್ತ್ರೀಯರು ಬಾಗಿಲಿನ ಒಳಹೊರಗೆ ಉಸಿರುಗಟ್ಟುವ ವಾತಾವರಣದಲ್ಲಿ ಜೀವಿಸುವ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಹಿಂದೆ ಕಂಡರಿಯದ ಮಾರಣಹೋಮಗಳ ವೈಭವದ ಮೆರವಣಿಗೆ ರಾಜಮಾರ್ಗದಲ್ಲಿ ವಿಜೃಂಭಿಸುತ್ತಿವೆ. ಕಾಯಿದೆ ಕಾನೂನುಗಳು ಮೌನವಹಿಸಿ ಶೋಕ ಸಂದೇಶಗಳನ್ನು ರವಾನಿಸುತ್ತಿವೆ.

ಅನೇಕ ಧಾರ್ಮಿಕ ಕೇಂದ್ರಗಳು ಅನೈತಿಕ-ಅವ್ಯವಹಾರದ ಅಧಿಕೃತ ಕೇಂದ್ರಗಳಾಗಿವೆ. ದುಡಿಯುವ ವರ್ಗದ ಬೆವರಿನ ಪ್ರತಿಫಲ ಮಠಗಳ ಪಾಲಾಗುತ್ತಿರು ವುದರಿಂದ ಅವು ರಾಜಕೀಯ ರಿಮೋಟ್ ಕಂಟ್ರೋಲ್ ಗಳಾಗಿ, ಜಾತಿ ಆಧಾರಿತ ಮತಬ್ಯಾಂಕ್‌ಗಳಾಗಿ ಕಾರ್ಯ ಮಗ್ನವಾಗಿವೆ. ಹೈಟೆಕ್ ಬಾಬಾಗಳು ದಿನೇದಿನೇ ನಾನಾ ವೇಷಗಳಲ್ಲಿ ಮನೆ ಬಾಗಿಲಿಗೇ ಪ್ರತ್ಯಕ್ಷವಾಗುತ್ತಿದ್ದಾರೆ. ಡಂಭಾಚಾರದ ದೈವ ಭಕ್ತಿ, ಡಾಂಭಿಕ ದೇಶಾಭಿಮಾನ, ಸಾಂಸ್ಕೃತಿಕ ದುರಭಿಮಾನ ನಿರ್ಣಾಯಕ ಪಾತ್ರ ನಿರ್ವಹಿಸುತ್ತಿರುವುದು ಸಾಂಸ್ಕೃತಿಕ ದಿವಾಳಿತನಕ್ಕೆ ಸಾಕ್ಷಿಯಾಗಿದೆ. ಬಡವರು ಬದುಕುವುದು ದುಸ್ತರವಾಗಿದೆ. ಅನ್ನ ನೀಡುತ್ತ ಬಂದ ರೈತ ತನ್ನ ಕೈಯಿಂದ ತಾನೇ ವಿಷ ಉಣ್ಣುವಂತಾಗಿದೆ; ನೇಗಿಲಿಗೆ ಬಿಗಿದ ಹಗ್ಗವನ್ನು ಕುತ್ತಿಗೆಗೆ ಬಿಗಿದುಕೊಳ್ಳುತ್ತಿದ್ದಾನೆ. ದುಡಿಯುವ ಕೈಗಳು ತಲೆ ಮೇಲೆ ಕೈಯಿಟ್ಟು ಕುಳಿತು ತುತ್ತು ಅನ್ನಕ್ಕಾಗಿ ತಳಮಳಿಸುತ್ತಿವೆ. ಅಸಹಾಯಕ ಪದವೀಧರರು ಬೀದಿಯ ಭಿಕ್ಷುಕತನ ಪರಿಸ್ಥಿತಿ ಎದುರಿಸುತ್ತಿದ್ದಾರೆ. ಎಂಥ ಜ್ಞಾನಿಯೂ ಕಾರ್ಮಿಕನಾಗಿ ಪರಿಗಣಿತನಾಗಿದ್ದು, ಆತನ ಮೂಲಕ ಅವ್ಯಾಹತವಾಗಿ ಶ್ರಮ ದರೋಡೆ ಮಾಡಲಾಗುತ್ತಿದೆ. ಯುವ ಸಮುದಾಯ ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಂಡಿದ್ದು, ಹುಚ್ಚರ ವರ್ತನೆಗಳೇ ಬದುಕಿನ ಸ್ಟೈಲ್‌ಗಳೆಂದು ಸ್ವೀಕರಿಸುತ್ತಿವೆ. ಶೈಕ್ಷಣಿಕ ವ್ಯವಸ್ಥೆ ಹಣ ಸುಲಿಯುವ ಆಕರ್ಷಕ ಸೆಂಟರ್‌ಗಳಾಗಿವೆ. ಬಂಡವಾಳಶಾಹಿಯ ಪಾದದಡಿ ಬಿದ್ದು ಹೊರಳಾಡು ತ್ತಿರುವ ಸ್ಥಳೀಯ ಬದುಕನ್ನು ಸೇದಿ ಒಗೆದ ಸಿಗರೇಟಿನಂತೆ ಹೊಸಕಿಹಾಕಲಾಗುತ್ತಿದೆ. ಮಾನವ ಬದುಕಿಗೆ ನೆಲೆ ಒದಗಿಸಿ ಆಶ್ರಯ ನೀಡಿದ ನಿಸರ್ಗ ಸಂಪತ್ತನ್ನು ಅಧಿಕೃತವಾಗಿ ದರೋಡೆ ಮಾಡಿ, ಜೀವ ಸಂಕುಲವನ್ನು ನಿರ್ನಾಮಗೊಳಿಸಲಾಗುತ್ತಿದೆ. ರಾಜಕೀಯ ಮೌಲ್ಯ ಸಂಪೂರ್ಣವಾಗಿ ಅಧಃಪತನಕ್ಕಿಳಿದು ಸಂವಿಧಾನದ ಆಶಯಗಳನ್ನು ಮಾತ್ರವಲ್ಲ, ಸಂವಿಧಾನವನ್ನೇ ತೂರಿಬಿಡ ಲಾಗುತ್ತಿದೆ. ಹೀಗೆ ಹೆಜ್ಜೆ ಹೆಜ್ಜೆಗೂ ಅನಾಹುತಗಳನ್ನು ಎದುರಿಸಬೇಕಾದ ಅನಿವಾರ್ಯತೆಯ ವಿಷಮ ಸ್ಥಿತಿ ಸೃಷ್ಟಿಗೊಂಡಿದೆ.

ಪರಿಸ್ಥಿತಿ ಹೀಗಿರಬೇಕಾದರೆ ಸಮಾಜ ಸಹಜವಾಗಿ ಬೌದ್ಧಿಕ ವಲಯವನ್ನು ಎಚ್ಚರಿಸಲು ಪ್ರಯತ್ನಿಸುತ್ತದೆ. 'ಲೇಖನಿ ಖಡ್ಗವಾಗಲಿ' ಎಂದು ಘೋಷಣೆ ಕೂಗುತ್ತದೆ. ಇತ್ತೀಚೆಗೆ ಸಾಂಸ್ಕೃತಿಕ ನಗರಿ ಧಾರವಾಡದಲ್ಲಿ ರೋಮ್ ಬೆಂಕಿ ಹತ್ತಿ ಉರಿಯುವಾಗ ನೀರೊ ಪಿಟಿಲು ಬಾರಿಸುತ್ತ ಕುಳಿತಂತೆ, ಸತ್ತವರ ಮನೆಯಲ್ಲಿ ಹೋಳಿಗೆ ಊಟ ಮಾಡಿಸಿ ತಿಂದುಂಡು ತೇಗಿದಂತೆ ಬುದ್ಧಿವಂತರೆಲ್ಲರೂ ಸೇರಿ ಸಾಹಿತ್ಯ ಸಂಭ್ರಮ ಆಚರಿಸಿಕೊಳ್ಳುವ ಖುಷಿಯಲ್ಲಿ ಇರುವಾಗ ಹಿರಿಯ ವಿಮರ್ಶಕರಾದ ಡಾ|| ಜಿ. ಎಸ್. ಆಮೂರ ಅವರು, ''ಖಡ್ಗಕ್ಕಿಂತ ಲೇಖನಿ ಹರಿತ. ಆದರೆ, ಇಂದಿನ ಸಂದರ್ಭದಲ್ಲಿ ನನಗೆ ಹಾಗೆನಿಸುತ್ತಿಲ್ಲ. ಭ್ರಷ್ಟಾಚಾರ, ನೈತಿಕ ಅಧಃಪತನಗಳು ದೇಶದಲ್ಲಿ ಸಾಕಷ್ಟು ನಡೆಯುತ್ತಿದ್ದರೂ ಈ ಬಗ್ಗೆ ಸಾಹಿತಿಗಳು ಸತ್ಯವನ್ನು ಬರೆಯುತ್ತಿಲ್ಲ, ಅವರು ಇಂಥವುಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡಂತೆ ಕಂಡುಬರುತ್ತದೆ'' ಎಂದು ಎದುರಿಗೆ ನಿಂತು ಎದೆಗೆ ತಿವಿದಿದ್ದಾರೆ. ವಿಜಾಪುರದಲ್ಲಿ ನಡೆದ ೭೯ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಮ್ಮೇಳನದ ಸರ್ವಾಧ್ಯಕ್ಷರೂ ನ್ಯಾಯಾಧೀಶರಾಗಿ ಲೋಕಾನುಭವ ಪಡೆದ ಹಿರಿಯ ಜೀವಿ ಕೋ. ಚೆನ್ನಬಸಪ್ಪನವರೂ ಸಹಿತ ಅಂಥ ಜಾತ್ರೆಯಲ್ಲಿ ಲೇಖನಿ ಖಡ್ಗವಾಗಲಿ ಎಂದು ಕರೆ ನೀಡಿದ್ದಾರೆ. ಸೌಮ್ಯ ಸ್ವಭಾವದ ಈ ಹಿರಿಯ ಜೀವಿಗಳೇ ಈ ರೀತಿ ಲೇಖನಿ ಖಡ್ಗವಾಗಲಿ ಎಂದು ಬೌದ್ಧಿಕ ವಲಯಕ್ಕೆ ಸವಾಲು ಹಾಕಿರುವುದನ್ನು ಕಂಡರೆ, ಸಾಮಾಜಿಕ ವ್ಯವಸ್ಥೆ ಎಂಥ ಅಧೋಗತಿಗೆ ತಲುಪಿದೆ ಎಂಬುದು ವೇದ್ಯವಾಗುತ್ತದೆ. ಪರಿಸ್ಥಿತಿ ಹೀಗಿದ್ದೂ ನೈತಿಕ ಜವಾಬ್ದಾರಿಯನ್ನು ನಿಭಾಯಿಸಬೇಕಾದ ಬುದ್ಧಿವಂತ ವಲಯ ನಿದ್ದೆ ಹೋಗಿರುವುದು ಅದರ ಅಧೋಗತಿಯನ್ನು ತೋರಿಸುತ್ತದೆ. ಬೌದ್ಧಿಕ ವಲಯ ನಿದ್ದೆಹೋಗಿದ್ದರೆ ಎಚ್ಚರಿಸಬಹುದಿತ್ತು. ಆದರೆ, ನಿದ್ದೆಹೋದಂತೆ ನಾಟಕ ವಾಡುತ್ತಿದ್ದರೆ ಎಚ್ಚರಿಸುವುದು ತುಂಬ ಕಠಿಣವಾಗುತ್ತದೆ.

ನಿದ್ದೆಯ ನಾಟಕ ಆಡುತ್ತಿರುವ, ಅನೈತಿಕತೆಯೊಂದಿಗೆ ಹಾಸಿಗೆ ಹಂಚಿಕೊಂಡು ಬಿದ್ದಿರುವ ಬೌದ್ಧಿಕ ವಲಯಕ್ಕೆ ಮಾತ್ರ ಅನ್ವಯಿಸುವ ಹಿತಾಸಕ್ತಿಗಳು ಇಂತಿವೆ : ಮುಖ್ಯವಾಗಿ ಅವರವರ ಸಾಧನೆಯ ಲೆವೆಲ್‌ಗೆ ತಕ್ಕಂತೆ ಪ್ರಶಸ್ತಿ-ಸನ್ಮಾನದ ಅಪೇಕ್ಷೆ ಪ್ರಮುಖವಾದದ್ದು. ಅದು ಸ್ಥಳೀಯ ಮಟ್ಟದ ಸರ್ಕಾರೇತರ ಸಂಘ-ಸಂಸ್ಥೆಗಳು ನೀಡುವ ಶಾಲು-ಮಾಲಿ ಹಿಡಿದುಕೊಂಡು ರಾಜ್ಯೋತ್ಸವ ಪ್ರಶಸ್ತಿಯ ಮೂಲಕ ಜ್ಞಾನಪೀಠ ಹಾಗೂ ನೊಬೆಲ್ ಬಹುಮಾನದ ವರೆಗೆ ವ್ಯಾಪಿಸಿಕೊಂಡಿರುತ್ತದೆ. ಯಥಾಪ್ರಕಾರ ಅಕಾಡೆಮಿ, ಪ್ರಾಧಿಕಾರ, ಪರಿಷತ್ತಿನ ಅಧ್ಯಕ್ಷತೆ, ಸದಸ್ಯತ್ವ ಹಾಗೂ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಬಯಕೆಗಳು ಮೌನವರ್ತನೆ ಹಾಗೂ ಇತರ ಲಾಬಿಗಳಿಗೆ ಕಾರಣಗಳಾಗಿವೆ. ಹೋರಾಟ ಹಾಗೂ ಚಳವಳಿಗಳಲ್ಲಿ ಬಿರುಕುಗಳು ಉಂಟಾಗಲೂ ಸರಕಾರದ ಈ ಆಮಿಷಗಳು ಪ್ರಮುಖ ಕಾರಣ ವಹಿಸಿವೆ. ಈ ಎಲ್ಲ ಹಿತಾಸಕ್ತಿಗಳು ವ್ಯವಸ್ಥಿತ ವ್ಯವಹಾರಕ್ಕಾಗಿ ಹಿತ್ತಲು ಬಾಗಿಲಿನಿಂದ ವಿಧಾನಸೌಧ ಪ್ರವೇಶಿಸಿ ಮೇಲಿನ ಮನೆಯಲ್ಲಿ ಕುರ್ಚಿ ಗಿಟ್ಟಿಸಿಕೊಳ್ಳುವ ಪ್ರಯತ್ನಗಳು ವಿಭಿನ್ನ ಮಟ್ಟದಲ್ಲಿ ನಡೆದಿರುತ್ತವೆ. ಈ ಕಾರಣಗಳಿಂದಾಗಿ ಉದ್ದೇಶಿತ ಹೋರಾಟಗಳು ವಿಧಾನಸೌಧದ ಅಂಗಳದಲ್ಲಿ ಬೂದಿಯಾಗಿವೆ. ಇದರಲ್ಲಿ ಧನ್ಯತೆ ಪಡೆದುಕೊಂಡವರು ವಿಧಾನಸೌಧದ ಒಳಹೊರಗೆ ವೇಳವಾಳಿ ಮತ್ತು ಜೋಳವಾಳಿ ಮೌಲ್ಯಗಳನ್ನು ಕಾಪಾಡಿಕೊಂಡು ಬರುವ ಪ್ರಾಮಾಣಿಕತೆಗೆ ಬದ್ಧರಾಗಿದ್ದಾರೆ. ಇವರು ತಮ್ಮ ಬೆಳಗಿನ ಉಪಾಹಾರ ಯಾವುದೋ ಒಂದು ರಾಜಕೀಯ ಪಕ್ಷ ದೊಂದಿಗೆ, ಮಧ್ಯಾಹ್ನದ ಊಟ ಮತ್ತೊಂದು ಪಕ್ಷ ದೊಂದಿಗೆ ಹಾಗೂ ಸಂಜೆಯ ಎಲ್ಲ ವ್ಯವಸ್ಥೆಗಾಗಿ ಇನ್ನೊಂದು ಪಕ್ಷದೊಂದಿಗೆ ಹೊಂದಾಣಿಕೆ ಮಾಡಿ ಕೊಳ್ಳುವಲ್ಲಿ ನಿಸ್ಸೀಮರಾಗಿರುತ್ತಾರೆ. ಇಂಥ ಬದ್ಧತೆ ಗಳನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ವಿಧಾನಸೌಧದ ರಸ್ತೆಗಳಲ್ಲಿ ಪಾಳಿ ಹಚ್ಚಿ ನಿಂತವರ ಸಂಖ್ಯೆ ದಿನೇ ದಿನೇ ಜಾಸ್ತಿಯಾಗುತ್ತಿದೆ.

ಹೀಗೆ ತಮ್ಮ ಯೋಗ್ಯತೆ ಹಾಗೂ ಶಕ್ತಿಗನುಗುಣವಾಗಿ ಸಾಂಸ್ಕೃತಿಕ ಲೋಕದ ಹಲವರು ಬುದ್ಧಿಜೀವಿಗಳು ತಮ್ಮ ಬೌದ್ಧಿಕತೆಯನ್ನು ಧಾರೆ ಎರೆಯುವುದರಲ್ಲಿ ಮಗ್ನರಾಗಿ ರುವುದನ್ನು ಕಾಣಲು ದೂರದ ಬೆಂಗಳೂರು, ದೆಹಲಿಯ ವರೆಗೆ ಹೋಗಬೇಕಾಗಿಲ್ಲ. ಇವರ ನೆಟ್‌ವರ್ಕ್ ಗ್ರಾಮ ಪಂಚಾಯಿತಿ, ಹೋಬಳಿ ಮಟ್ಟದವರೆಗೆ ಹಬ್ಬಿರುತ್ತದೆ. ಬೌದ್ಧಿಕ ವಲಯದ ಈ ದಾಸ್ಯತ್ವವನ್ನು ಹಾಗೂ ವ್ಯವಸ್ಥೆಯ ಹುಳುಕುಗಳನ್ನು ತೆರೆದ ಕಣ್ಣುಗಳಿಂದ ನೋಡುವ ಸಮೂಹ ಮಾಧ್ಯಮಗಳು ಸಹಿತ ಸತ್ಯ ಬಯಲಿಗೆಳೆ ಯುವಲ್ಲಿ ಮೀನಮೇಷ ಎಣಿಸುತ್ತ ಹಿಂದೇಟು ಹಾಕುತ್ತಿವೆ. ಸತ್ಯ ಬಯಲಿಗೆಳೆದರೆ ಎಲ್ಲಿ ತಮ್ಮಿಂದ ಅಪರಾಧ ವಾಯಿತೇನೋ ಎಂದು ನೊಂದುಕೊಳ್ಳುತ್ತಿವೆ. ಇದಕ್ಕೆ ಹೊರತಾದ ಕೆಲ ಪತ್ರಿಕೆಗಳು ಉತ್ತಮ ಕಾರ್ಯ ಮಾಡುತ್ತಿರುವುದನ್ನು ತಳ್ಳಿಹಾಕುವಂತಿಲ್ಲ.

ಬೌದ್ಧಿಕ ವಲಯದಲ್ಲಿ ಕರುಳುಗಳು ಹುರಿಗೊಂಡು ಅಕ್ಷರಗಳು ರೂಪ ಪಡೆಯಬೇಕಾದ ಪ್ರಸ್ತುತ ಸಂದರ್ಭದಲ್ಲಿ, ಬಹಳಷ್ಟು ಬುದ್ಧಿವಂತರು ಕರುಳಿನಿಂದ ಮಾತನಾಡದೆ, ಬುದ್ಧಿಶಕ್ತಿಯ ಪ್ರಯೋಗದ ಮೂಲಕ ಸ್ವಹಿತಾಸಕ್ತಿಯ ಲೆಕ್ಕಾಚಾರವನ್ನು ಚುಕ್ತಾ ಮಾಡಿಕೊಳ್ಳುವ ತಂತ್ರಗಾರಿಕೆಗೆ ಉಪಯೋಗಿಸುತ್ತಿದ್ದಾರೆ. ಭಾರತೀಯ ಸಾಮಾಜಿಕ ಪರಂಪರೆಯಲ್ಲಿ ಕೆಲವರಿಗೆ ಮಾತ್ರ ಸೀಮಿತವಾಗಿದ್ದ ಈ ಬುದ್ಧಿವಂತಿಕೆಯ ತಂತ್ರಗಾರಿಕೆ ಇಂದು ಜಾತಿ, ವರ್ಗ, ಲಿಂಗ, ಮತ, ಪಂಗಡಗಳನ್ನು ಮೀರಿ ಬೆಳೆಯುತ್ತಿದೆ. ಕೊಳೆತ ಕರುಳುಗಳ ಬುದ್ಧಿವಂತಿಕೆಯ ಮಾತುಗಳು ಹಿರಿಯ ಅನುಭಾವಿ ತಲೆಗಳಿಗೆ ಮಾತ್ರ ಸೀಮಿತಗೊಳ್ಳದೆ, ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಎನ್ನುವಂತೆ, ಎರಡು ಮೂರನೆಯ ತಲೆಮಾರಿನಲ್ಲಿಯೂ ಅದರ ಬೇರುಗಳು ಹಬ್ಬಿಕೊಂಡು ಬೆಳೆಯುತ್ತಿವೆ. ಹಸಿದ ಹೊಟ್ಟೆಗಳು, ಬೆಂದ ಜೀವಗಳು, ಬೀದಿ ಸುತ್ತುತ್ತಿರುವ ಪದವೀಧರರು, ಕೊಳೆಗೇರಿಗಳಲ್ಲಿ ನಾರುತ್ತಿರುವ ಕ್ರಾಂತಿಕಾರಿಗಳು ಇಂಥ ಸೋಗಲಾಡಿತನಕ್ಕೆ ಒಳಗಾಗದೆ ಸತ್ಯಕ್ಕೆ ಮುಖಾಮುಖಿಯಾಗಬೇಕಾದ ಜರೂರಾದ ಅಗತ್ಯವಿದೆ. ಬದ್ಧತೆಯ ಬರಹಗಾರರು ಲೇಖನಿಯನ್ನು ಖಡ್ಗಕ್ಕಿಂತ ಹರಿತಗೊಳಿಸುವ ಅನಿವಾರ್ಯತೆಯಿದೆ.

**ಡಾ|| ಕೆ. ಎನ್. ದೊಡ್ಡಮನಿ**
ಸಹಾಯಕ ಪ್ರಾಧ್ಯಾಪಕರು, ಜೈನ ಮಹಾವಿದ್ಯಾಲಯ
ರೈಲ್ವೆ ೩ನೇ ಗೇಟ್ ಹತ್ತಿರ, ಖಾನಾಪೂರ ರಸ್ತೆ, ಟಿಳಕವಾಡಿ
ಬೆಳಗಾವಿ - ೫೯೦ ೦೦೬



ನಭಾವಲೋಕನ

# ಅತಿ ದೊಡ್ಡ ಚಂದ್ರ

**ಹು**ಣ್ಣಿಮೆಯ ಚಂದ್ರ ದೊಡ್ಡದಾಗಿ ಕಾಣುತ್ತದೆ ಎಂಬುದನ್ನು ವಿವರಿಸಬೇಕಾಗಿಲ್ಲ. ಅದು ಉದಯಿಸುತ್ತಿರುವಾಗ ಇನ್ನೂ ದೊಡ್ಡದಾಗಿ ಕಾಣುತ್ತದೆ ಎಂಬುದು ನಮ್ಮ ಭ್ರಮೆ; ಆದರೂ ಕೆಲವು ಚಂದ್ರೋದಯ ಬಹಳ ಆಕರ್ಷಕವಾಗಿ ಕಾಣುತ್ತದೆ ಎಂಬುದು ಸುಳ್ಳಲ್ಲ. ಜೂನ್ ೨೩ರ ಹುಣ್ಣಿಮೆಯ ಚಂದ್ರ ಹಿಂದಿನ ತಿಂಗಳಿನ ಹುಣ್ಣಿಮೆಯ ಚಂದ್ರನಿಗಿಂತ ದೊಡ್ಡದಾಗಿ ಕಾಣುತ್ತದೆ. ಅದನ್ನು ಬರಿಗಣ್ಣು ಗುರುತಿಸಲಾರದು ಅಷ್ಟೇ. ೨೩ರಂದು ಸಂಜೆ ೪ ಗಂಟೆ ೪೨ ನಿಮಿಷಕ್ಕೆ ಹುಣ್ಣಿಮೆ. ಅದಾದ ಅರ್ಧ ಗಂಟೆಗೆ ಚಂದ್ರ-ಭೂಮಿ ದೂರ ಕನಿಷ್ಠ ಕೇವಲ (!) ೩೫೬,೯೧೧ ಕಿ.ಮೀ. ಗಳು. ಆದ್ದರಿಂದ ಲೆಕ್ಕಾಚಾರದ ಪ್ರಕಾರ ಅದು ಅತಿದೊಡ್ಡ ಚಂದ್ರ. ಮಾರ್ಚ್ ೫ರಂದು ಭೂಮಿ-ಚಂದ್ರರ ದೂರ ಕನಿಷ್ಠವೇ ಆಗಿತ್ತು. ಆದರೆ ಆ ಸಂಖ್ಯೆ ೩೬೯,೯೫೭ ಕಿ.ಮೀ. ಈ ವ್ಯತ್ಯಾಸ ಸಾವಿರ ಕಿ.ಮೀ. ಗಳಾದರೂ ಬರಿಗಣ್ಣು ಗುರುತಿಸುವುದು ಸಾಧ್ಯವಿಲ್ಲ.

ಸಂಜೆಯ ಆಕಾಶದಲ್ಲಿ ಗುರು, ಶುಕ್ರ, ಬುಧ ಮತ್ತು ಶನಿ ಇವೆಲ್ಲವನ್ನೂ ನೋಡುವ ಅವಕಾಶವಿದೆ. ಶನಿ ಮಾತ್ರ ಪೂರ್ವದಲ್ಲಿ; ಉಳಿದ ಮೂರೂ ಪಶ್ಚಿಮದಲ್ಲಿ ಕಾಣುತ್ತವೆ. ಕಳೆದ ತಿಂಗಳ ಕೊನೆಯ ವಾರದಲ್ಲಿ ಪುಟ್ಟ ತ್ರಿಕೋಣದಂತೆ ಕಾಣುತ್ತಿದ್ದವು. ಈಗ ಗುರು ಮತ್ತು ಶನಿ ಒಂದರ ಕೆಳಗೊಂದು ಗೆರೆಯ ಹಾಗೆ ಕಾಣುತ್ತವೆ. ಗುರುಗ್ರಹ ದಿನೇ ದಿನೇ ಕೆಳಗಿಳಿದು ೧೯ರಂದು ಸೂರ್ಯನೊಡನೆ ಸೇರುತ್ತದೆ. ಬುಧ ಮತ್ತು ಶುಕ್ರ ಮೇಲೇರುತ್ತವೆ. ೧೦ರಂದು ರೇಖಾ ಚಂದ್ರ ಇವುಗಳೊಡನೆ ಸೇರುತ್ತಾನೆ. ೧೨ರಂದು ಬುಧ ಗ್ರಹವನ್ನು ನೋಡಲು ಅತ್ಯುತ್ತಮ ಅವಕಾಶವಿದೆ.

ಮಂಗಳಗ್ರಹ ಸೂರ್ಯನಿಗೆ ಸಮೀಪವಾಗಿದೆ. ನೋಡುವ ಅವಕಾಶವೇ ಇಲ್ಲ ಎನ್ನಬಹುದು. ೧೫ರಂದು ಕೆಂಪು ಬಣ್ಣದ ರೋಹಿಣಿಯ ಪಕ್ಕದಲ್ಲಿ ದಿಗಂತದ ಅಂಚಿನಲ್ಲಿ ಇರುತ್ತದೆ.

ಆಕಾಶ ಶುಭ್ರವಾಗಿದ್ದರೆ ಸಂಜೆ ನೆತ್ತಿಯ ಮೇಲೆ ಕನ್ಯಾ, ಸಿಂಹ ರಾಶಿಗಳನ್ನು ನೋಡಬಹುದು. ಕನ್ಯಾರಾಶಿಯಲ್ಲಿ ಸುಲಭವಾಗಿ ಗುರುತಿಸಬಹುದಾದ ನಕ್ಷತ್ರವೇ ನೀಲಿ ಬಣ್ಣದ ಚಿತ್ರಾ. ೧೮ರಂದು ಅರ್ಧ ಚಂದ್ರದ ಪಕ್ಕದಲ್ಲಿಯೇ ಕಾಣುತ್ತದೆ. ನಡುರಾತ್ರಿಯಲ್ಲಿ ಮುಳುಗುವಾಗ ಚಿತ್ರಾ ನಕ್ಷತ್ರವನ್ನು ಚಂದ್ರ ಮರೆಮಾಡುವ ಆಚ್ಛಾದನೆ ನಡೆಯುತ್ತದೆ. ಆದರೆ, ಅದು ನಮಗೆ ನೋಡಲು ಸಿಗುವುದಿಲ್ಲ. ಹೀಗೆ ನೀವು ಚಿತ್ರಾ ನಕ್ಷತ್ರವನ್ನು ಗುರುತಿಸಿದ್ದು ಸರಿಯಾಗಿದೆಯೇ ಎಂದು ಪರೀಕ್ಷಿಸಬಹುದು.

ಸಂಜೆಯ ಆಕಾಶದಲ್ಲಿ ಕಾಣುವ ಇತರ ನಕ್ಷತ್ರಪುಂಜಗಳೆಂದರೆ ತುಲಾ ಮತ್ತು ಪೂರ್ವದಲ್ಲಿ ವೃಶ್ಚಿಕ. ತುಲಾ ಬಹಳ ಕ್ಷೀಣವಾದ ಪುಂಜ. ಇದನ್ನು ಪತ್ತೆ ಮಾಡುವುದೇ ಸವಾಲು. ಪಶ್ಚಿಮದ ಅಂಚಿನಲ್ಲಿರುವ ಕಟಕವೂ ಕ್ಷೀಣವಾದದ್ದು. ವೃಶ್ಚಿಕ ಬಹಳ ಸುಂದರವಾದ ಪುಂಜ. ಹೆಸರಿಗೆ ತಕ್ಕಂತೆ ಆಕಾರ ಇದೆ.

ಉತ್ತರದಲ್ಲಿ ಸಪ್ತರ್ಷಿಮಂಡಲ. ದಕ್ಷಿಣದಲ್ಲಿ ತ್ರಿಶಂಕು ಮತ್ತು ಕಿನ್ನರ ಕಾಣುತ್ತವೆ. ತ್ರಿಶಂಕು (ಸದರ್ನ್ ಕ್ರಾಸ್) ವಿನಿಂದ ವೃಶ್ಚಿಕದತ್ತ ಸಾಗುವ ಆಕಾಶಗಂಗೆಯನ್ನು ಚಂದ್ರ ಇಲ್ಲದ ಶುಭ್ರ ರಾತ್ರಿಗಳಲ್ಲಿ ನೋಡಬಹುದು. ಜೂನ್ ತಿಂಗಳಲ್ಲಿ ಅದು ದುರ್ಲಭ.

ತನ್ನ ಕಕ್ಷೆಯಲ್ಲಿ ಒಂದು ಮುಖ್ಯ ಹಂತವನ್ನು ಭೂಮಿ ದಾಟುವ ದಿನ ಜೂನ್ ೨೧. ಅಂದು ದಕ್ಷಿಣಾಯನ. ಅತಿ ದೀರ್ಘ ಹಗಲಿನ ದಿನ.

ಉ

ಪೂ

ಪ

ದ

ಸಪ್ತರ್ಷಿ ಮಂಡಲ

ಶುಕ್ರ

ಮಿಥುನ

ಬುಧ

ಸ್ವಾತಿ

ಸಿಂಹ

ಕನ್ಯಾ

ತುಲಾ

ಶನಿ

ಚಿತ್ರ

ವೃಶ್ಚಿಕ

ತ್ರಿಶಂಕು

ಜೂನ್ ೧೦ರ ಸಂಜೆ
ಚಂದ್ರ-ಬುಧ-ಶುಕ್ರ, ಪುಟ್ಟ ಗುಂಪು

**ಖಗೋಳ ದಿನಚರಿ**

೭ ಚಂದ್ರ-ಮಂಗಳ ಜೋಡಿ
೮ ಅಮಾವಾಸ್ಯೆ ೨೧:೨೪ಕ್ಕೆ
೯ ಚಂದ್ರ-ಗುರು ಜೋಡಿ
ಚಂದ್ರ-ಭೂಮಿಯ ನಡುವೆ ಗರಿಷ್ಠ ಅಂತರ
೧೦ ಚಂದ್ರ-ಬುಧ-ಶುಕ್ರ ಪುಟ್ಟ ಗುಂಪು
೧೨ ಬುಧಗ್ರಹದ ಗರಿಷ್ಠ ಕೋನೋನ್ನತಿ
೧೬ ಚಾಂದ್ರಮಾಸದ ಮೊದಲ ಪಾದ
೧೯ ಗುರು ಮತ್ತು ಸೂರ್ಯ ಜೋಡಿ (ಯುತಿ)
೨೦ ಬುಧ ಮತ್ತು ಶುಕ್ರ ನಡುವೆ ಕನಿಷ್ಠ ಅಂತರ
೨೧ ದಕ್ಷಿಣಾಯನ
೨೩ ಶುಕ್ರ-ಪುನರ್ವಸು ಜೋಡಿ
ಹುಣ್ಣಿಮೆ ೧೬:೪೨ಕ್ಕೆ
ಚಂದ್ರ ಭೂಮಿ ಕನಿಷ್ಠ ಅಂತರ ೧೭:೧೨ಕ್ಕೆ
೨೬ ಬುಧ ಗ್ರಹ ತಟಸ್ಥ (ಹಿನ್ನಡೆ ಆರಂಭ)
೩೦ ಚಾಂದ್ರಮಾಸದ ಕೊನೆಯ ಪಾದ

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧



# ಹುತಾತ್ಮ ಟಿಪ್ಪು ಸುಲ್ತಾನ್‌ನನ್ನು ನೆನೆಯುತ್ತಾ..!

ಜಿ. ಎಂ. ನರಸಿಂಹ ಗುಂಜಹಳ್ಳಿ

**ಟಿ**ಪ್ಪು ಸುಲ್ತಾನ್ ಕ್ರಿ. ಶ. ೧೭೫೦ ನವೆಂಬರ್ ೧೦ರಂದು ಬೆಂಗಳೂರು ಪಕ್ಕ ದೇವನಹಳ್ಳಿಯಲ್ಲಿ ಜನಿಸಿದನು. ಬ್ರಿಟಿಷ್ ವಸಾಹತುಶಾಹಿಗಳನ್ನು ಈ ದೇಶದಿಂದ ಒದ್ದೋಡಿಸಬೇಕೆಂದು ಛಲದಿಂದ ರಣರಂಗದಲ್ಲಿ ೧೭೯೯ರ ಮೇ ೪ರಂದು ಟಿಪ್ಪು ಹುತಾತ್ಮನಾದಾಗ ಆತನ ವಯಸ್ಸು ಕೇವಲ ೪೮ ವರ್ಷಗಳು ಮಾತ್ರ. ಹೈದರಾಲಿ ಮತ್ತು ಟಿಪ್ಪು ಮೈಸೂರು ಪ್ರಾಂತ್ಯವನ್ನು ಆಳಿದ್ದು ೩೮ ವರ್ಷಗಳು. ಇದರಲ್ಲಿ ೯ ವರ್ಷಗಳ ಕಾಲ ಬ್ರಿಟಿಷ್ ವಸಾಹತುಶಾಹಿ ವಿರುದ್ಧ ಈ ನಾಡನ್ನು ಉಳಿಸಿಕೊಳ್ಳಲು ಯುದ್ಧಗಳನ್ನು ಮಾಡಿದ್ದಾರೆ. ಉಳಿದ ೩೮ ವರ್ಷಗಳ ಕಾಲ ತಮ್ಮ ನಾಡನ್ನು ಅಭಿವೃದ್ಧಿಪಡಿಸುತ್ತಾ ಯುದ್ಧಗಳ ತಯಾರಿಯಲ್ಲಿ ಕಳೆದಿದ್ದಾರೆ. ಈತನ ಸಾಮ್ರಾಜ್ಯ ಉತ್ತರದಲ್ಲಿ ಕೃಷ್ಣಾ ನದಿಯಿಂದ ದಕ್ಷಿಣದ ದಿಂಡುಗಲ್ಲಿನವರೆಗೆ, ಪಶ್ಚಿಮದ ಕೇರಳದ ಮಲಬಾರಿನಿಂದ ಪೂರ್ವದ ಪೂರ್ವಘಟ್ಟ ಪ್ರದೇಶಗಳವರೆಗೆ, ತಮಿಳುನಾಡಿನ ಐದು ಜಿಲ್ಲೆಗಳು ಮತ್ತು ಆಂಧ್ರದ ರಾಯಲಸೀಮೆ ಪ್ರದೇಶಗಳವರೆಗೆ ಒಟ್ಟು ೨ ಲಕ್ಷ ಚ.ಕಿ.ನಷ್ಟು ವ್ಯಾಪ್ತಿ ಹೊಂದಿತ್ತು. ಆಗಿನ ಕಾಲದಲ್ಲಿ ಬ್ರಿಟಿಷರ ಆಡಳಿತದಲ್ಲಿದ್ದ ಪ್ರದೇಶಗಳಿಗಿಂತ ಟಿಪ್ಪುವಿನ ಆಡಳಿತದಲ್ಲಿದ್ದ ಪ್ರದೇಶ ದೊಡ್ಡದಾಗಿತ್ತು. ಟಿಪ್ಪುವಿನ ಜೀವನದೃಷ್ಟಿ ಭಾರತದ ಇತರ ರಾಜರದಕ್ಕಿಂತಲೂ ಭಿನ್ನವಾಗಿತ್ತು. ಹೈದರ್ ಮತ್ತು ಟಿಪ್ಪು ಸಿಂಹಾಸನದ ಮೇಲೆ ಕುಳಿತುಕೊಳ್ಳುವುದಕ್ಕಿಂತ ಹೆಚ್ಚಾಗಿ ಕುದುರೆ ಮೇಲೆ ಕುಳಿತುಕೊಳ್ಳುತ್ತಿದ್ದರಂತೆ. ನರಿಯಂತೆ ನೂರು ವರ್ಷ ಬಾಳುವುದಕ್ಕಿಂತ ಹುಲಿಯಂತೆ ಒಂದು ವರ್ಷ ಬಾಳುವುದು ಉತ್ತಮ ಎನ್ನುವುದು ಆತನ ಜೀವನಮೌಲ್ಯವಾಗಿತ್ತು.

ಹೈದರಾಲಿ ಹುತಾತ್ಮನಾದ ನಂತರ ಟಿಪ್ಪು ಸುಲ್ತಾನ್ ತನ್ನ ತಂದೆಯ ಉತ್ತರಾಧಿಕಾರಿಯಾಗಿ ಅಧಿಕಾರ ಸ್ವೀಕರಿಸಿದನು. ಆಗ ಆತನ ವಯಸ್ಸು ಕೇವಲ ೩೨ ವರ್ಷ ಮಾತ್ರ. ಟಿಪ್ಪು ಪಟ್ಟಕ್ಕೆ ಬರುವ ಮುನ್ನ ಭಾರತದ ಪರಿಸ್ಥಿತಿ ಸಂಕ್ರಮಣ ಸ್ಥಿತಿಯಲ್ಲಿತ್ತು. ಔರಂಗಜೇಬನ ಮರಣದ ನಂತರ ಮೊಗಲರ ಅಡಿಯಲ್ಲಿದ್ದ ರಾಜರುಗಳು ಸ್ವಾತಂತ್ರ್ಯ ಘೋಷಿಸಿಕೊಂಡು ರಾಜ ದರ್ಬಾರು ಮಾಡಲು ಪ್ರಾರಂಭಿಸಿದ್ದರು. ಭಾರತದಲ್ಲಿ ರಾಜರು ತಮ್ಮ ತಮ್ಮಲ್ಲೇ ಕಚ್ಚಾಡುತ್ತಿದ್ದರು. ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯ ಪತನವಾಗಿ ಪಾಳೆಗಾರರ ಅಟ್ಟಹಾಸ ಮಿತಿಮೀರಿತ್ತು. ಇವೆಲ್ಲವು ಗಳಿಗಿಂತ ಮುಖ್ಯವಾಗಿ ೧೭೫೭ರಲ್ಲಿ ಜರುಗಿದ ಪ್ಲಾಸಿಕದನದಲ್ಲಿ ಬಂಗಾಳದ ನವಾಬ ಸಿರಾಜುದ್ದೌಲನನ್ನು ಬ್ರಿಟಿಷ್ ವಸಾಹತುಶಾಹಿಗಳು ಸೋಲಿಸಿ ದಕ್ಷಿಣ ಭಾರತವನ್ನು ಲೂಟಿ ಮಾಡಲು ಮುನ್ನುಗ್ಗಿ ಬರುತ್ತಿದ್ದರು.

ಟಿಪ್ಪುವಿನ ಮೈಸೂರು ಸೈನ್ಯವು ಬ್ರಿಟಿಷ್ ವಸಾಹತುಶಾಹಿ ಮಿತ್ರಕೂಟಗಳ ವಿರುದ್ಧ ನಾಲ್ಕು ಯುದ್ಧಗಳನ್ನು ನಡೆಸಿತು. ಈ ನಾಲ್ಕೂ ಯುದ್ಧಗಳಲ್ಲಿ ಟಿಪ್ಪು ಭಾಗವಹಿಸಿದ್ದಲ್ಲದೇ ಕಡೆಯ ಮೂರು ಯುದ್ಧಗಳಲ್ಲಿ ತನ್ನ ಸೇನೆಯ ಮಹಾ ದಂಡನಾಯಕನಾಗಿದ್ದನು. ಈ ಎಲ್ಲಾ ಯುದ್ಧಗಳಲ್ಲಿ ಟಿಪ್ಪುವಿನ ಜೊತೆ ದೇಶದ ಯಾವ ರಾಜನೂ ಇಲ್ಲ. ಮೈಸೂರು ಸೈನಿಕರು ನಡೆಸಿದ ಈ ಯುದ್ಧಗಳು ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಭಾರತದ ಜನತೆ ಮೊಳಗಿಸಿದ ಮೊದಲ ದೇಶಪ್ರೇಮಿ ರಣಕಹಳೆಯಾಗಿತ್ತು.

ಒಂದನೇ ಆಂಗ್ಲೋ-ಮೈಸೂರು ಯುದ್ಧವು ೧೭೬೭ರಿಂದ ೧೭೬೯ರವರೆಗೆ ನಡೆಯಿತು. ಈ ಯುದ್ಧದಲ್ಲಿ ಹೈದರಾಲಿಯು ಫ್ರೆಂಚರ, ಮರಾಠರ, ಹೈದರಾಬಾದು ನಿಜಾಮರ ಜೊತೆ ಮೈತ್ರಿ ಮಾಡಿಕೊಂಡು ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಯುದ್ಧ ನಡೆಸಿದ. ಈ ಯುದ್ಧದಲ್ಲಿ ಹೈದರಾಲಿಯು ಜಯ ಗಳಿಸಿದ. ೧೭೫೭ರಲ್ಲಿ ಪ್ಲಾಸಿಕದನದಲ್ಲಿ ಜಯ ಗಳಿಸಿ ಉತ್ತರ ಭಾರತವನ್ನು ಆಕ್ರಮಿಸಿ ದಕ್ಷಿಣ ಭಾರತವನ್ನು ನುಂಗುವ ಬ್ರಿಟಿಷರ ಯೋಜನೆಯನ್ನು ಹೈದರಾಲಿಯು ಧ್ವಂಸ ಮಾಡಿದ. ಇದು ವಸಾಹತುಶಾಹಿ ವಿರುದ್ಧ ಯುದ್ಧದಲ್ಲಿ ಹೈದರಾಲಿ ಪಡೆದ ವಿಜಯ ಮಾತ್ರವಲ್ಲ, ಬ್ರಿಟಿಷರ ವಿರುದ್ಧ ಭಾರತೀಯರು ಗಳಿಸಿದ ಪ್ರಪ್ರಥಮ ವಿಜಯವಾಗಿತ್ತು. ಈ ಯುದ್ಧದಲ್ಲಿ ಟಿಪ್ಪು ಕೂಡ ಭಾಗವಹಿಸಿದ್ದ.

ಎರಡನೆಯ ಆಂಗ್ಲೋ ಮೈಸೂರು ಯುದ್ಧವು

ಟಿಪ್ಪು ಧಾರ್ಮಿಕ ಸಹಿಷ್ಣುತೆಯುಳ್ಳ ವ್ಯಕ್ತಿಯಾಗಿದ್ದ. ಈತ ಅನುಸರಿಸಿದ್ದು ಸೂಫಿ ಧರ್ಮವನ್ನು. ತನ್ನ ಸಂಸ್ಥಾನದಲ್ಲಿ ಪ್ರತಿಯೊಂದು ಧರ್ಮಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದ. ಈತನು ಶ್ರೀರಂಗಪಟ್ಟಣ, ಮೇಲುಕೋಟೆ, ನಂಜನಗೂಡು ದೇವಾಲಯಗಳಿಗೆ ಬೆಳ್ಳಿ, ಚಿನ್ನ, ಭೂಮಿಯನ್ನು ದಾನ ನೀಡಿದ್ದಾನೆ. ಶೃಂಗೇರಿ ಮಠದ ಮೇಲೆ ಮರಾಠರು ದಾಳಿ ಮಾಡಿ ಸಂಪತ್ತನ್ನು ಲೂಟಿ ಮಾಡಿದಾಗ ಟಿಪ್ಪು ಆರ್ಥಿಕ ಸಹಾಯ ಮಾಡಿದ್ದಾನೆ. ಈತನ ಆಡಳಿತದಲ್ಲಿ ಮಂತ್ರಿ, ಸೇನೆಯ ದಂಡನಾಯಕರು ಹೆಚ್ಚಾಗಿ ಹಿಂದೂಗಳೇ ಆಗಿದ್ದರು. ಒಟ್ಟಾರೆ, ಈತನ ಕಾಲದಲ್ಲಿ ಹಿಂದುಗಳು ಮತ್ತು ಕ್ರೈಸ್ತರು ಅನ್ಯೋನ್ಯವಾಗಿದ್ದರು. ಎರಡನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಮಂಗಳೂರಿನಲ್ಲಿ ಕ್ರಿಶ್ಚಿಯನ್ನರು ಬ್ರಿಟಿಷರಿಗೆ ಸಹಾಯ ಮಾಡಿ ಟಿಪ್ಪುವಿಗೆ ದ್ರೋಹ ಮಾಡಿದ್ದರಿಂದ ಅವರನ್ನು ಗೋವಾಕ್ಕೆ ಗಡೀಪಾರು ಮಾಡಿದ. ಕೊಡಗಿನಲ್ಲಿ ಅಲ್ಲಿನ ಸಾಮಂತರು ಪದೇ ಪದೇ ಆಡಳಿತಕ್ಕೆ ತೊಂದರೆ ಕೊಡುತ್ತಿದ್ದುದರಿಂದ ಅವರನ್ನು ಮುಸ್ಲಿಂ ಧರ್ಮಕ್ಕೆ ಮತಾಂತರಿಸಿ ಶಿಕ್ಷೆ ಕೊಡುತ್ತಾನೆ. ಇಲ್ಲಿ ಈತನ ಶಿಕ್ಷೆಯಿಂದ ಮತಾಂತರಗೊಂಡವರು ಕೇವಲ ೫೦೦ (ಐದುನೂರು) ಜನರು ಮಾತ್ರ. ಉಳಿದ ಜನರು ಸ್ವ ಇಚ್ಛೆಯಿಂದ ಮುಸ್ಲಿಂ ಧರ್ಮಕ್ಕೆ ಮತಾಂತರ ಆದರೆಂದು ಇತಿಹಾಸ ಹೇಳುತ್ತದೆ. ಆದರೆ ಬ್ರಾಹ್ಮಣಶಾಹಿಗಳು ಇಂದು ಟಿಪ್ಪು ಸುಲ್ತಾನನನ್ನು ಮತಾಂಧ, ಕನ್ನಡದ್ರೋಹಿ, ನಿರಂಕುಶ ಅಧಿಕಾರಿ ಎಂದು ಅಪಪ್ರಚಾರ ಮಾಡುತ್ತಿದ್ದಾರೆ.

೧೭೮೦ರಿಂದ ೧೭೮೪ರವರೆಗೆ ನಡೆಯಿತು. ಈ ಯುದ್ಧದಲ್ಲಿ ಕೂಡ ಮರಾಠರು, ಹೈದರಾಬಾದು ನಿಜಾಮ, ಫ್ರೆಂಚರ ಮೈತ್ರಿಕೂಟದೊಂದಿಗೆ ಹೈದರಾಲಿ ಬ್ರಿಟಿಷ್ ವಸಾಹತು ಶಾಹಿಯ ವಿರುದ್ಧ ಯುದ್ಧ ನಡೆಸಿದನು. ಈ ಯುದ್ಧದಲ್ಲಿ ಹೈದರಾಲಿಯ ಕಡೆಯಿಂದ ಮೈಸೂರು ಸೈನ್ಯದ ಒಂದು ಲಕ್ಷ ಯೋಧರು ಬಹಳ ವೀರಾವೇಶದಿಂದ ಹೋರಾಡಿದರು. ಮೈಸೂರು ಸೈನ್ಯದ ನೈಪುಣ್ಯವನ್ನು ಕಂಡು ಫ್ರೆಂಚರು ಬೆರಗಾದರು. ಇದರಲ್ಲಿ ಹೈದರಾಲಿಯು ಪ್ರಾರಂಭದಲ್ಲಿ ಗೆಲುವಿನ ಕಡೆಗೆ ಮುನ್ನುಗ್ಗುತ್ತಿದ್ದ. ಇದನ್ನು ಅರಿತು ಬ್ರಿಟಿಷ್ ವಸಾಹತುಶಾಹಿಗಳು ಹೈದರಾಲಿ ವಿರುದ್ಧ ನೇರ ಕಾಳಗದಿಂದ ಮೈಸೂರು ಸೈನ್ಯವನ್ನು ಗೆಲ್ಲಲು ಆಗುವುದಿಲ್ಲ ಎಂದು ಅರಿತುಕೊಂಡು ತಮ್ಮ ವಸಾಹಾತುಶಾಹಿಯ ಆಯುಧಗಳಾದ ಕುತಂತ್ರ, ಮೋಸ, ದ್ರೋಹ ಹಾಗೂ ಒಡೆದು ಆಳುವ ನೀತಿಗಳಿಗೆ ಮೊರೆಹೋದರು. ಈ ಯುದ್ಧದ ಮಧ್ಯದಲ್ಲಿ ಬ್ರಿಟಿಷರ ಕುತಂತ್ರದಿಂದ ಮರಾಠರು ಮತ್ತು ಹೈದರಾಬಾದು ನಿಜಾಮ ತಟಸ್ಥರಾದರೆ ಫ್ರಾನ್ಸ್‌ನಲ್ಲಿ ಬ್ರಿಟಿಷ್‌ರಿಗೆ ಮತ್ತು ಫ್ರೆಂಚರ ನಡುವೆ ಆದ ಒಪ್ಪಂದದ ಪರಿಣಾಮವಾಗಿ ಫ್ರೆಂಚರು ಕೂಡ ಈ ಯುದ್ಧದಿಂದ ಹಿಂದೆ ಸರಿದರು. ಇವೆಲ್ಲವುಗಳಿಗಿಂತ ಮುಖ್ಯವಾಗಿ ಹೈದರಾಲಿಯು ಕೂಡ ಅನಾರೋಗ್ಯದಿಂದ ಡಿಸೆಂಬರ್ ೭, ೧೭೮೨ರಲ್ಲಿ ರಣರಂಗದಲ್ಲೇ ಹುತಾತ್ಮನಾದ.

ಟಿಪ್ಪು ಏಕಾಂಗಿಯಾಗಿ ಯುದ್ಧವನ್ನು ಮುಂದುವರಿಸಿದ. ಈ ಸಂದರ್ಭದಲ್ಲಿ ಬ್ರಿಟಿಷ್ ವಸಾಹತುಶಾಹಿ ಸೈನ್ಯ ಮೇಲುಗೈ ಪಡೆದರೂ ನಂತರ ಟಿಪ್ಪುವಿನ ಸೈನ್ಯವು ಬ್ರಿಟಿಷ್ ವಸಾಹತುಶಾಹಿಯ ಸೈನ್ಯವನ್ನು ಮಂಡಿಯೂರಿ ಮಣಿಸಿತು. ಇದರಲ್ಲಿ ೪೦೦೦ ಬ್ರಿಟಿಷ್ ಸೈನಿಕರನ್ನು ಬಂಧಿಸಿದರು. ಭಾರತದ ಇತಿಹಾಸದಲ್ಲಿ ಇಷ್ಟೊಂದು ಸಂಖ್ಯೆಯಲ್ಲಿ ಬ್ರಿಟಿಷ್ ಸೈನಿಕರನ್ನು ಸೆರೆಹಿಡಿದಿದ್ದ ಉದಾಹರಣೆ ಬೇರೊಂದಿಲ್ಲ. ಇದಕ್ಕೆ ೧೭೮೪ರಲ್ಲಿ ಮಂಗಳೂರು ಒಪ್ಪಂದದ ಮೂಲಕ ಕೊನೆಹಾಡಿದರು. ೧೭೮೬ರಲ್ಲಿ ಮೈಸೂರಿನ ಮೇಲೆ ಮರಾಠರು ದಂಡೆತ್ತಿ ಬಂದರು. ಈ ಸಂದರ್ಭದಲ್ಲಿ ಟಿಪ್ಪು ಮರಾಠರಿಗೆ, ''ನಾನು ನಿಮ್ಮ ಶತ್ರು ಅಲ್ಲ, ನಿಮ್ಮ ಶತ್ರುಗಳು ಬ್ರಿಟಿಷರು'' ಎಂದು ಹೇಳಿದರೂ ಅವರು ಕೇಳಲಿಲ್ಲ. ಈ ಯುದ್ಧದಲ್ಲಿ ಟಿಪ್ಪು ಜಯಶಾಲಿ ಯಾದರೂ ಕೂಡ ೧೭೮೭ರಲ್ಲಿ ಗಜೇಂದ್ರಗಡದಲ್ಲಿ ಒಪ್ಪಂದ ಮಾಡಿಕೊಂಡ. ಈ ಒಪ್ಪಂದವನ್ನು ಟಿಪ್ಪು ಯಾವುದೇ ಲಾಭವಿಲ್ಲದೆ ಮಾಡಿಕೊಂಡ. ಏಕೆಂದರೆ ಮುಂದೆ ಬ್ರಿಟಿಷರ ವಿರುದ್ಧ ಯುದ್ಧ ಮಾಡುವಾಗ ತನಗೆ ಬೆಂಬಲ ಕೊಡಬಹುದು ಎಂಬ ನಂಬಿಕೆಯಿಂದ.

ಮೂರನೇ ಆಂಗ್ಲೋ ಮೈಸೂರು ಯುದ್ಧ ೧೭೯೦ರಿಂದ ೧೭೯೨ರವರೆಗೆ ನಡೆಯಿತು. ಬ್ರಿಟಿಷರು, ಮರಾಠರು, ಹೈದರಾಬಾದಿನ ನಿಜಾಮ ಹಾಗೂ ಚಿಕ್ಕಬಳ್ಳಾಪುರ, ಪುಂಗನೂರು, ಮದನಪಲ್ಲಿ, ಆನೇಕಲ್ ಇತ್ಯಾದಿ ಸ್ಥಳಗಳ ಪಾಳೆಗಾರರು ಸೇರಿ ೧೦ ಲಕ್ಷ ಸೈನಿಕರು (ಇದರಲ್ಲಿ ಬ್ರಿಟಿಷರದು ಕೇವಲ ೪೦ ಸಾವಿರ ಸೈನಿಕರು ಮಾತ್ರ) ಟಿಪ್ಪುವಿನ ಮೇಲೆ ಯುದ್ಧ ಸಾರಿದರು. ಮೊಟ್ಟ ಮೊದಲ ಬಾರಿಗೆ ಗವರ್ನರ್ ಜನರಲ್ ಕಾರನ್‌ವಾಲೀಸನೇ ಖುದ್ದು ಸೈನ್ಯದ ಉಸ್ತುವಾರಿ ವಹಿಸಿದ. ಈ ಮೈತ್ರಿಕೂಟದಲ್ಲಿ ಒಬ್ಬೊಬ್ಬರು ಒಂದೊಂದು ಉದ್ದೇಶ ಹೊಂದಿದ್ದರೆ ಬ್ರಿಟಿಷರಿಗೆ ಮಾತ್ರ ಭಾರತದ ಮೇಲಿನ ವಸಾಹತುಶಾಹಿ ಆಕ್ರಮಣಕ್ಕೆ ಅಡ್ಡಿಯಾಗಿದ್ದ ಟಿಪ್ಪುವನ್ನು ನಿರ್ಮೂಲನ ಮಾಡುವುದೇ ಆಗಿತ್ತು.

ಈ ಯುದ್ಧಕ್ಕೆ ಟಿಪ್ಪು ಫ್ರೆಂಚರ ಸಹಾಯ ಕೇಳಿದ. ಫ್ರಾನ್ಸ್ ಕ್ರಾಂತಿಯ ಹೊಸ್ತಿಲಲ್ಲಿದ್ದುದರಿಂದ ಸಹಾಯ ದೊರೆಯಲಿಲ್ಲ. ಟಿಪ್ಪು ತನ್ನ ೧ ಲಕ್ಷ ೮೦ ಸಾವಿರ ಸೈನ್ಯ ದೊಂದಿಗೆ ಏಕಾಂಗಿಯಾಗಿ ಹೋರಾಡಿದ. ಇದರಲ್ಲಿ ಪ್ರಾರಂಭದಲ್ಲಿ ಟಿಪ್ಪುವಿಗೆ ಮುನ್ನಡೆ ಸಿಕ್ಕಿತು. ಟಿಪ್ಪುವಿನ ಚಾಣಾಕ್ಷ ಯುದ್ಧತಂತ್ರಗಳಿಂದ ವಸಾಹತುಶಾಹಿ ಮೈತ್ರಿಕೂಟದ ಸೈನ್ಯವನ್ನು ನಿತ್ರಾಣ ಮಾಡಿದ. ಮೈತ್ರಿಕೂಟದ ೧೦ ಲಕ್ಷ ಸೈನ್ಯ ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಲು ಸಾಧ್ಯವಾಗಲೇ ಇಲ್ಲ. ಆದರೆ ವಸಾಹತುಶಾಹಿಗಳು ತಮ್ಮ ಕುಟಿಲ ರಾಜತಂತ್ರ, ಅಪಾರ ಸೇನಾಬಲ ಹಾಗೂ ಮೋಸದ ಯುದ್ಧ ತಂತ್ರಗಳಿಂದ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಲು ಸಂಚು ಹೂಡಿದರು. ಈ ಯುದ್ಧದಲ್ಲಿ ಟಿಪ್ಪು ಕೂಡ ವೀರಾವೇಶದಿಂದ ಹೋರಾಡಿದ. ಈ ಸಂದರ್ಭದಲ್ಲಿ ವಸಾಹತುಶಾಹಿಗಳಿಗೆ ಮಿತ್ರಪಡೆಗಳ ಬೆಂಬಲ ಮುಂದುವರಿಯುವುದು ಕಷ್ಟವಾಗಿತ್ತು. ಆದ್ದರಿಂದ ಬ್ರಿಟಿಷರು ಕೂಡ ಶಾಂತಿ ಸಂಧಾನಕ್ಕಾಗಿ ಕಾಯುತ್ತಿದ್ದರು. ಟಿಪ್ಪುವಿಗೂ ಇದು ಬೇಕಾಗಿತ್ತು. ೧೭೯೨ರಲ್ಲಿ ಶ್ರೀರಂಗಪಟ್ಟಣ ಒಪ್ಪಂದವಾಯಿತು.

ಈ ಒಪ್ಪಂದದ ಪ್ರಕಾರ –

೧. ಸುಮಾರು ೩ ಕೋಟಿಗಳಷ್ಟು ಆದಾಯ ತರುತ್ತಿದ್ದ ಹೆಚ್ಚು ಕಡಿಮೆ ತನ್ನ ಅರ್ಧದಷ್ಟು ಸಾಮ್ರಾಜ್ಯವನ್ನು ಬ್ರಿಟಿಷ್ ವಸಾಹತುಶಾಹಿಗಳಿಗೆ ಬಿಟ್ಟುಕೊಟ್ಟ.
೨. ಯುದ್ಧದ ವೆಚ್ಚಕ್ಕಾಗಿ ೩ ಕೋಟಿ ೩೦ ಲಕ್ಷ ರೂಪಾಯಿಗಳು ದಂಡ ತೆರಬೇಕಾಯಿತು.
೩. ಯುದ್ಧದಲ್ಲಿ ಸೆರೆಸಿಕ್ಕ ಎಲ್ಲಾ ಬ್ರಿಟಿಷ್ ಮೈತ್ರಿಕೂಟದ ಸೈನಿಕರನ್ನು ಬಿಟ್ಟುಕೊಡಬೇಕಾಯಿತು.
೪. ದಂಡದ ಹಣ ಖಾತರಿಗಾಗಿ ತನ್ನ ಇಬ್ಬರು ಮಕ್ಕಳನ್ನು ಬ್ರಿಟಿಷರ ಬಳಿ ಒತ್ತೆ ಇಟ್ಟ.

ದೇಶದ ಇತಿಹಾಸದಲ್ಲಿ ಒಬ್ಬ ರಾಜ ತನ್ನ ಮಕ್ಕಳನ್ನು ಒತ್ತೆಯಿಟ್ಟ ಉದಾಹರಣೆ ಮತ್ತೊಂದಿಲ್ಲ. ಟಿಪ್ಪು ಯುದ್ಧದಲ್ಲಿ ಸೋಲುತ್ತಿದ್ದರೂ ಕೂಡ ಬಹುಬೇಗನೆ ಮತ್ತೆ ಬಲಿಷ್ಠವಾದ ಸೈನ್ಯವನ್ನು ಕಟ್ಟುತ್ತಿದ್ದ. ಟಿಪ್ಪುವಿಗೆ ಭಾರತದ ಯಾವ ರಾಜನೂ ಸಹಾಯ ಮಾಡಲಿಲ್ಲ. ಹೇಗಾದರೂ ಮಾಡಿ ಬ್ರಿಟಿಷ್ ವಸಾಹತುಶಾಹಿಗಳನ್ನು ದೇಶದಿಂದ ಒದ್ದೋಡಿಸ ಬೇಕೆಂಬ ಉದ್ದೇಶದಿಂದ ಟಿಪ್ಪು ವಿದೇಶಿ ಶಕ್ತಿಗಳ ನೆರವು ಕೇಳಲು ಪ್ರಯತ್ನಿಸಿದ. ಇರಾನ್, ಟರ್ಕಿ, ಆಫ್ಘಾನಿಸ್ತಾನ ಹಾಗೂ ಫ್ರಾನ್ಸ್‌ನ ನೆಪೋಲಿಯನ್ ಬೋನಪಾರ್ಟ್‌ರನ್ನು ಸೈನ್ಯದ ನೆರವು ಕೇಳಿದ. ಇವರಲ್ಲಿ ನೆಪೋಲಿಯನ್ ಸೈನ್ಯ ಮಧ್ಯ ಏಷ್ಯಾತನಕ ಮತ್ತು ಆಫ್ಘಾನಿಸ್ತಾನ ಸೈನ್ಯ ಲಾಹೋರ್‌ತನಕ ಬಂದಿದ್ದರೂ ಬ್ರಿಟಿಷರ ಕುತಂತ್ರದಿಂದ ಹಿಂತಿರುಗಬೇಕಾಯಿತು. ಉಳಿದ ಯಾರ ಕಡೆಯಿಂದಲೂ ನೆರವು ಸಿಗಲಿಲ್ಲ.

ವೆಲ್ಲೆಸ್ಲಿ ಭಾರತದ ಗವರ್ನರ್ ಜನರಲ್ ಆಗಿ ಬಂದ ಮೇಲೆ ಸಹಾಯಕ ಸೈನ್ಯ ಪದ್ಧತಿಯನ್ನು ಜಾರಿಗೆ ತಂದ. ಈ ಪದ್ಧತಿಗೆ ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ೧೭೯೮ರಲ್ಲಿ ಹೈದರಾಬಾದಿನ ನಿಜಾಮನು ಬ್ರಿಟಿಷರ ಪರಮಾಧಿಪತ್ಯವನ್ನು ಒಪ್ಪಿಕೊಂಡು ಸಹಿ ಮಾಡಿದ. ಈ ಸಹಾಯಕ ಸೈನ್ಯ ಪದ್ಧತಿಗೆ ಬ್ರಿಟಿಷರು ಟಿಪ್ಪುವಿಗೆ ಸಹಿ ಹಾಕಲು ಷರತ್ತು ಹಾಕಿದರು. ಪ್ರಾಣಕ್ಕೆ ಸಮನಾಗಿದ್ದ ಸ್ವಾತಂತ್ರ್ಯವನ್ನು ತೊರೆದು ಇಂತಹ ಪದ್ಧತಿಗೆ ಟಿಪ್ಪು ಸಹಿ ಹಾಕಲಾರ ಎಂದು ಅವರಿಗೆ ಮೊದಲೇ ಗೊತ್ತಿತ್ತು. ಆದರೆ ಯುದ್ಧಕ್ಕೆ ಯಾವುದಾದರೊಂದು ನೆಪ ಬೇಕಾಗಿತ್ತು, ಅಷ್ಟೇ.

ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧ ೧೭೯೯ ಫೆಬ್ರವರಿ ೩ರಂದು ಪ್ರಾರಂಭವಾಯಿತು. ಬ್ರಿಟಿಷರ ಸೈನ್ಯ ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಲು ಹತ್ತಿರ ಬಂದಿತು. ಯುದ್ಧದಲ್ಲಿ ಟಿಪ್ಪು ಗೌರವಯುತ ಸಂಧಾನಮಾರ್ಗ ಗಳಿಂದ ಸ್ವಾತಂತ್ರ್ಯ ಉಳಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಬ್ರಿಟಿಷರು ಟಿಪ್ಪುವಿನ ಸಂಪೂರ್ಣ ಶರಣಾಗತಿಯನ್ನು ಬಯಸಿದರು. ಈ ಯುದ್ಧದಲ್ಲಿ ತಾನು ಸಾಯುತ್ತೇನೆಂದು

**ಸಾರಾ ಅಬೂಬಕ್ಕರ್, ಸಿ. ಎನ್. ರಾಮಚಂದ್ರನ್, ಎಸ್. ಜಿ. ಸಿದ್ಧರಾಮಯ್ಯ**

**– ಅಭಿನಂದನೆಗಳು –**

ದಿಟ್ಟ, ಪ್ರಗತಿಪರ ಲೇಖಕಿ ನಾಡೋಜ ಸಾರಾ ಅಬೂಬಕ್ಕರ್
ಖ್ಯಾತ ವಿಮರ್ಶಕ - ಲೇಖಕ ಡಾ।। ಸಿ. ಎನ್. ರಾಮಚಂದ್ರನ್
ಪ್ರಗತಿಪರ ಚಿಂತಕ, ಕವಿ, ಬರಹಗಾರ ಪ್ರೊ।। ಎಸ್. ಜಿ. ಸಿದ್ಧರಾಮಯ್ಯ

ಈ ಮೂವರನ್ನೂ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಶಸ್ತಿ ಸಮಿತಿಯು ನೀಡುವ 'ಮಾಸ್ತಿ ಪ್ರಶಸ್ತಿ'ಗಾಗಿ ಆಯ್ಕೆ ಮಾಡಲಾಗಿದೆ. ಪ್ರಶಸ್ತಿ ಪುರಸ್ಕೃತ ಲೇಖಕರನ್ನು 'ಹೊಸತು ಪತ್ರಿಕೆ' ಹಾಗೂ 'ನವಕರ್ನಾಟಕ ಪ್ರಕಾಶನ'ವು ಹಾರ್ದಿಕವಾಗಿ ಅಭಿನಂದಿಸುತ್ತದೆ.

ಗೊತ್ತಿದ್ದರೂ ಕೂಡ, ತನ್ನ ನಾಡನ್ನು ಬ್ರಿಟಿಷರಿಗೆ ಒಪ್ಪಿಸಿದರೆ ಸಾಮಂತನ ಸ್ಥಾನಮಾನ ನೀಡುತ್ತೇವೆಂದು ವೆಲ್ಲೆಸ್ಲಿ ಹೇಳಿದರೂ ಕೂಡ, ಟಿಪ್ಪು ಆಯ್ಕೆ ಮಾಡಿಕೊಂಡಿದ್ದು ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ಮಡಿಯುವ ದಾರಿಯನ್ನೇ ಹೊರತು ಶರಣಾಗತನಾಗಿ ನರಿಯಂತೆ ಬಾಳುವ ಬದುಕನ್ನಲ್ಲ.

ಬ್ರಿಟಿಷರ ಮೈತ್ರಿಕೂಟದೊಂದಿಗೆ ಟಿಪ್ಪು ತನ್ನ ಸೈನ್ಯದ ಮಹಾ ದಂಡನಾಯಕನಾಗಿ ಏಕಾಂಗಿಯಾಗಿ ಹೋರಾಟ ಮಾಡುತ್ತಲೇ ಯುದ್ಧದಲ್ಲಿ ಮೈಸೂರು ಹುಲಿ ಟಿಪ್ಪು ಸುಲ್ತಾನ್ ೧೭೯೯ ಮೇ ೪ರಂದು ಹುತಾತ್ಮನಾದ. ಹೀಗೆ ನಾಲ್ಕು ದಶಕಗಳ ಕಾಲ ಬ್ರಿಟಿಷ್ ವಸಾಹತುಶಾಹಿಯಿಂದ ಮೈಸೂರು ಜನತೆಯನ್ನು ರಕ್ಷಿಸಿದ ಟಿಪ್ಪು ಹುತಾತ್ಮನಾದ. ಟಿಪ್ಪು ಸಾವಿನ ವಿಷಯ ಬ್ರಿಟಿಷರಿಗೆ ತಿಳಿಯುತ್ತಿದ್ದಂತೆ ವೆಲ್ಲೆಸ್ಲಿಯು, 'ಇದೀಗ ಇಂಡಿಯಾ ನಮ್ಮದು' ಎಂದು ಉದ್ಗರಿಸಿದನಂತೆ. ಟಿಪ್ಪುವಿನ ಸಾವಿನಿಂದ ಬ್ರಿಟಿಷರು ತಾವು ಗಳಿಸಿದ್ದೇನೆಂದು ಸ್ಪಷ್ಟವಾಗಿ ಅರ್ಥಮಾಡಿಕೊಂಡಿದ್ದರು. ಆದರೆ ಟಿಪ್ಪುವಿನ ಸಾವಿನಿಂದ ತಾವು ಕಳೆದುಕೊಂಡಿದ್ದು ಏನೆಂದು ಇದುವರೆಗೂ ಕರ್ನಾಟಕ ಹಾಗೂ ಭಾರತದ ಜನತೆಗೆ ಅರ್ಥವಾಗಿಲ್ಲ. ಟಿಪ್ಪುವಿನ ಸೋಲು ಕೇವಲ ಒಬ್ಬ ದೊರೆಯ ಸೋಲಲ್ಲ, ಅದು ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಭಾರತದ ಪ್ರತಿರೋಧದ ಸೋಲಾಗಿತ್ತು. ಟಿಪ್ಪುವಿನ ಸಾವಿನ ನಂತರ ದೇಶದ ಇತರೆ ರಾಜರನ್ನು ಸೋಲಿಸುವುದಕ್ಕೆ ಬ್ರಿಟಿಷರಿಗೆ ಕಷ್ಟವೆನಿಸಲಿಲ್ಲ.

೧೭೯೯ರಲ್ಲಿ ಟಿಪ್ಪುವಿನ ಮರಣಾನಂತರ ಮೈಸೂರು ಪ್ರಾಂತ್ಯವನ್ನು ಸಂಪೂರ್ಣ ಅಧ್ಯಯನ ಮಾಡಿದ ಬ್ರಿಟಿಷ್ ತಜ್ಞ ಫ್ರಾನ್ಸಿಸ್ ಬುಕಾನನ್ ಗುರುತಿಸಿದಂತೆ ಮೈಸೂರು ಅರಸರಾದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲಗಳಲ್ಲಿ ಪಾಳೆಗಾರರ ವಿರೋಧಿ ಸೈನಿಕ ಕಾರ್ಯಾಚರಣೆಗಳಿಂದ ಮೈಸೂರು ಪ್ರಾಂತ್ಯದಲ್ಲಿ ಊಳಿಗಮಾನ್ಯ ವ್ಯವಸ್ಥೆ ಸಂಪೂರ್ಣವಾಗಿ ಕುಸಿದುಬಿದ್ದಿತ್ತು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಟಿಪ್ಪುವಿನ ಸಾವಿನ ನಂತರ ಊಳಿಗಮಾನ್ಯತೆಯು ಶೋಷಣೆಯನ್ನು ಮತ್ತೆ ಪ್ರಾರಂಭಿಸಿತು. ಟಿಪ್ಪುವಿನ ಕಾಲದಲ್ಲಿ ರೈತರು, ಕುಶಲಕರ್ಮಿಗಳು, ಸಣ್ಣ ಪುಟ್ಟ ಉದ್ದಿಮೆದಾರರು ಪಡೆದುಕೊಂಡಿದ್ದ ಸ್ವಾತಂತ್ರ್ಯವು ಒಡೆಯರ ಆಳ್ವಿಕೆಯಲ್ಲಿ ಬ್ರಿಟಿಷರ ಹಾಗೂ ಊಳಿಗಮಾನ್ಯ ಶಕ್ತಿಗಳ ಪಾಲಾಯಿತು. ಕರ್ನಾಟಕದ ಅಭಿವೃದ್ಧಿಯನ್ನು, ಪ್ರಗತಿಯನ್ನು ಈ ಎರಡು ಶಕ್ತಿಗಳು ಮತ್ತೆ ಈ ಮೇಲಿನ ರೈತಾಪಿ ವರ್ಗವನ್ನು ಊಳಿಗಮಾನ್ಯತೆಯ ಕತ್ತಲಲ್ಲಿ ದೂಡಿದವು.

**ಪಾಳೆಗಾರರ ನಿರ್ಮೂಲನೆ**

ಟಿಪ್ಪು ಸುಲ್ತಾನ್ ಹಾಸನ, ಶಿವಮೊಗ್ಗ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಚಿತ್ರದುರ್ಗ, ರಾಯಚೂರು, ಬಳ್ಳಾರಿ, ಧಾರವಾಡ, ತುಮಕೂರು ಹಾಗೂ ಕೋಲಾರಗಳಲ್ಲಿ ಇದ್ದಂತಹ ೨೦೦ ಪಾಳೆಗಾರರನ್ನು ಸದೆಬಡೆದನು. ಕೇರಳದ ಮಲಬಾರಿನಲ್ಲಿ ೪೨ ಪಾಳೆಗಾರರನ್ನು ನಾಶ ಮಾಡಿದ. ಇವರ ಸಾವಿರಾರು ಎಕರೆ ಭೂಮಿಯನ್ನು ರೈತರಿಗೆ ಹಂಚಿದ. ಇದರಿಂದ ಪಾಳೆಗಾರರ ಹಿಡಿತದಿಂದ ರೈತಾಪಿ ವರ್ಗ ಮುಕ್ತವಾಯಿತು. ರೈತ ಹಾಗೂ ಪ್ರಭುತ್ವದ ಮಧ್ಯೆಯಿದ್ದ ಪರಾವಲಂಬಿ ವರ್ಗ ನಿರ್ನಾಮವಾಗಿ ಮೊಟ್ಟ ಮೊದಲ ಬಾರಿಗೆ ಪ್ರಭುತ್ವವೇ ನೇರವಾಗಿ ತನ್ನ ರೈತಾಪಿಯೊಡನೆ ಸಂಬಂಧವಿರಿಸಿಕೊಂಡಿತು.

ಊಳಿಗಮಾನ್ಯ ರಾಜ ಪ್ರಭುತ್ವಗಳ ಆಕ್ರಮಣ, ಸೋಲು-ಗೆಲವುಗಳು ಜನರ ಬದುಕಿನಲ್ಲಿ ಯಾವುದೇ ಬದಲಾವಣೆ ತಂದಿರಲಿಲ್ಲ. ಆದ್ದರಿಂದ ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಳ್ಳಲು ರಾಜರ ಮೇಲೆ ದಾಳಿ ಮಾಡಿದರೂ ಕೂಡ ಭಾರತದ ಸಾಮಾನ್ಯ ಜನತೆ ರಾಜರ ಪರವಾಗಿ ನಿಂತಿರಲಿಲ್ಲ. ಏಕೆಂದರೆ ಅಷ್ಟು ಕ್ರೂರವಾಗಿ ರಾಜ ಪ್ರಭುತ್ವಗಳು ಜನರನ್ನು ಶೋಷಣೆ ಮಾಡುತ್ತಿದ್ದವು. ಆದರೆ ಟಿಪ್ಪುವಿನ ಕಾಲದ ಜನತೆ ವಿಶಿಷ್ಟವಾಗಿದ್ದರು. ಟಿಪ್ಪುವಿನ ಸೋಲು-ಗೆಲವುಗಳನ್ನು ಜನರು ಹಂಚಿಕೊಳ್ಳುತ್ತಿದ್ದರು. ಏಕೆಂದರೆ ಟಿಪ್ಪು ಪಾಳೆಗಾರರನ್ನು ನಾಶಮಾಡಿ ರೈತಾಪಿ, ಕುಶಲಕರ್ಮಿ ಹಾಗೂ ವ್ಯಾಪಾರಿ ವರ್ಗಗಳ ಭಾರವನ್ನು ಹಗುರಗೊಳಿಸಿದ್ದನು.

**ಭೂ ಸುಧಾರಣೆ**

೧೭೯೨ರಲ್ಲಿ ಮೂರನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪು ತನ್ನ ಇಬ್ಬರು ಮಕ್ಕಳನ್ನು ಒತ್ತೆ ಇಟ್ಟಿದ್ದರೂ ಎದೆಗುಂದದೆ ಅದೇ ವರ್ಷ ಭೂ ಕಂದಾಯ ಕಾಯ್ದೆಯನ್ನು ಜಾರಿಗೆ ತಂದನು. ಭಾರತದಲ್ಲಿ ಪ್ರಪ್ರಥಮವಾಗಿ ಭೂ ಸುಧಾರಣೆ ಕಾಯ್ದೆ ತಂದಿದ್ದು ಟಿಪ್ಪು. ಉಳುವವನಿಗೆ ಭೂಮಿ ಸಿಗಬೇಕು ಎನ್ನುವುದು ಟಿಪ್ಪುವಿನ ಕೃಷಿ ನೀತಿಯಾಗಿತ್ತು. ಇದರಿಂದ ಊಳಿಗಮಾನ್ಯ ಶಕ್ತಿಗಳ ಭೂ ಒಡೆತನ ಮುರಿದುಬಿತ್ತು. ಮೈಸೂರು ಸಂಸ್ಥಾನದಲ್ಲಿ ೩೯೦೦೦ ಕೆರೆಗಳು ಮತ್ತು ೧೪೦೦೦ ಬಾವಿಗಳು ಇದ್ದವಂತೆ. ಇಷ್ಟೊಂದು ಕೆರೆ ಕಟ್ಟೆಗಳು ಭಾರತದಲ್ಲಿ ಎಲ್ಲಿಯೂ ಕೂಡ ಇರಲಿಲ್ಲವಂತೆ. ಟಿಪ್ಪು ನದಿಗಳಿಗೆ ೨೪ ಒಡ್ಡುಗಳನ್ನು ಕಟ್ಟಿ ಕಾಲುವೆಗಳ ಮೂಲಕ ನೀರು ಹರಿಸಿ ಕೃಷಿಗೆ ಸಹಾಯ ಮಾಡಿದನಂತೆ. ಕೆರೆ ಕಟ್ಟೆಗಳಲ್ಲಿ ನೀರು ಬಿಡುವುದಕ್ಕೆ ದಲಿತರನ್ನು ನೇಮಿಸಿದ್ದನಂತೆ. ೧೭೯೯ರಲ್ಲಿ ಮೈಸೂರು ಪ್ರಾಂತ್ಯದಲ್ಲಿ ಶೇಕಡ ೩೫ರಷ್ಟು ಭೂಮಿ ನೀರಾವರಿಯಿಂದ ಕೂಡಿತು. ೧೭೯೮ರಲಿ ಇಂದು ಕೃಷ್ಣರಾಜಸಾಗರ ಜಾಗದಲ್ಲಿ ಕಾವೇರಿ ನದಿಗೆ ಬೃಹತ್ ಅಣೆಕಟ್ಟು ಕಟ್ಟುವ ಯೋಜನೆಯ ಬಗ್ಗೆ ಟಿಪ್ಪು ಅದಾಗಲೇ ಚಿಂತಿಸಿದ್ದ. ಆದರೆ ದುರದೃಷ್ಟವಶಾತ್ ೧೭೯೯ರಲ್ಲಿ ಆತ ಹುತಾತ್ಮನಾದ.

ನಂಜನಗೂಡಿನಲ್ಲಿ ೫೦೦ ಬ್ರಾಹ್ಮಣರ ಮನೆಗಳಲ್ಲಿ ಮತ್ತು ಜಮೀನುಗಳಲ್ಲಿ ೭೦೦ ದಲಿತ ಮತ್ತು ಶೂದ್ರರು ಬಿಟ್ಟಿ ಚಾಕರಿ ಮಾಡುತ್ತಿದ್ದುದನ್ನು ಟಿಪ್ಪು ನಿಲ್ಲಿಸಿದ. ಬ್ರಾಹ್ಮಣರಲ್ಲಿದ್ದ ಹೆಚ್ಚುವರಿ ಭೂಮಿಯನ್ನು ಶೂದ್ರರಿಗೆ, ದಲಿತರಿಗೆ ಹಂಚಿದ. ಈಗಿನ ಮಂಡ್ಯ ಪಟ್ಟಣವು ಅಂದು ಬ್ರಾಹ್ಮಣರ ಅಗ್ರಹಾರವಾಗಿತ್ತು. ಅದನ್ನು ಟಿಪ್ಪು ಶೂದ್ರರಿಗೆ, ರೈತರಿಗೆ ಹಂಚಿದ. ಹಳ್ಳಿಗಳಲ್ಲಿ ರೈತರನ್ನು ಪಟೇಲರು ಹಾಗೂ ಶಾನುಭೋಗರು ಶೋಷಣೆ ಮಾಡುತ್ತಿದ್ದುದನ್ನು ಅರಿತ ಟಿಪ್ಪು ಪಟೇಲರ ಮತ್ತು ಶಾನುಭೋಗರ ಜಮೀನುಗಳಲ್ಲಿ ರೈತರ ಬಿಟ್ಟಿ ಚಾಕರಿಗೆ ಕಡಿವಾಣ ಹಾಕಿದ. ಪಟೇಲರು ಮತ್ತು ಶಾನುಭೋಗರು ಸಾಮಾನ್ಯ ರೈತರೇ ಹೊರತು ಊರಗೌಡರಲ್ಲ ಎಂದು ಹೇಳಿದ. ಟಿಪ್ಪುಸುಲ್ತಾನ್ ತನ್ನ ೩ ಲಕ್ಷ ಸೈನಿಕರಿಗೆ ಭೂಮಿಯನ್ನು ಹಂಚಿದ. ಇದರಲ್ಲಿ ಅರ್ಧಕ್ಕಿಂತ ಹೆಚ್ಚು ದಲಿತರಿಗೆ ಮತ್ತು ರೈತಾಪಿ ಮಕ್ಕಳಿಗೆ ಭೂಮಿ ಸಿಕ್ಕಿತು. ಇದರಿಂದ ಸಣ್ಣ ರೈತರು ಉಗಮವಾಗಿ



ಊಳಿಗ ಮಾನ್ಯತೆ ಹಾಗೂ ಜಾತಿ ಹಿಡಿತದಿಂದ ಜನರು ಬಿಡುಗಡೆ ಹೊಂದಿದರು. ಈ ೩ ಲಕ್ಷ ಸೈನಿಕರಲ್ಲಿ ಅರ್ಧ ಜನರು ಯುದ್ಧಾನಂತರದ ಅವಧಿಯಲ್ಲಿ ವ್ಯವಸಾಯ ಮಾಡುತ್ತಿದ್ದರು. ಟಿಪ್ಪು ಬೀಳುಬಿದ್ದ ಭೂಮಿ, ಬೆಟ್ಟಗುಡ್ಡಗಳ ಜಮೀನುಗಳನ್ನು ರೈತರಿಗೆ ಹಂಚಿದ. ಅವರಿಗೆ ತೆರಿಗೆ ಇಲ್ಲದೆ ಉಳುವುದಕ್ಕೆ ಅವಕಾಶ ಮಾಡಿಕೊಡುವುದರ ಮುಖಾಂತರ ಕೃಷಿಕ್ಷೇತ್ರವನ್ನು ವಿಸ್ತರಿಸಿದ.

ಟಿಪ್ಪು ಕೃಷಿಯನ್ನು ತ್ವರಿತವಾಗಿ ವಾಣಿಜ್ಯೀಕರಣ ಮಾಡಿದ. ವಾಣಿಜ್ಯ ಬೆಳೆಗಳಾದ ಕಬ್ಬು, ಅಡಿಕೆ, ವೀಳ್ಯದೆಲೆ, ರೇಷ್ಮೆ, ತಂಬಾಕು, ನೀಲಿ, ಮಾವು, ಹುಣಸೆ, ಹತ್ತಿ, ಮೆಣಸು, ಗೋಡಂಬಿ ಮುಂತಾದ ಬೆಳೆಗಳ ಕೃಷಿಯನ್ನು ಟಿಪ್ಪುವಿನ ಪ್ರಭುತ್ವ ಪ್ರೋತ್ಸಾಹಿಸಿತು. ಮೈಸೂರು ಸಂಸ್ಥಾನದಲ್ಲಿ ರೈತರು ಕಂದಾಯವನ್ನು ಹಣದ ರೂಪದಲ್ಲಿ ಸಂದಾಯ ಮಾಡುತ್ತಿದ್ದರು. ನಮ್ಮ ರಾಜ್ಯಕ್ಕೆ ರೇಷ್ಮೆಯನ್ನು ಪ್ರಪ್ರಥಮ ಬಾರಿಗೆ ಪರಿಚಯಿಸಿ ಅದಕ್ಕೆ ಪ್ರೋತ್ಸಾಹಿಸಿದ ಕೀರ್ತಿ ಟಿಪ್ಪುಗೆ ಸಲ್ಲುತ್ತದೆ. ಬೆಂಗಳೂರಿನಲ್ಲಿ ಇರುವ ಈಗಿನ ಲಾಲ್‌ಬಾಗ್‌ನಲ್ಲಿ ಟಿಪ್ಪು ಇಂಗ್ಲೆಂಡ್, ದಕ್ಷಿಣ ಆಫ್ರಿಕ, ಮೆಕ್ಸಿಕೊಗಳಿಂದ ತರಿಸಿದ್ದ ಮರಗಳು, ಸಸ್ಯಗಳು ಹಾಗೂ ದೇಶೀಯ ತಳಿಗಳು ಮತ್ತು ಕಿತ್ತಳೆ, ನೀಲಿ ಬೆಳೆಗಳು ಇದ್ದುವು. ಸ್ವತಃ ಟಿಪ್ಪುವೇ ರಾಕೆಟ್‌ಅನ್ನು ಕಂಡುಹಿಡಿದ. ಇದು ೧.೪ ಕಿ.ಮೀ. ದೂರ ಕ್ಷಿಪಣಿಯನ್ನು ಹಾರಿಸುತ್ತಿತ್ತು.

೧೭೮೪ರಲ್ಲಿ ಟಿಪ್ಪು ಪ್ರಪ್ರಥಮವಾಗಿ ಪ್ರಭುತ್ವದ ವಾಣಿಜ್ಯ ನಿಗಮವನ್ನು ಸ್ಥಾಪಿಸಿದ. ಇದರಲ್ಲಿ ರೈತರು, ವ್ಯಾಪಾರಸ್ಥರು, ಶೇರುದಾರರಾದರು. ಬಂದ ಲಾಭವನ್ನು ಹಂಚಿಕೊಳ್ಳುತ್ತಿದ್ದರು. ಇದರಿಂದ ಖಾಸಗಿ ಬಂಡವಾಳ ಹಾಗೂ ಪ್ರಭುತ್ವದ ಬಂಡವಾಳ ಹತ್ತಿರವಾದವು. ಇಂದಿನ ಗುಬ್ಬಿ, ಹರಿಹರ ಅವನ ಕಾಲದಲ್ಲಿ ಭಾರತದ ಅತಿದೊಡ್ಡ ವ್ಯಾಪಾರಕೇಂದ್ರಗಳಾಗಿದ್ದವು. ಗುಬ್ಬಿಯಲ್ಲಿ ೩೬೦ ಮನೆಗಳು, ೧೫೬ ಅಂಗಡಿಗಳು ಇದ್ದವಂತೆ. ವಾಣಿಜ್ಯ ವ್ಯಾಪಾರದಿಂದ ರಸ್ತೆಗಳು ಅಭಿವೃದ್ಧಿ ಹೊಂದಿದರೆ ಹಳ್ಳಿಗಳು ನಗರೀಕರಣಗೊಂಡವು. ಮೈಸೂರು ಸಂಸ್ಥಾನದಲ್ಲಿ ೨೧ ಕಿ.ಮೀ.ಗೆ ಒಂದರಂತೆ ಒಟ್ಟು ೬೦ ಪಟ್ಟಣಗಳು ಇದ್ದುವೆಂದು

ಹೇಳಲಾಗುತ್ತದೆ. ಈ ಎಲ್ಲಾ ಅಭಿವೃದ್ಧಿ ಕಾರ್ಯಗಳಿಂದ ಕೃಷಿಯಲ್ಲಿ ಬಂಡವಾಳಶಾಹಿ ಸಂಬಂಧಗಳು ಕಾಣಿಸಿಕೊಂಡವು. ಇದರಿಂದ ವಂಶಪರಂಪರೆಯಾಗಿ ದುಡಿಯುತ್ತಿದ್ದ ಜೀತಗಾರರಿಗೆ ಸ್ವಲ್ಪ ವಿರಾಮ ಸಿಕ್ಕಿತು.

ಟಿಪ್ಪು ತನ್ನ ವಸಾಹತುಶಾಹಿ ವಿರೋಧವನ್ನು ಆರ್ಥಿಕ ರಂಗದಲ್ಲಿ ಮುಂದುವರಿಸಿದ. ಯುದ್ಧದ ಪರಿಹಾರವಾಗಿ ತನ್ನ ಇಬ್ಬರು ಮಕ್ಕಳನ್ನು ಒತ್ತೆಯಿಟ್ಟ, ತನ್ನ ಸಂಸ್ಥಾನದ ಭೂಭಾಗವನ್ನು ಬಿಟ್ಟುಕೊಟ್ಟ. ಹಣ ಕೊಟ್ಟನೇ ಹೊರತು ಮೈಸೂರು ಪ್ರಾಂತ್ಯದ ಮಾರುಕಟ್ಟೆಯನ್ನು ಮಾತ್ರ ಬಿಟ್ಟು ಕೊಡಲಿಲ್ಲ, ಏಕೆಂದರೆ ವಸಾಹತುಶಾಹಿ ವ್ಯಾಪಾರಸ್ಥರು ನಾಡಿನೊಳಗೆ ದೇಶಪ್ರೇಮವಿಲ್ಲದ, ರಾಷ್ಟ್ರೀಯತೆ ಗೊತ್ತಿಲ್ಲದ ದಲ್ಲಾಳಿ ವ್ಯಾಪಾರಿ ವರ್ಗವನ್ನು ಸೃಷ್ಟಿಸಿ ಮತ್ತೆ ರೈತರನ್ನು ಶೋಷಣೆ ಮಾಡುತ್ತಾರೆ ಎಂಬ ಕಾರಣದಿಂದ. ಟಿಪ್ಪು ಬ್ರಿಟಿಷರ ಮದ್ರಾಸ್ ಪ್ರಾಂತ್ಯದ ವ್ಯಾಪಾರ ವಹಿವಾಟನ್ನು ಬಹಿಷ್ಕರಿಸಿದ. ದೇಶದಲ್ಲಿ ಬ್ರಿಟಿಷ್ ಸರಕುಗಳನ್ನು ಬಹಿಷ್ಕರಿಸಿದ ಮೊದಲ ಸ್ವಾತಂತ್ರ್ಯ ಹೋರಾಟಗಾರ ಟಿಪ್ಪು ಸುಲ್ತಾನ್. ಈ ರೀತಿಯ ಅಭಿವೃದ್ಧಿಯ ಕಾರ್ಯಗಳಿಂದ ಮೈಸೂರು ಸಂಸ್ಥಾನದಲ್ಲಿ ದೇಶಪ್ರೇಮವಿರುವ, ರಾಷ್ಟ್ರೀಯತೆ ಬಗ್ಗೆ ಅರಿವಿರುವ ರೈತಾಪಿ ವರ್ಗ, ಕರಕುಶಲಕರ್ಮಿಗಳು, ವ್ಯಾಪಾರಸ್ಥರು, ಉದ್ಯಮಿಗಳು ಉದಯಿಸಿದರು. ಟಿಪ್ಪುವಿನ ಮರಣದ ನಂತರ ಈ ವರ್ಗಗಳನ್ನು ಮತ್ತೆ ಊಳಿಗಮಾನ್ಯತೆಯ ತೆಕ್ಕೆಯೊಳಕ್ಕೆ ಬ್ರಿಟಿಷ್ ವಸಾಹತುಶಾಹಿಗಳು ತಳ್ಳಿದರು.

ಟಿಪ್ಪು ಕೈಗಾರಿಕೆಗಳ ಅಭಿವೃದ್ಧಿಗೆ ಕೂಡ ಬಹಳ ಪ್ರೋತ್ಸಾಹ ಕೊಟ್ಟ. ಅವನ ಸಂಸ್ಥಾನದಲ್ಲಿ ನೇಯ್ಗೆ, ಜವಳಿ, ಹತ್ತಿ, ರೇಷ್ಮೆ, ತಾಮ್ರ, ಚಿನ್ನ, ಕಬ್ಬಿಣದ ಕುಲುಮೆ ಮುಂತಾದ ಉತ್ಪಾದನಾ ಕೇಂದ್ರಗಳು ಇದ್ದವು. ಕಂಬಳಿ, ಕಬ್ಬಿಣ, ಸಕ್ಕರೆ, ಬೆಲ್ಲ ಹಾಗೂ ಎಣ್ಣೆ ಉತ್ಪಾದನಾ ಕೈಗಾರಿಕೆಗಳು ಇದ್ದುವು. ಮಳವಳ್ಳಿಯಲ್ಲಿ ಸಿಗುವ ಕಬ್ಬಿಣ ಪ್ರಪಂಚದ ಅತ್ಯುತ್ತಮ ಕಬ್ಬಿಣವಾಗಿತ್ತು. ಕರಾವಳಿಯ ಬೈಂದೂರಿನ ಬಳಿ ಶಸ್ತ್ರಾಸ್ತ್ರ ಕಾರ್ಖಾನೆಯಿತ್ತು. ಇದರಲ್ಲಿ ಪ್ರತಿ ವರ್ಷ ೨೦೦೦೦ ಬಂದೂಕುಗಳನ್ನು, ಅಂದರೆ ಪ್ರತಿ ದಿನ ೫೨ ಬಂದೂಕುಗಳನ್ನು ತಯಾರಿಸುತ್ತಿದ್ದರು. ಟಿಪ್ಪು ತಾನು ರಾಯಭಾರಿಗಳನ್ನು ಎಲ್ಲಿಗೇ ಕಳಿಸಿದರೂ ಸೇನೆ ಮತ್ತು ಅಭಿವೃದ್ಧಿ ತಂತ್ರಜ್ಞಾನದ ಒಪ್ಪಂದ ಈ ಎರಡು ಉದ್ದೇಶಗಳೂ ಇರುತ್ತಿದ್ದವು. ರಾಯಭಾರಿಗಳನ್ನು ಎಲ್ಲಿಗೇ ಕಳಿಸಿದರೂ ಅಭಿವೃದ್ಧಿ ತಂತ್ರಜ್ಞಾನವನ್ನು ಆಮದು ಮಾಡಿಕೊಳ್ಳುತ್ತಿದ್ದ. ೧೭೮೭ರಲ್ಲಿ ಫ್ರಾನ್ಸ್‌ನ ೧೬ನೇ ಲೂಯಿಯಿಂದ ಶಸ್ತ್ರಚಿಕಿತ್ಸಕ, ಬಡಿಗ, ಕೈಗಡಿಯಾರ, ತೋಟಗಾರಿಕೆ ತಂತ್ರಜ್ಞರು, ೧೦ ಮದ್ದುಗುಂಡು ತಜ್ಞರು, ೧೦ ಪಿಂಗಾಣಿ ಸಾಮಾನು ತಯಾರಕರು, ೧೦ ಗಾಜು ತಯಾರಕರನ್ನು ಕರೆತಂದರು.

ಟಿಪ್ಪು ಬಹಳ ಸರಳ ಜೀವನ ನಡೆಸುತ್ತಿದ್ದ. ಆತನ ಶ್ರೀರಂಗಪಟ್ಟಣ ಮತ್ತು ಬೆಂಗಳೂರಿನ ಅರಮನೆಗಳು ಬಹಳ ಸರಳವಾಗಿವೆ. ಇತರ ರಾಜರ ಅರಮನೆಗಳು ಚಿನ್ನ, ವಜ್ರ, ಬಂಗಾರಗಳಿಂದ ಕೂಡಿದ್ದಂತೆ ಈತನ ಅರಮನೆ ಇರಲಿಲ್ಲ. ಈತನ ಅರಮನೆಯಲ್ಲಿ ಭೌತಶಾಸ್ತ್ರ, ಗಣಿತ, ಕೃಷಿ, ಖಗೋಳ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ೨೦೦೦ ಪುಸ್ತಕಗಳಿದ್ದವು. ಟಿಪ್ಪು ಬಹು ಭಾಷಾ ಪಂಡಿತ. ಆದ್ದರಿಂದ ಕನ್ನಡ, ತೆಲುಗು, ತಮಿಳು, ಫ್ರೆಂಚ್ ಭಾಷೆಯ ಪುಸ್ತಕಗಳನ್ನು ಓದುತ್ತಿದ್ದ. ಈತನು ಎರಡು ಪುಸ್ತಕಗಳನ್ನು ರಚಿಸಿದ್ದಾನೆ. ಸುಮಾರು ಲೇಖನ ಗಳನ್ನೂ ಬರೆದಿದ್ದಾನೆ. ತನ್ನ ಪ್ರಾಂತ್ಯದಲ್ಲಿ ದಲಿತರಿಗೆ, ಶೂದ್ರರಿಗೆ, ರೈತಾಪಿ ಮಕ್ಕಳಿಗೆ ಶಿಕ್ಷಣ ಕಡ್ಡಾಯ ಮಾಡಿ ಮಠಗಳಿಂದ ಅಕ್ಷರ ವಿಮೋಚನೆ ಮಾಡಿದ. ಇದರ ಪರಿಣಾಮವಾಗಿ ಮೈಸೂರು ಭಾಗದ ದಲಿತರು ಉತ್ತರ ಕರ್ನಾಟಕದ ದಲಿತರಿಗಿಂತ ಬಹಳಷ್ಟು ಮುಂದುವರಿದಿದ್ದರು.

ಫ್ರಾನ್ಸ್‌ನಲ್ಲಿ ಕ್ರಾಂತಿಯಾದಾಗ ಮತ್ತು ಅಮೇರಿಕದಲ್ಲಿ ಕ್ರಾಂತಿಯಾದಾಗ ಟಿಪ್ಪು ತನ್ನ ಅರಮನೆಯಲ್ಲಿ ಸಂಭ್ರಮ ಆಚರಣೆ ಮಾಡಿದ್ದನಂತೆ. ತನ್ನ ಆಡಳಿತದಲ್ಲಿ ಮಹಿಳಾ ಪಕ್ಷಪಾತವನ್ನು ನಿಲ್ಲಿಸಿದ್ದ. ಮದ್ಯಪಾನವನ್ನು ನಿಷೇಧ ಮಾಡಿದ್ದ. ಈಜಿಪ್ಟ್‌ನ ಪಿರಮಿಡ್, ಚೀನಾದ ಮಹಾಗೋಡೆ, ಮೆಸಪೊಟೇಮಿಯಾ ನಾಗರಿಕ ಸಂಸ್ಕೃತಿ ಇವು ಗುಲಾಮರ ಶ್ರಮದಿಂದ, ಅವರ ರಕ್ತಹೀರಿ ಕಟ್ಟಿರುವ ಸ್ಮಾರಕಗಳು ಎಂದು ಹೇಳಿದ್ದಾನೆ ಟಿಪ್ಪು. ಈತನ ಸೈನ್ಯ ಕೂಲಿ ಸೈನ್ಯವಾಗಿರಲಿಲ್ಲ, ಅದು ನಾಡ ಪ್ರೇಮವುಳ್ಳ ಸೈನ್ಯ ವಾಗಿತ್ತು. ದಲಿತ, ಶೂದ್ರ, ರೈತಾಪಿ ಮಕ್ಕಳಿಂದ ಕೂಡಿದ್ದ ದೇಶಪ್ರೇಮಿ ಸೈನ್ಯವಾಗಿತ್ತು. ಒಟ್ಟು ಸೈನ್ಯದ ಸಂಖ್ಯೆ ೧೮೦೦೦. ಬ್ರಿಟಿಷರ ವ್ಯಾಪಾರವನ್ನು ತಡೆಗಟ್ಟಲು ಅರಬ್ಬಿ ಸಮುದ್ರದಲ್ಲಿ ೮೦ ನೌಕೆಗಳ ನೌಕಾಪಡೆಯನ್ನು ಕಟ್ಟಿದ್ದನು. ಈ ಸೈನ್ಯವನ್ನು ಕೂಡ ವಸಾಹತುಶಾಹಿ ಮತ್ತು ಊಳಿಗ ಮಾನ್ಯಗಳ ವಿರೋಧಿ ಆಶಯಗಳನ್ನು ಆಧರಿಸಿಯೇ ಕಟ್ಟಲಾಗಿತ್ತು. ಸೈನಿಕರಿಗೆ ತರಬೇತಿಯಲ್ಲಿ ವಸಾಹತುಶಾಹಿ, ಊಳಿಗಮಾನ್ಯದ ಬಗ್ಗೆ ತಿಳುವಳಿಕೆ ನೀಡಲಾಗುತ್ತಿತ್ತು.

ಟಿಪ್ಪು ಧಾರ್ಮಿಕ ಸಹಿಷ್ಣುತೆಯುಳ್ಳ ವ್ಯಕ್ತಿಯಾಗಿದ್ದ. ಈತ ಅನುಸರಿಸಿದ್ದು ಸೂಫಿ ಧರ್ಮವನ್ನು. ತನ್ನ ಸಂಸ್ಥಾನದಲ್ಲಿ ಪ್ರತಿಯೊಂದು ಧರ್ಮಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದ. ಈತನು ಶ್ರೀರಂಗಪಟ್ಟಣ, ಮೇಲುಕೋಟೆ, ನಂಜನಗೂಡು ದೇವಾಲಯಗಳಿಗೆ ಬೆಳ್ಳಿ, ಚಿನ್ನ, ಭೂಮಿಯನ್ನು ದಾನ ನೀಡಿದ್ದಾನೆ. ಶೃಂಗೇರಿ ಮಠದ ಮೇಲೆ ಮರಾಠರು ದಾಳಿ ಮಾಡಿ ಸಂಪತ್ತನ್ನು ಲೂಟಿ ಮಾಡಿದಾಗ ಟಿಪ್ಪು ಆರ್ಥಿಕ ಸಹಾಯ ಮಾಡಿದ್ದಾನೆ. ಈತನ ಆಡಳಿತದಲ್ಲಿ ಮಂತ್ರಿ, ಸೇನೆಯ ದಂಡನಾಯಕರು ಹೆಚ್ಚಾಗಿ ಹಿಂದೂಗಳೇ ಆಗಿದ್ದರು. ಒಟ್ಟಾರೆ, ಈತನ ಕಾಲದಲ್ಲಿ ಹಿಂದುಗಳು ಮತ್ತು ಕೈಸ್ತರು ಅನ್ಯೋನ್ಯವಾಗಿದ್ದರು. ಎರಡನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಮಂಗಳೂರಿನಲ್ಲಿ ಕ್ರಿಶ್ಚಿಯನ್ನರು ಬ್ರಿಟಿಷರಿಗೆ ಸಹಾಯಮಾಡಿ ಟಿಪ್ಪುವಿಗೆ ದ್ರೋಹ ಮಾಡಿದ್ದರಿಂದ ಅವರನ್ನು ಗೋವಾಕ್ಕೆ ಗಡೀಪಾರು ಮಾಡಿದ. ಕೊಡಗಿನಲ್ಲಿ ಅಲ್ಲಿನ ಸಾಮಂತರು ಪದೇ ಪದೇ ಆಡಳಿತಕ್ಕೆ ತೊಂದರೆ ಕೊಡುತ್ತಿದ್ದುದರಿಂದ ಅವರನ್ನು ಮುಸ್ಲಿಂ ಧರ್ಮಕ್ಕೆ ಮತಾಂತರಿಸಿ ಶಿಕ್ಷೆ ಕೊಡುತ್ತಾನೆ. ಇಲ್ಲಿ ಈತನ ಶಿಕ್ಷೆಯಿಂದ ಮತಾಂತರಗೊಂಡವರು ಕೇವಲ ೫೦೦ (ಐದುನೂರು) ಜನರು ಮಾತ್ರ. ಉಳಿದ ಜನರು ಸ್ವ ಇಚ್ಛೆಯಿಂದ ಮುಸ್ಲಿಂ ಧರ್ಮಕ್ಕೆ ಮತಾಂತರ ಆದರೆಂದು ಇತಿಹಾಸ ಹೇಳುತ್ತದೆ. ಆದರೆ ಬ್ರಾಹ್ಮಣಶಾಹಿಗಳು ಇಂದು ಟಿಪ್ಪು ಸುಲ್ತಾನನನ್ನು ಮತಾಂಧ, ಕನ್ನಡದ್ರೋಹಿ, ನಿರಂಕುಶ ಅಧಿಕಾರಿ ಎಂದು ಅಪಪ್ರಚಾರ ಮಾಡುತ್ತಿದ್ದಾರೆ.

ಟಿಪ್ಪುವಿನ ಬಗ್ಗೆ ಬ್ರಿಟಿಷ್ ವಸಾಹತುಶಾಹಿಗಳು, ಬ್ರಿಟಿಷ್ ಬರಹಗಾರರು, ಈ ದೇಶದ ಆಳುವ ವರ್ಗಗಳು, ಬ್ರಾಹ್ಮಣಶಾಹಿಗಳು ಅಪಪ್ರಚಾರ ಮಾಡುತ್ತಿದ್ದಾರೆ. ಏಕೆಂದರೆ ವಸಾಹತುಶಾಹಿಗಳ ಎದೆಯಾಳದಲ್ಲಿ ತನ್ನ ನೆನಪು ನಡುಕ ಹುಟ್ಟಿಸುವಂತೆ ಮಾಡಿ ಅವರ ಅಸ್ತಿತ್ವಕ್ಕೆ ಸಂಚಕಾರ ತಂದ ಭಾರತದ ಏಕೈಕ ರಾಜ ಟಿಪ್ಪು ಸುಲ್ತಾನ್. ಈತನ ನಡತೆಗಳು, ಗುಣಗಳು, ಅಂದು ಬ್ರಿಟಿಷರಿಗೆ ಎಷ್ಟು ಧೃತಿಗೆಡಿಸಿತ್ತೋ ಅಕ್ಷರಮಟ್ಟಿಗೆ ಇಂದು ಟಿಪ್ಪುವಿನ ಸ್ಮರಣೆ, ನೆನಪುಗಳು ಭಾರತದ ಆಳುವ ವರ್ಗಗಳಿಗೆ, ಮೂಲಭೂತವಾದಿಗಳಿಗೆ ನಿದ್ದೆಗೆಡಿಸಿದೆ. ಆದ್ದರಿಂದ ಆತನ ಜನಪರ ಆಡಳಿತವನ್ನು, ನಾಡಪ್ರೇಮವನ್ನು ಇತಿಹಾಸದಿಂದ ತೆಗೆಯುವ, ವಕ್ರೀಕರಿಸುವ, ತಿರುಚುವ, ಮರೆಮಾಚುವ, ಕೆಲಸ ನಿರಂತರವಾಗಿ ನಡೆಯುತ್ತಿದೆ.

ಟಿಪ್ಪು ನಾಡಿನ ಪ್ರಗತಿಗೆ ಕಂಟಕರಾಗಿದ್ದ ಪಾಳೆಗಾರರ, ಮಠಮಾನ್ಯಗಳ ಸರ್ವಾಧಿಕಾರವನ್ನು, ಊಳಿಗಮಾನ್ಯ ಪ್ರಭುತ್ವದ ಸಾಮಾಜಿಕ, ಆರ್ಥಿಕ ರಚನೆಗಳನ್ನು ನಾಶ ಮಾಡಿದ ಹಾಗೂ ಕೈಗಾರಿಕೆ, ವಾಣಿಜ್ಯಕ್ಕೆ ಒತ್ತುಕೊಟ್ಟ. ಹೀಗೆ ಟಿಪ್ಪುವಿನ ಸಾಮ್ರಾಜ್ಯದಲ್ಲಿ ಊಳಿಗಮಾನ್ಯ ಪದ್ಧತಿ ನಾಶವಾಗಿ ಕೈಗಾರಿಕಾ ಕ್ರಾಂತಿಯಾಗುವ (ಫ್ರಾನ್ಸ್‌ನಲ್ಲಿ ಆದ ಕ್ರಾಂತಿಯಂತೆ) ಸಂಭವ ಕಾಣುತ್ತಿತ್ತು. ಆದರೆ ದುರದೃಷ್ಟವಶಾತ್ ಟಿಪ್ಪು ಸುಲ್ತಾನ್ ಯುದ್ಧದಲ್ಲಿ ಹುತಾತ್ಮನಾದ. ಹೀಗಾಗಿ ಈತನ ಸಾವಿನಿಂದ ಈ ನಾಡಿನಲ್ಲಿ ಸಂಭವಿಸಬೇಕಾಗಿದ್ದ ಊಳಿಗಮಾನ್ಯ ವಿರೋಧಿ ಕ್ರಾಂತಿ ತಪ್ಪಿಹೋಯಿತು. ಮೈಸೂರು ಅರಸರ ಖಡ್ಗ ದಾಸ್ಯದ ಸಂಕೇತವಾದರೆ, ಟಿಪ್ಪುವಿನ ಖಡ್ಗ ಸ್ವಾತಂತ್ರ್ಯ ಹೋರಾಟದ ಸಂಕೇತ. ಟಿಪ್ಪು ಒಬ್ಬ ಜನಪರ ಊಳಿಗಮಾನ್ಯ ಪದ್ಧತಿಯ ಕಟ್ಟಾ ವಿರೋಧಿ, ವಸಾಹತುಶಾಹಿ ವಿರೋಧಿ ಹಾಗೂ ಸಮಾಜ ಸುಧಾರಕ, ಕೈಗಾರಿಕಾ ಕ್ರಾಂತಿಯ ಹರಿಕಾರ.

**ಜಿ. ಎಂ. ನರಸಿಂಹ ಗುಂಜಹಳ್ಳಿ**
ಸಂಶೋಧಕರು, ಡಿಪಾರ್ಟ್‌ಮೆಂಟ್ ಆಫ್ ಮಾಸ್ ಕಮ್ಯುನಿಕೇಷನ್ ಅಂಡ್ ಜರ್ನಲಿಸಂ, ಮಂಗಳೂರು ವಿಶ್ವವಿದ್ಯಾಲಯ

## ನೆರಳು

ಭೂಮಿಯ ನೆರಳು
ಚಂದ್ರನ ಮೇಲೆ ಬಿದ್ದಾಗ
ಚಂದ್ರಗ್ರಹಣ !
ಚಂದ್ರನ ನೆರಳು
ಸೂರ್ಯನ ಮೇಲೆ ಬಿದ್ದಾಗ
ಸೂರ್ಯಗ್ರಹಣ !
ರಾಜಕಾರಣಿಗಳ ನೆರಳು
ಎಲ್ಲಿ ಬೀಳುವುದೊ ಅಲ್ಲಿ
ಹಗರಣವೇ ಹಗರಣ !

**ಅಪ್ಪಾಸಾಹೇಬ ಅಲಿಬಾದಿ**
'ಶಾಂತಿನಿಕೇತನ', ಜಯನಗರ, ಕ್ಲಬ್ ರಸ್ತೆ
ಅಥಣಿ - ೫೯೧ ೩೦೪

# ಪ್ರಗತಿಪರ ಮಹಾರಾಜ ಶಾಹೂ ಛತ್ರಪತಿ

ಒಬ್ಬ ವ್ಯಕ್ತಿ ಎಷ್ಟೇ ಪ್ರಗತಿಪರ ದೃಷ್ಟಿಯುಳ್ಳವನಾಗಿದ್ದರೂ ಅದನ್ನು ಕಾರ್ಯಗತಗೊಳಿಸುವಲ್ಲಿ ಅಧಿಕಾರ ಸೂತ್ರ ಅವನ ಕೈಯಲ್ಲಿರದಿದ್ದರೆ ಅದು ಕೇವಲ ಫಲಿಸದೆ ಬಿದ್ದ ಹೂವಿನಂತಾಗುವುದು. ಪ್ರಗತಿಪರ ರಾಜನ ಅಧೀನಕ್ಕೊಳಪಟ್ಟು ಶಾಸಕಾಂಗ, ನ್ಯಾಯಾಂಗ ಹಾಗೂ ಕಾರ್ಯಾಂಗಗಳು ನಡೆದುದಾದರೆ, ಅಂಥ ರಾಜ್ಯ ಸುಖೀ ರಾಜ್ಯವಾಗುವುದರಲ್ಲಿ ಎರಡು ಮಾತಿಲ್ಲ. ಆಗ ಅದು ಅವನ ಇಚ್ಛೆಯಂತೆ ಅಭಿವೃದ್ಧಿ ಪಥದತ್ತ ಸಾಗುವುದು.

ಆದರೆ ರಾಜ ಲೋಲುಪನೂ ಅಮಾಯಕನೂ ಆಗಿದ್ದು ಮಂತ್ರಿ ಪುರೋಹಿತ ಹಾಗೂ ಅಧಿಕಾರಗಳ ಕೈಗೊಂಬೆಯಾಗಿದ್ದ ಪಕ್ಷದಲ್ಲಿ ಅಂಥ ದೇಶ ಮುಂದುವರಿಯಲು ಸಾಧ್ಯವೇ ಇಲ್ಲ. ಎಂದರೆ ರಾಜನಾದವನಿಗೆ ತಕ್ಕ ಸಮಯದಲ್ಲಿ ತಕ್ಕ ನಿರ್ಧಾರ ತೆಗೆದುಕೊಳ್ಳುವ ವಿವೇಕ ಇದ್ದುದಾದರೆ ಆ ರಾಜ್ಯ ಪ್ರಗತಿಯ ಹಾದಿಯಲ್ಲಿದೆ ಎಂದೇ ಹೇಳಬೇಕು. ಪ್ರಜಾಪ್ರಭುತ್ವದ ಇಂದಿನ ಕಾಲಮಾನದಲ್ಲಿ ಇಂಥ ಏಕಾಧಿಪತ್ಯದ ಮಾತೇಕೆ ? ಹೀಗೆ ಯಾರಾದರೂ ಹುಬ್ಬೇರಿಸಬಹುದು. ಆದರೆ ಕೊಲ್ಲಾಪುರದ ಶಾಹೂ ಮಹಾರಾಜ, ಬರೋಡದ ಗಾಯಕವಾಡ್, ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ್ ಮುಂತಾದವರು ಎಲ್ಲ ರಾಜರಂತಲ್ಲ. ಈ ರಾಜರುಗಳ ಪ್ರಗತಿಪರ ದೃಷ್ಟಿ, ದುಃಖಾರ್ತರ ಮೇಲಿನ ಕರುಣೆ, ಮತಧರ್ಮಗಳ ಮೇಲಿನ ಸಹಿಷ್ಣುತೆ, ಮಹಿಳೆಯರ ಹಾಗೂ ದಲಿತ ವರ್ಗದ ಮೇಲಿನ ಕಾಳಜಿ ಇವು ಅಪೂರ್ವವಾಗಿದ್ದು ಚರಿತ್ರೆಯ ಪುಟಗಳಲ್ಲಿ ಇವರ ಹೆಸರು ಹಸಿರಾಗಿರಲು ಕಾರಣವಾಗಿವೆ.

ಕೊಲ್ಲಾಪುರ, ಮೈಸೂರು, ಬರೋಡ ಮುಂತಾದ ರಾಜ್ಯಗಳು ಬ್ರಿಟಿಷ್ ಸಾಮ್ರಾಜ್ಯದ ಅಧೀನದಲ್ಲಿದ್ದೂ ಸಹ 'ಲಿಟಲ್ ಥಿಂಗ್ ಈಸ್ ಬ್ಯೂಟಿಫುಲ್' ಎಂಬಂತೆ ಚಿಕ್ಕ ರಾಜ್ಯಗಳಾಗಿದ್ದೂ ಮಾದರಿ ರಾಜ್ಯಗಳೆಂಬಂತಿದ್ದವು. ಇದಕ್ಕೆ ಕಾರಣ ಆಳುವ ಪ್ರಭುಗಳಿಗಿದ್ದ ಕರ್ತೃತ್ವ ಶಕ್ತಿ, ಪ್ರಗತಿಪರ ದೃಷ್ಟಿ, ವಿವೇಚನಾ ಸಾಮರ್ಥ್ಯ. ರಾಜನಾದವನಿಗೆ ಸಂಕಲ್ಪ ಶಕ್ತಿ ಇರುವುದಾದರೆ ಇಂದಿನ ಪ್ರಜಾಪ್ರತಿನಿಧಿ ಸಚಿವ, ಶಾಸಕರುಗಳಿಗಿಂತ ಅತಿಶಯವಾಗಿ ಜನಪರ ಆಡಳಿತವನ್ನು ನೀಡಬಲ್ಲರು ಎಂಬುದಕ್ಕೆ ಇವರು ನಿದರ್ಶನವಾಗಬಲ್ಲರು. ಹೀಗೆ ಜನಮುಖಿ ಆಡಳಿತ ನಡೆಸಿದ ಭಾರತೀಯ ರಾಜರ ಸಾಲಿನಲ್ಲಿ ಕೊಲ್ಲಾಪುರದ ಶಾಹೂ ಛತ್ರಪತಿ ಮಹಾರಾಜರು ಪ್ರಮುಖರು ಎನ್ನಬಹುದು.

**ಪ್ರೊ॥ ಶಿವರಾಮಯ್ಯ**

''ಭಾರತದಲ್ಲಿಯ ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಪ್ರಭುತ್ವದಿಂದ ಬಿಡುಗಡೆ ಪಡೆಯುವುದಕ್ಕಾಗಿ ನಡೆದ ಹೋರಾಟವನ್ನು ಭಾರತೀಯ ಸ್ವಾತಂತ್ರ್ಯ ಸಂಗ್ರಾಮವೆಂದು ಕರೆಯುತ್ತೇವೆ. ಈ ಹೋರಾಟದ ಸಂದರ್ಭದಲ್ಲಿ ಎರಡು ಪ್ರಧಾನ ವಾಗ್ವಾದಗಳಿದ್ದವು. ಒಂದು ವಿಚಾರಧಾರೆಯಲ್ಲಿ ಸಾಮಾಜಿಕ ಸ್ವಾತಂತ್ರ್ಯಕ್ಕೆ ಆದ್ಯತೆ ಇದ್ದರೆ, ಇನ್ನೊಂದರಲ್ಲಿ ರಾಜಕೀಯ ಸ್ವಾತಂತ್ರ್ಯಕ್ಕೆ ಆದ್ಯತೆ ನೀಡಲಾಗಿತ್ತು. ಜ್ಯೋತಿ ಬಾ ಫುಲೆ, ಶಾಹೂ ಛತ್ರಪತಿ, ಡಾ॥ ಬಿ. ಆರ್. ಅಂಬೇಡ್ಕರ್ ಮೊದಲಾದವರು ಸಾಮಾಜಿಕ ಸ್ವಾತಂತ್ರ್ಯಕ್ಕೆ ಆದ್ಯತೆ ನೀಡಿದ್ದರು. ಅವರ ದೃಷ್ಟಿಯಲ್ಲಿ ಏಣಿ ಶ್ರೇಣಿಯ ಸಾಮಾಜಿಕ ವ್ಯವಸ್ಥೆಯಿರುವಲ್ಲಿ ರಾಜಕೀಯ ಸ್ವಾತಂತ್ರ್ಯವನ್ನು ಬ್ರಿಟಿಷ್ ವಸಾಹತುಶಾಹಿಯಿಂದ ಪಡೆದರೂ ಅದರಿಂದ ಹೆಚ್ಚು ಪ್ರಯೋಜನ ಆಗಲಾರದು ಎಂದಿತ್ತು. ಅವರ ಅನಿಸಿಕೆ ಬಹುಮಟ್ಟಿಗೆ ಸರಿಯೆಂದು ಈಗ ಕೆಲವರಿಗೆ ಅನಿಸಿದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ.'' (ರವಿ ರಾ. ಅಂಚನ್, ಲೇಖಕರ ಮಾತು. ರಾಜರ್ಷಿ ಶಾಹೂ ಛತ್ರಪತಿ, ಪ್ರಸಾರಾಂಗ, ತುಮಕೂರು ವಿಶ್ವವಿದ್ಯಾಲಯ. ೨೦೧೨)

ರವಿ ರಾ. ಅಂಚನ್ ಅವರ ಈ ಮಾತು ನಿಜ. ಈಗ್ಗೆ ೬೫ ವರ್ಷಗಳು ಕಳೆದರೂ ಭಾರತ ಗಣರಾಜ್ಯದಲ್ಲಿ

ರಾಜರ್ಷಿ ಶಾಹೂ ಛತ್ರಪತಿ ಅವರ ಇತಿವೃತ್ತ ತುಂಬ ರೋಚಕವಾದುದು. ಇವರು ೨೬ ಜನವರಿ ೧೮೭೪ರಲ್ಲಿ ಮರಾಠ ಜಹಗೀರದಾರ ಮನೆತನದಲ್ಲಿ ಹುಟ್ಟಿದರು. ಕೊಲ್ಲಾಪುರದ ರಾಜವಾಡದ ರಾಧಾಬಾಯಿ ಮತ್ತು ಅಪ್ಪಾ ಸಾಹೇಬ್ ಇವರ ತಂದೆ ತಾಯಿಗಳು. ರಾಧಾಬಾಯಿ ಕರ್ನಾಟಕದ ಮುಧೋಳದ ರಾಜಕುಮಾರಿ. ಶಾಹೂ ಹುಟ್ಟು ಹೆಸರು ಯಶವಂತ ಎಂದು. ಬಾಲಕ ಯಶವಂತ ಕೊಲ್ಲಾಪುರ ಸಂಸ್ಥಾನದ ದತ್ತಕ ಪುತ್ರನಾಗಿ ಶಾಹೂ ಛತ್ರಪತಿ ಎಂಬ ಅಭಿಧಾನ ಹೊಂದಿ ತನ್ನ ಹತ್ತನೆಯ ವಯಸ್ಸಿನಲ್ಲಿ (೧೮೮೪) ಅರಮನೆಗೆ ಬಂದರು. ಅವರು ಅಧಿಕಾರದ ಚುಕ್ಕಾಣಿ ಹಿಡಿದಿದ್ದು ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ (೧೮೯೪). ಇಲ್ಲಿಂದ ೧೯೨೨ರವರೆಗೆ ಎಂದರೆ ೨೮ ವರ್ಷ ಕಾಲ ಆ ಪುಟ್ಟ ಸಂಸ್ಥಾನದ ರಾಜನಾಗಿದ್ದರು. ತನ್ನ ಆಳ್ವಿಕೆಯ ಅವಧಿಯಲ್ಲಿ ೪೫೦ಕ್ಕೂ ಹೆಚ್ಚು ಸುಧಾರಣಾತ್ಮಕವಾದ ಕಾನೂನುಗಳನ್ನು ಜಾರಿಗೆ ತಂದರು ಮತ್ತು ಆ ಕಾನೂನುಗಳು ಕಡತಗಳಲ್ಲಿಯೇ ಉಳಿಯದಂತೆ ಹದ್ದಿನ ಕಣ್ಣಿಟ್ಟು ಅನುಷ್ಠಾನಗೊಳಿಸಲು ಶ್ರಮಿಸಿದರು. ಇದರಲ್ಲಿ ಬಹುಮುಖ್ಯವಾದುದು ಅಸ್ಪೃಶ್ಯತೆ ಆಚರಣೆಯ ನಿಷೇಧ. ಅರಮನೆಯಿಂದ, ಗುರುಮನೆಯಿಂದ, ಗುಡಿಗಳಿಂದ ಅದನ್ನು ತೊಡೆದು ಹಾಕಲು ಸತತ ಯತ್ನಿಸಿದರು. 'ಅಲ್ಲೇ ಕುಳಿತ' ಅಲಕ್ಷಿತ ಜನರ ಬವಣೆ ಬೇಗುದಿಗಳನ್ನು ಕಂಡು ಮರುಗುವ ಸಹೃದಯರು ಶಾಹೂ.



‘ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು’ ಎಂಬ ಮಾತು ಕೇವಲ ಮರೀಚಿಕೆಯಾಗಿಯೇ ಉಳಿದಿದೆ. ಇದಕ್ಕೆ ಕಾರಣಗಳನ್ನು ಪಟ್ಟಿಮಾಡುವ ಅಗತ್ಯವಿಲ್ಲ. ಹಣ, ಅಧಿಕಾರ ಲಾಲಸೆ, ಸ್ವಾರ್ಥ, ಭ್ರಷ್ಟಾಚಾರ, ಅದಕ್ಷತೆ, ಆಲಸ್ಯ, ಸ್ವಜಾತಿ ಪಕ್ಷಪಾತ, ಮತಮೌಢ್ಯ, ಧಾರ್ಮಿಕ ಅಸಹಿಷ್ಣುತೆ – ಇವು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇನ್ನೂ ಅಧಿಕವಾಗುತ್ತಿವೆ. ಆದ್ದರಿಂದ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯ ಬಗ್ಗೆಯೇ ಮರುಚಿಂತನೆ ನಡೆಸಬೇಕಾದ ಸಂದರ್ಭ ಉದ್ಭವಿಸುತ್ತಿದೆ. ಯಥಾಪ್ರಕಾರ ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯ, ಪಾಳೆಗಾರಿಕೆಯ ಪಿತೂರಿ ಸಂಚು, ಜಾತಿ ಜಗದ್ಗುರುಗಳ ಮತ ಮೌಢ್ಯ ಇವುಗಳ ವಿಜೃಂಭಣೆ ಹೆಚ್ಚಾಗುತ್ತಿದೆ. ದಲಿತರ, ಮಹಿಳೆಯರ ಗೋಳನ್ನು ಕೇಳುವವರೇ ಇಲ್ಲ. ಚರಿತ್ರೆಯಿಂದ ನಾವು ಪಾಠ ಕಲಿಯುತ್ತಿಲ್ಲ. ಇರುಳು ಕಂಡ ಬಾವಿಗೆ ಹಗಲು ಬೀಳುತ್ತಿದ್ದೇವೆ. ಇದಕ್ಕೆ ಕಾರಣ ಆಳುವ ವರ್ಗ ಬಹುಸಂಖ್ಯಾತ ಅಶಿಕ್ಷಿತ ಜನರನ್ನು ಯಾಮಾರಿಸಿ ಮೆರೆಯುತ್ತಿರುವುದು. ಇಂದಿನ ಪರಿಸ್ಥಿತಿಗೆ ಹೋಲಿಸಿದರೆ ಹಿಂದೆ ಕೊಲ್ಲಾಪುರದಂಥ ಪುಟ್ಟ ಭೂಭಾಗವನ್ನು ಆಳಿದ ರಾಜರ್ಷಿ ಬಿರುದಾಂಕಿತ ಶಾಹೂ ಛತ್ರಪತಿಯವರ ಸಾಮಾಜಿಕ ನ್ಯಾಯಬದ್ಧತೆ ಹಾಗೂ ರಾಜಕೀಯ ಮುತ್ಸದ್ದಿತನ ಎಲ್ಲ ಕಾಲಕ್ಕೂ ಮಾದರಿ ಎಂಬಂತಿದೆ.

ರಾಜರ್ಷಿ ಶಾಹೂ ಛತ್ರಪತಿ ಅವರ ಇತಿವೃತ್ತ ತುಂಬ ರೋಚಕವಾದುದು. ಇವರು ೨೬ ಜನವರಿ ೧೮೭೪ರಲ್ಲಿ ಮರಾಠ ಜಹಗೀರದಾರ ಮನೆತನದಲ್ಲಿ ಹುಟ್ಟಿದರು. ಕೊಲ್ಲಾಪುರದ ರಾಜವಾಡದ ರಾಧಾಬಾಯಿ ಮತ್ತು ಅಪ್ಪಾ ಸಾಹೇಬ್ ಇವರ ತಂದೆತಾಯಿಗಳು. ರಾಧಾಬಾಯಿ ಕರ್ನಾಟಕದ ಮುಧೋಳದ ರಾಜಕುಮಾರಿ. ಶಾಹೂ ಹುಟ್ಟು ಹೆಸರು ಯಶವಂತ ಎಂದು. ಬಾಲಕ ಯಶವಂತ ಕೊಲ್ಲಾಪುರ ಸಂಸ್ಥಾನದ ದತ್ತಕ ಪುತ್ರನಾಗಿ ಶಾಹೂ ಛತ್ರಪತಿ ಎಂಬ ಅಭಿಧಾನ ಹೊಂದಿ ತನ್ನ ಹತ್ತನೆಯ ವಯಸ್ಸಿನಲ್ಲಿ (೧೮೮೪) ಅರಮನೆಗೆ ಬಂದರು. ಅವರು ಅಧಿಕಾರದ ಚುಕ್ಕಾಣಿ ಹಿಡಿದಿದ್ದು ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ (೧೮೯೪). ಇಲ್ಲಿಂದ ೧೯೨೨ರವರೆಗೆ ಎಂದರೆ ೨೮ ವರ್ಷ ಕಾಲ ಆ ಪುಟ್ಟ ಸಂಸ್ಥಾನದ ರಾಜನಾಗಿದ್ದರು. ತನ್ನ ಆಳ್ವಿಕೆಯ ಅವಧಿಯಲ್ಲಿ ೪೫೦ಕ್ಕೂ ಹೆಚ್ಚು ಸುಧಾರಣಾತ್ಮಕವಾದ ಕಾನೂನುಗಳನ್ನು ಜಾರಿಗೆ ತಂದರು ಮತ್ತು ಆ ಕಾನೂನುಗಳು ಕಡತಗಳಲ್ಲಿಯೇ ಉಳಿಯದಂತೆ ಹದ್ದಿನ ಕಣ್ಣಿಟ್ಟು ಅನುಷ್ಠಾನಗೊಳಿಸಲು ಶ್ರಮಿಸಿದರು. ಇದರಲ್ಲಿ ಬಹುಮುಖ್ಯವಾದುದು ಅಸ್ಪೃಶ್ಯತೆ ಆಚರಣೆಯ ನಿಷೇಧ. ಅರಮನೆಯಿಂದ, ಗುರುಮನೆಯಿಂದ, ಗುಡಿಗಳಿಂದ ಅದನ್ನು ತೊಡೆದುಹಾಕಲು ಸತತ ಯತ್ನಿಸಿದರು. ‘ಅಲ್ಲೇ ಕುಳಿತ’ ಅಲಕ್ಷಿತ ಜನರ ಬವಣೆ ಬೇಗುದಿಗಳನ್ನು ಕಂಡು ಮರುಗುವ ಸಹೃದಯರು ಶಾಹೂ. ಬಹಿಷ್ಕೃತ ಭಾರತದ ಶೋಷಿತ, ಪೀಡಿತ ದುಃಖಾರ್ತರ ಸಂರಕ್ಷಣೆಗಾಗಿ, ಉದ್ಧಾರಕ್ಕಾಗಿ ಮನಃಪೂರ್ವಕ ಶ್ರಮಿಸಿದರು. ಇಡೀ ಭರತಖಂಡದಲ್ಲಿ ಇದೇ ಮೊದಲೆಂಬಂತೆ ದಲಿತರ ದಾಸ್ಯ ವಿಮೋಚನೆಗಾಗಿ ಶಾಸನಗಳನ್ನು ಮಾಡಿ ಅವರ ವಿಮುಕ್ತಿಗೆ ಮುನ್ನುಡಿ ಬರೆದರು. ರವಿ ರಾ. ಅಂಚನ್ ಶ್ರುತಪಡಿಸುವಂತೆ ಕೊಲ್ಲಾಪುರ ಪ್ರದೇಶದಲ್ಲಿ ಇಂದಿಗೂ ಲಿಖಿತ ಮತ್ತು ಅಲಿಖಿತ ಪರಂಪರೆಯಲ್ಲಿ ಶಾಹೂ ಮಹಾರಾಜರ ನಡಿಗೆಗಳು ತಮ್ಮ ನಿಗೂಢತೆಗಳನ್ನು ನಿಧಾನವಾಗಿಯಾದರೂ ಬಿಟ್ಟುಕೊಡುತ್ತಲೇ ಇವೆ. ಅವರಿಟ್ಟ ಹೆಜ್ಜೆ ಗುರುತುಗಳ ಅನ್ವೇಷಣೆ ಇನ್ನೂ ನಡೆಯಬೇಕಿದೆ. ಯಾಕೆಂದರೆ ಅಲ್ಲಮಪ್ರಭು ನಿರ್ವಚಿಸಿರುವಂತೆ ಹಿಂದಣ ಹೆಜ್ಜೆಯನರಿತಲ್ಲದೆ ಮುಂದಣ ಹೆಜ್ಜೆಯನಿರಿಸಲುಬಾರದು.

ಕೊಲ್ಲಾಪುರ ಸಂಸ್ಥಾನ ಕೇವಲ ೨೨೧೭ ಚದರ ಮೈಲಿ ವಿಸ್ತೀರ್ಣದ ಹಾಗೂ ಏಳೆಂಟು ಲಕ್ಷ ಜನಸಂಖ್ಯೆ ಇದ್ದ ಪುಟ್ಟ ಭೂ ತುಣುಕು. ಶಾಹೂ ಛತ್ರಪತಿ ಪಟ್ಟವೇರಿದಾಗ ಅದು ಅಧಿಕಾರ ಕಿತ್ತಾಟದ, ಜಾತಿ ಜಗಳದ ಕದನ ಕ್ಷೇತ್ರವಾಗಿತ್ತು. ಬ್ರಾಹ್ಮಣರ ಹಾಗೂ ಸವರ್ಣೀಯ ಶೂದ್ರರ ಮೇಲಾಟದಲ್ಲಿ, ಕೋಣಗಳೆರಡರ ಹೋರಾಟದಲ್ಲಿ ಕಾಲು ತುಳಿತಕ್ಕೆ ಸಿಕ್ಕ ಗರಿಕೆಯಂತಾಗಿತ್ತು ಪಂಚಮರ ಸ್ಥಿತಿ. ಅರಮನೆಗಳಲ್ಲಿ ಏನೂ ನಡೆಯಬಹುದು ಎಂಬ ನಾಣ್ಣುಡಿಯೊಂದಿದೆ. ಹಾಗೆ ಕೊಲ್ಲಾಪುರದ ಗತಿಶೀಲ ಇತಿಹಾಸದಲ್ಲಿ ಛತ್ರಪತಿ ಶಿವಾಜಿಯ ನಂತರ ಅರಮನೆಗೆ ಬಂದ ದತ್ತಕ ಪುತ್ರರು ಪಟ್ಟವೇರುವ ಮೊದಲೇ ಅಥವಾ ಪಟ್ಟವೇರಿದ ಕೆಲ ಸಮಯದಲ್ಲೇ ನಿಗೂಢವೆಂಬಂತೆ ಅಸು ನೀಗುತ್ತಿದ್ದರು. ಶಾಹೂ ಛತ್ರಪತಿ ಈ ಅರಮನೆಗೆ ದತ್ತಕ ಬಂದ ಸಂದರ್ಭದಲ್ಲಿ ಪೇದೆಯಿಂದ ಮೊದಲುಗೊಂಡು ಹಿರಿಯ ಅಧಿಕಾರಿಯವರೆಗೆ ಚಿತ್ಪಾವನ ಬ್ರಾಹ್ಮಣರದ್ದೇ ಕಾರುಬಾರು. ಸ್ವಜಾತಿಯ ಪತ್ರಿಕಾ ಮಾಧ್ಯಮ ಕೂಡ ಅವರ ಪರವಾಗಿತ್ತು. ಆದರೆ ಜನಪದ ರಂಗಭೂಮಿಯ ‘ತಮಾಷಾ’ ಮತ್ತು ‘ಝುಲ್ಸಾ’ ಇವು ಮಾತ್ರ ಜನಜಾಗೃತಿಯ ಪ್ರೇರಣಾ ಕೇಂದ್ರಗಳಾಗಿದ್ದವು. ಬೀದಿ ರಂಗಭೂಮಿಯ ಈ ಉರಿ ಚಮ್ಮಾಳಿಗೆ ಕೆಳಗೆ ಸಿಕ್ಕ ಹುಸಿ ನೆಲೆಗಳು ಕುಸಿದು ಕಂಪಿಸುತ್ತಿದ್ದವು. ಹಳ್ಳಿ ಹಳ್ಳಿಗಳಲ್ಲೂ ಆಗಿನ ದಿನಗಳಲ್ಲಿ ಜ್ಯೋತಿ ಬಾ ಫುಲೆ ಅವರ ಕ್ರಾಂತಿಕಾರಿ ಜ್ಯೋತಿ ಬೆಳಗುತ್ತ, ಜನಪದ ಕಲೆಗಳಲ್ಲಿ ಅದು ಮರುಹುಟ್ಟು ಪಡೆಯುತ್ತಿತ್ತು. ಮೇಲ್ವರ್ಗದ ಸುದ್ದಿ ಪತ್ರಿಕೆಗಳ ಸುಳ್ಳುಗಳು ತೂರಿಹೋಗುತ್ತಿದ್ದವು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಬ್ರಿಟಿಷ್ ಸರ್ಕಾರ ಜಯವಂತರಾವ್ ಘಾಡ್ಗೆ ಎಂಬುವವರನ್ನು ರಾಜಪ್ರತಿನಿಧಿಯನ್ನಾಗಿ ನೇಮಿಸಿತು. ಆರಂಭದಲ್ಲಿ ಬಾಲಕ ಶಾಹೂ ಸಹ ಅಂದಿನ ರಾಜಕೀಯ ಪಗಡೆಯಾಟದಲ್ಲಿ ಹೆಚ್ಚು ಕಡಿಮೆ ದಾಳವಾಗಿಬಿಟ್ಟಿದ್ದರು. ಆದರೆ ಕಾಲಕ್ರಮೇಣ ಅಧಿಕಾರ ಕೈಗೆ ಬಂದ ಮೇಲೆ ಮೆಲ್ಲಗೆ ತಮ್ಮ ಅಸ್ತಿತ್ವವನ್ನು ತೋರಿಸಿಕೊಟ್ಟರು. ಅವರು ತಮ್ಮ ಕೈಗೆ ಬಂದ ರಾಜದಂಡವನ್ನು ಕ್ರಾಂತಿಕಾರಿಯಾಗಿ ಸಮಾಜ ಸುಧಾರಣಾ ಮಾನದಂಡವನ್ನಾಗಿ ಬಳಸಿಕೊಂಡರು. ಸಮಾಜ ಸುಧಾರಕನಾಗಿ, ಜನಾನುರಾಗಿ ರಾಜನಾಗಿ, ಬಡವರ ಬಂಧುವಾಗಿ ಕೀರ್ತಿ ಪಡೆದರು. ಬಡವರ ಪರವಾದ ಅವರ ಆಡಳಿತವು ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಲು ಯೋಗ್ಯವಾದುದು.

‘ಬೆಳೆವ ಪೈರು ಮೊಳಕೆಯಲ್ಲಿಯೇ ತೋರಿ’ ಬರುತ್ತದೆ ಎಂಬಂತೆ ಶಾಹೂ ಛತ್ರಪತಿಯ ಬಾಲ್ಯ ವಿದ್ಯಾಭ್ಯಾಸ ಸಂದರ್ಭದಲ್ಲಿಯೇ ಅವರ ಪ್ರಗತಿಪರ ದೃಷ್ಟಿ ಕಂಡು ಬರುತ್ತದೆ. ಸದ್ವರ್ತನೆಗೆ ಹೆಸರಾಗಿದ್ದ ಅವರು ತನ್ನ ತಂದೆಗೆ ಕೆಟ್ಟ ಹೆಸರು ತಂದ ಅವರ ಸಹಚರ ಕುಡುಕರನ್ನು ದೂರವಿಟ್ಟು, ಬಡವರ ಪರ ಚಿಂತಿಸುವ ಬಂಡಾಯಗಾರ ಯುವಕನಾಗಿ ಬೆಳೆದರು. ತನ್ನ ಶಿಷ್ಯನ ಪ್ರತಿಭೆಯನ್ನು ಗುರ್ತಿಸಿರುವ ಫ್ರೇಜ಼ರ್ ಎಂಬ ಆಂಗ್ಲ ಅಧ್ಯಾಪಕ, ‘ಶಾಹೂ ಸರಳನೂ, ಉದಾರಿಯೂ ಆದ ಪ್ರೇಮಮಯಿ ತರುಣನಾಗಿದ್ದಾನೆ. ಆತ ಎತ್ತರದ ದೃಢಕಾಯನಾಗಿದ್ದು, ಮರಾಠರ ವೈಶಿಷ್ಟ್ಯದ ಪ್ರತೀಕದಂತಿದ್ದಾನೆ. ಶಾಲೆಯ ಶಿಕ್ಷಣದ ಮಹತ್ವವನ್ನು ಆತ ಬಲ್ಲವನಾಗಿದ್ದರೂ ಪುಸ್ತಕದ ಜ್ಞಾನಕ್ಕಿಂತ ನಿರೀಕ್ಷಣೆ, ವ್ಯವಹಾರ ಮತ್ತು ಅನುಭವದಿಂದ ಹೆಚ್ಚು ಕಲಿತಿದ್ದಾನೆ’ ಎಂದಿದ್ದಾರೆ. ಅಂತೆಯೇ ಅವರ ಗತ್ತುಗ್ಗಾರಿಕೆ ಹಾಗೂ ಚುರುಕುತನವನ್ನು ಕೊಂಡಾಡಿದ್ದಾರೆ. ಶಾಹೂ ಪಾಶ್ಚಾತ್ಯ ಶಿಕ್ಷಣದ ಜೊತೆಗೆ ಕುಸ್ತಿ, ಬೇಟೆ, ಕೋಣಗಳ ಓಟ, ಸಂಗೀತ, ನಾಟಕ, ಕ್ರೀಡೆ, ಕುದುರೆ ಸವಾರಿ, ಅಸ್ತ್ರ ವಿದ್ಯೆ, ಕೃಷಿ ಶಾಸ್ತ್ರ ಮುಂತಾಗಿ ಎಲ್ಲದರಲ್ಲೂ ಕುತೂಹಲ ತಳೆದಿದ್ದರು. ಬಡವರ ಉದ್ಧಾರದ ಬಗ್ಗೆ ಹಲವು ಹತ್ತು ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ತಿರುಗುತ್ತಿದ್ದರು. ಯುವಕ ಶಾಹೂ ಅಧಿಕಾರಕ್ಕೆ ಬಂದ ತರುವಾಯ ಮೊದಲು ಮಾಡಿದ ಕೆಲಸವೆಂದರೆ, ತನ್ನ

‘ಹೊಸತು’ ಚಂದಾ ನೋಂದಣಿಗೆ ಮತ್ತು
ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ
ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಡಪ ಮೈದಾನದ ಆವರಣ, ಕಲಾಭವನ, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಯೂನಿಯನ್ ಕ್ಲಬ್ ಆವರಣ, ಪುರಸಭೆ ಕಚೇರಿ ಬಳಿ, ಎಂ. ಜಿ. ರಸ್ತೆ, ಬಿಜಾಪುರ - ೫೮೬ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸರ್ಕಾರಿ ಉರ್ದು ಶಾಲೆ ಆವರಣ, ಐ.ಬಿ. ಎದುರು, ಮುಖ್ಯರಸ್ತೆ, ಚಿತ್ರದುರ್ಗ - ೫೭೭ ೫೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಹಿಂದು ಮುಸಾಫಿರ್ ಛತ್ರ, ಮಯೂರ ಹೋಟೆಲ್ ಹತ್ತಿರ, ಎಂ.ಜಿ.ರಸ್ತೆ, ಚಿಕ್ಕಮಗಳೂರು - ೫೭೭ ೧೦೧

ಸಹೋದರ ಮತ್ತು ಆಪ್ತರೊಂದಿಗೆ ಒಂದು ವರ್ಷ ಪರ್ಯಂತ ತನ್ನ ರಾಜ್ಯದ ಮೂಲೆ ಮೂಲೆಗೂ ಭೇಟಿ ನೀಡಿ ಜನತೆಯ ಕಷ್ಟ-ಸುಖಗಳೇನೆಂಬುದನ್ನು ಅರ್ಥ ಮಾಡಿಕೊಂಡದ್ದು, ಅಭಿವೃದ್ಧಿ ಪಥದಲ್ಲಿ ಮೊದಲು ಕೃಷಿ, ಉದ್ಯಮ, ಕೈಕಸುಬು, ವಾಣಿಜ್ಯ ಇವುಗಳಿಗೆ ಆದ್ಯತೆ ಇರಬೇಕೆಂಬುದನ್ನು ಅವರು ಬಲ್ಲವರಾಗಿದ್ದರು. ರಾಜ್ಯವು ಸಾಮಾಜಿಕವಾಗಿ ಆರ್ಥಿಕವಾಗಿ ಮುಂದುವರಿಯ ಬೇಕಾದರೆ ಅಲ್ಲಿ ಉದ್ಯಮಗಳು ಬೆಳೆಯಬೇಕು ಎಂಬುದನ್ನು ಚೆನ್ನಾಗಿ ಮನಗಂಡಿದ್ದರು. ಶಾಹು ಛತ್ರಪತಿಯವರ ಉದ್ಯಮಶೀಲತೆಗೆ ಒಂದು ಉದಾಹರಣೆ ಎಂದರೆ ಅವರು ಗಂಗಾರಾಮ್ ಕಾಂಬ್ಳೆ ಎಂಬ ಅಸ್ಪೃಶ್ಯನು ತೆರೆದ ಹೋಟೆಲ್ ಉದ್ಯಮಕ್ಕೆ ನೀಡಿದ ಪ್ರೋತ್ಸಾಹ. ಗಂಗಾರಾಮ್ ಕಾಂಬ್ಳೆಯ ಹೋಟೆಲ್ ಶುಚಿ ಮತ್ತು ರುಚಿಗೆ ಪ್ರಸಿದ್ಧಿಯಾಗಿದ್ದು, ಮಹಾರಾಜರು ದಿನಂಪ್ರತಿ ಬೆಳಿಗ್ಗೆ ವಿಹಾರಕ್ಕೆ ಹೋಗಿ ಬರುವಾಗ ಅಲ್ಲಿ ಚಹಾ ಸೇವಿಸಿ ಬರುತ್ತಿದ್ದುದರಿಂದ ಅವನು ಉದ್ಯಮದಲ್ಲಿ ಯಶಸ್ಸು ಪಡೆದನಲ್ಲದೆ, ಅಸ್ಪೃಶ್ಯತೆಯ ನಿರ್ಮೂಲನಕ್ಕೂ ಕಾರಣವಾಯಿತು. ಹೀಗೆ ಶಾಹೂ ಮಹಾರಾಜರು ಒಂದೇ ಕಲ್ಲಿನಿಂದ ಎರಡು ಹಕ್ಕಿಗಳನ್ನು ಹೊಡೆಯುವ ಚತುರಮತಿಗಳಾಗಿದ್ದರು.

ಶಾಹೂ ಮಹಾರಾಜರ ಪ್ರತ್ಯುತ್ಪನ್ನ ಮತಿ, ಪ್ರಗತಿಪರ ಬುದ್ಧಿ ಇನ್ನೂ ಎದ್ದು ಕಾಣುವುದು ರಾಜಪುರೋಹಿತರ ಕರ್ತವ್ಯಲೋಪ ಪ್ರಸಂಗದಲ್ಲಿ, ಒಮ್ಮೆ ಶಾಹೂ ಮತ್ತು ಅವರ ಬಂಧು ವರ್ಗದವರು 'ಪಂಚಗಂಗಾ' ನದಿಯಲ್ಲಿ ಕಾರ್ತಿಕ ಸ್ನಾನಕ್ಕೆಂದು ಹೋದಾಗ ರಾಜಪುರೋಹಿತ ನಾರಾಯಣ ಅಪ್ಪಾ ಸಾಹೇಬ್ ರಾಜೋಪಾಧ್ಯೆ ಎಂಬಾತ ವೇದೋಕ್ತ ಮಂತ್ರವನ್ನು ಹೇಳದೆ ಪುರಾಣೋಕ್ತ ಮಂತ್ರವನ್ನು ಪಠಿಸುತ್ತಾನೆ. ಏಕೆಂದು ಸಹ - ಪುರೋಹಿತರನ್ನು ವಿಚಾರಿಸಿದಾಗ ಮರಾಠರು ಶೂದ್ರರು; ಆದ್ದರಿಂದ ವೇದೋಕ್ತ ಮಂತ್ರಕ್ಕೆ ಅನರ್ಹರು ಎಂದು ಬ್ರಾಹ್ಮಣ ಶ್ರೇಷ್ಠತೆಯನ್ನು ಮೆರೆಯುತ್ತಾನೆ. ಆ ಸಂದರ್ಭದಲ್ಲಿ ಶಾಹೂ ಮಹಾರಾಜರು ಕೊಂಚವೂ ತಾಳ್ಮೆಗೆಡದೆ, ಹಿಂದಿರುಗಿ ಬಂದು ಆ ರಾಜ ಪುರೋಹಿತನನ್ನು ಹುದ್ದೆಯಿಂದ ವಜಾ ಮಾಡಿ ಇನ್ನೊಬ್ಬನನ್ನು ನಿಯಮಿಸಿ ಆಜ್ಞೆ ಹೊರಡಿಸುತ್ತಾರೆ. ಹೀಗೆ ಬ್ರಾಹ್ಮಣ ಶ್ರೇಷ್ಠತೆಯನ್ನು ಧಿಕ್ಕರಿಸಿ ನಿಂತ ಇತಿಹಾಸ ಪುರುಷ ಭಾರತ ಚರಿತ್ರೆಯಲ್ಲಿ ಇನ್ನೊಬ್ಬನಿಲ್ಲ ಎಂದರೆ ಆಶ್ಚರ್ಯ. ಶಾಹೂ ಮಹಾರಾಜರ ಇಂಥ ಕೃತಿಶೀಲ ನಡಿಗೆಯು ಪುರಾಣ ಕಾಲದ ದುರ್ಯೋಧನನ ವರ್ತನೆಯನ್ನು ನೆನಪಿಗೆ ತರುತ್ತದೆ. ಕುಲ ಮೂಲಗಳ ವಿಳಾಸ ತಿಳಿಯದ ಕರ್ಣ ವ್ಯಾಯಾಮ ರಂಗದಲ್ಲಿ ಬ್ರಾಹ್ಮಣರಿಂದ ಅವಮಾನಕ್ಕೆ ಗುರಿಯಾದಾಗ ದುರ್ಯೋಧನ ಅವನನ್ನು ಅಂಗರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿ ಆ ಬ್ರಾಹ್ಮಣರಿಂದಲೇ ಪಟ್ಟಾಭಿಷೇಕದ ಮಂತ್ರ ಪಠಿಸುವಂತೆ ಏರ್ಪಡಿಸುತ್ತಾನೆ.

ಶಾಹೂ ಮಹಾರಾಜರು ತಮ್ಮ ಅಧಿಕಾರಾವಧಿಯಲ್ಲಿ ಸುಮಾರು ೪೪ ಪ್ರಮುಖ ಜನಮುಖಿ ಕಾಯಿದೆಗಳನ್ನು ಜಾರಿಗೊಳಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುವು ಕೆಲವು: ಜಾನುವಾರು ಹರಾಜು ನಿಯಮ, ಬೇಟೆ ನಿಯಮ, ಗಿರಿಜನರ ಸಂರಕ್ಷಣಾ ನೀತಿ, ಹಿಂದುಳಿದ ವರ್ಗಕ್ಕೆ ಶೇ. ೫೦ ಭಾಗ ಮೀಸಲಾತಿ, ದುರ್ಬಲ ವರ್ಗದ ಮಕ್ಕಳಿಗೆ ಶಾಲಾ ಶುಲ್ಕ ರದ್ದತಿ, ಹಳ್ಳಿಗೊಂದು ಶಾಲೆ,



ದೇವಳದ ನಿಧಿ ಶೈಕ್ಷಣಿಕ ಪ್ರಸಾರಕ್ಕೆ ನಿಯೋಗ, ವಿಧವಾ ವಿವಾಹ ಕಾನೂನುಬದ್ಧ, ಜೀತಪದ್ಧತಿ ರದ್ದತಿ, ಅಂತರ್ಜಾತಿ ಹಾಗೂ ಅಂತರ್ಧರ್ಮ ವಿವಾಹಗಳಿಗೆ ಪ್ರೋತ್ಸಾಹ, ಆನುವಂಶಿಕ ಕುಲಕರ್ಣಿ ಹಾಗೂ ಜೋಯಿಷ ವತನ ಪದ್ಧತಿ ರದ್ದತಿ, ದಲಿತರು ಪರಭಾರೆ ಮಾಡಿದ ಜಮೀನನ್ನು ಪುನಃ ಅವರಿಗೆ ನೋಂದಣಿ ಮಾಡಿಸುವುದು, ಕುಲಕರ್ಣಿ ಹುದ್ದೆಗೆ ಬದಲಾಗಿ ಸಂಬಳದ 'ತಲಾಟಿ' ಹುದ್ದೆ ಜಾರಿ, ಸರ್ಕಾರಿ ಹುದ್ದೆಯಲ್ಲಿ ದಲಿತರಿಗೆ ಆದ್ಯತೆ, ಅಸ್ಪೃಶ್ಯತೆ ನಿಷೇಧ, ಬ್ರಾಹ್ಮಣೇತರ ಪೂಜಾರಿಗಳಿಗೆ ಅರಮನೆಗೆ ಪ್ರವೇಶ ಇತ್ಯಾದಿ. ಈ ಪಟ್ಟಿಯನ್ನು ಗಮನಿಸಿದರೆ ನವಕರ್ನಾಟಕದ ಹರಿಕಾರನೆಂದು ಹೆಸರು ಮಾಡಿದ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರ ಪ್ರಗತಿಪರ ಕಾನೂನುಗಳ ಜಾರಿ ಇದ್ದಂತೆ ಕಂಡುಬರುತ್ತದೆ. ಹಾವನೂರು ಆಯೋಗದ ಅನ್ವಯ ಅರಸು ೧೯೭೦ರ ದಶಕದಲ್ಲಿ ಕರ್ನಾಟಕದಲ್ಲಿ ಇಂಥ ಸುಧಾರಣೆಗಳನ್ನು ತಂದು ದಲಿತರಲ್ಲಿ ಆತ್ಮವಿಶ್ವಾಸ ಹುಟ್ಟಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

ಹೀಗೆ ಜಾತಿಭೇದ, ಸಾಮಾಜಿಕ ಅಸಮಾನತೆ, ಧಾರ್ಮಿಕ ಗುಲಾಮಗಿರಿ, ಮತಮೌಢ್ಯ ಮುಂತಾದ ಸಾಮಾಜಿಕ ಪಿಡುಗುಗಳನ್ನು ಬೇರು ಸಮೇತ ಕಿತ್ತೊಗೆಯಲು ಶಾಹೂ ಛತ್ರಪತಿಯವರು ಪಣತೊಟ್ಟು ಕಾರ್ಯರೂಪಕ್ಕೆ ತಂದುದು ತೀರ ಮಹತ್ವದ ಸಂಗತಿ. ಸರ್ವರ ಸಬಲೀಕರಣಕ್ಕಾಗಿ ಮರೆವು ಆಲಸ್ಯಕ್ಕೆಡೆಯಿಲ್ಲದೆ ಇವರು ಶ್ರಮಿಸಿದರು. ಪ್ರತಿಯೊಂದು ಜಾತಿ, ಜನಾಂಗಕ್ಕೂ ಒಂದೊಂದು ಹಾಸ್ಟಲ್ ತೆರೆದರು, ಪಾಶ್ಚಾತ್ಯ ವಿಜ್ಞಾನ ತಂತ್ರಜ್ಞಾನದೊಂದಿಗೆ ಭಾರತೀಯ ಕುಲ ಮೂಲದ ಪಾರಂಪರಿಕ ಸುಜ್ಞಾನವನ್ನೂ ಬೋಧಿಸುವಂತೆ ನೋಡಿಕೊಂಡರು. ಸಾಮಾಜಿಕ ಸುಧಾರಣೆಗೆ ಈ ಪೂರಕ ಜ್ಞಾನ ಅಗತ್ಯ ಎಂದು ಬಲ್ಲವರಾಗಿದ್ದರು. ದಲಿತೋದ್ಧಾರದ ಕಾಳಜಿ ಶಾಹೂ ಅವರಿಗೆ ಎಷ್ಟಿತ್ತೆಂಬುದರ ಬಗ್ಗೆ ಹೇಳಬೇಕೆಂದರೆ ಇವರು ೧೯೨೦ ಮಾರ್ಚ್ ೨೨ರಂದು ಡಾ|| ಅಂಬೇಡ್ಕರ್ ಅವರನ್ನು ಕುರಿತು ಮಾಣಗಾಂವಿನ ಅಸ್ಪೃಶ್ಯತಾವಾದಿ ಜನತಾ ಪರಿಷತ್ತಿನಲ್ಲಿ, ''ಇವರೇ ನಿಮ್ಮ ಭಾವಿ ನಾಯಕರು'' ಎಂದು ಅವರತ್ತ ಬೊಟ್ಟು ಮಾಡಿದ್ದು. ಇದು ಬಹಿಷ್ಕೃತ ಭಾರತದ ಉದ್ಧಾರ ಶಿಲ್ಪಿಯನ್ನು ಕುರಿತು ಆಡಿದ ದೂರದರ್ಶಿ ಮಾತಲ್ಲದೆ ಮತ್ತೇನು? ಮುಂದೆ ಅಂಬೇಡ್ಕರ್ ಅವರಿಂದಾಗಿಯೇ ನಮ್ಮ ಸಂವಿಧಾನದಲ್ಲಿ ಮೀಸಲಾತಿ ಶೋಷಿತರ ಹಕ್ಕಾಗಿ ಮಾರ್ಪಾಡಾಯಿತು.

ಶಾಹೂ ಅವರಿಗೆ ಆದರ್ಶವಾಗಿದ್ದ ದೂರದರ್ಶಿ ಚಿಂತಕ, ಸಾಮಾಜಿಕ ಕ್ರಾಂತಿಯ ಆದ್ಯ ಪ್ರವರ್ತಕ ಜ್ಯೋತಿ ಬಾ ಫುಲೆಯವರು ೧೮೯೦ರಲ್ಲಿ ತೀರಿಕೊಂಡರು. ಶಾಹೂ ಮತ್ತು ಫುಲೆ ಯಾವತ್ತೂ ಸಂಧಿಸಲಾಗಿರಲಿಲ್ಲ. ಆದರೆ ಆ ಮಹಾನ್ ಕ್ರಾಂತಿದರ್ಶಿಯ ಆದರ್ಶಗಳನ್ನು ಶಾಹೂ ತನ್ನ ರಾಜದಂಡವನ್ನು ಚಲಾಯಿಸುತ್ತ ಅನುಷ್ಠಾನಕ್ಕೆ ತಂದರು. ಮೀಸಲಾತಿಯು ಶೋಷಿತ ಸಮುದಾಯಕ್ಕೆ ಭಿಕ್ಷೆಯಲ್ಲ, ಅದು ಅವರ ಹಕ್ಕು ಎಂದು ಪ್ರತಿಪಾದಿಸಿದರು.

ಆದರೆ ಇಂದಿನ ನಗರಕೇಂದ್ರಿತ ಸರ್ಕಾರಗಳು ಅಭಿವೃದ್ಧಿ ಹೆಸರಿನಲ್ಲಿ ದಲಿತ, ಗಿರಿಜನ, ಅರಣ್ಯವಾಸಿ ಬುಡಕಟ್ಟುಗಳನ್ನು ಅವರ ಪಾರಂಪರಿಕ ನೆಲೆಗಳಿಂದ ಒಕ್ಕಲೆಬ್ಬಿಸಿ ಅಲೆಮಾರಿಗಳನ್ನಾಗಿ ಮಾಡುತ್ತಿವೆಯಷ್ಟೆ. ಆದರೆ ಶಾಹೂ ಮಹಾರಾಜರು ಅರಣ್ಯವಾಸಿ ಬುಡಕಟ್ಟು ಜನರಿಗೆ ವಸತಿ ಶಾಲೆಗಳನ್ನು ಈಗ್ಗೆ ಶತಮಾನದ ಹಿಂದೆಯೇ ತೆರೆದಿದ್ದರೆಂದರೆ ಯಾರಿಗಾದರೂ ಬೆರಗು ಬರುವುದು ಸರಿಯೇ. ಅಲ್ಲದೆ 'ತಲಾಟಿ' ತರಬೇತಿ ಶಾಲೆಗಳನ್ನು ತೆರೆದು ಬುಡಕಟ್ಟು ಜನರನ್ನು ಪುರಜನರತ್ತ ಕರೆದು ತಂದದ್ದೂ ಕೂಡ ಅವರ ಸುಧಾರಣೆಯ ಒಂದು ಭಾಗವಾಗಿತ್ತು. ''ನನ್ನ ಅರಸೊತ್ತಿಗೆ ನಷ್ಟವಾದರೂ ಪರವಾಗಿಲ್ಲ, ನಾನು ಅಸ್ಪೃಶ್ಯರಿಗೆ ಮಾಡಬೇಕಾದುದನ್ನೆಲ್ಲಾ ಅವಶ್ಯವಾಗಿ ಮಾಡುತ್ತೇನೆ'' ಎನ್ನುವುದು ಶಾಹೂ ಮಹಾರಾಜರ ದೃಢ ನಿಲುವಾಗಿತ್ತು. ಶಾಹೂ ಅವರು ೬ ಮೇ, ೧೯೨೨ರಂದು ನಿಧನ ಹೊಂದಿದರು. ಅವರು ಭಾರತೀಯ ರಾಜ ದಿಗಂತದಲ್ಲಿ ಬೆಳಗುವ ಒಂದು ನಕ್ಷತ್ರ.

ಇಂಥ ಮಹನೀಯರನ್ನು ಕುರಿತು, ಮುಂಬಯಿಯಿಂದ ರವಿ ರಾ. ಅಂಚನ್ ಅವರು 'ರಾಜರ್ಷಿ ಶಾಹೂ ಛತ್ರಪತಿ' ಎಂಬ ಕಿರುಹೊತ್ತಿಗೆ (೨೦೧೨)ಯನ್ನು ಪ್ರಕಟಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇದನ್ನು ತುಮಕೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿರುವುದು ಸ್ವಾಗತಾರ್ಹ.

**ಪ್ರೊ|| ಶಿವರಾಮಯ್ಯ**
ನಂ. ೧೭೨, 'ಹೊಂಗೆಸಾಲುಮನೆ', ಐಸೆಕ್ ರಸ್ತೆ
ನಾಗರಭಾವಿ ಗ್ರಾಮ, ಬೆಂಗಳೂರು - ೫೬೦ ೦೭೨

**ಭೂತ**

ದುರಂತ
ಎಂದರೆ, ಬಹಳಷ್ಟು
ದಂಪತಿಗಳ
ನಡುವೆ ನಿಲ್ಲುವ ಭೂತ!

**ಸಿ.ಪಿ.ಕೆ.**
ಮೈಸೂರು




**ಎಂ. ವೈ. ಘೋರ್ಪಡೆ ನಾನು ಕಂಡಂತೆ**

*ಭಾರತೀ ಕಾಸರಗೋಡು*

**ಪುಟ :** ೮ + iv + ೬೮ = ೮೦

**ಬೆಲೆ : ರೂ. ೬೦**

**ಶ್ರೀನಿವಾಸ ಪುಸ್ತಕ ಪ್ರಕಾಶನ** ನಂ. ೧೬೪/ಎ ಮೊದಲನೇ ಮಹಡಿ ಎಂ.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ ಬಸವನಗುಡಿ, ಬೆಂಗಳೂರು - ೫೬೦ ೦೦೪

*ಎಂ. ವೈ. ಘೋರ್ಪಡೆ – ಹೌದು, ಕೆಲವು ವ್ಯಕ್ತಿಗಳನ್ನು ಮರೆಯಲಾಗುವುದೇ ಇಲ್ಲ. ಅವರ ವ್ಯಕ್ತಿತ್ವವೇ ಹಾಗಿರುತ್ತದೆ. ತೆಂಗಿನ ಮರದಂತೆ – ಸಂಪಿಗೆ ಮರದಂತೆ – ಆಲದಂತೆ ಸಾರ್ಥಕ ಬದುಕು ಎನ್ನುತ್ತಾರಲ್ಲ, ಹಾಗೆ! ತಾವೂ ಎತ್ತರಕ್ಕೆ ಬೆಳೆದು ಇತರರಿಗೂ ನೆರಳು ನೀಡಿ, ಸುಗಂಧ ಪಸರಿಸಿ, ಫಲ-ಪುಷ್ಪ ಸಿಗುವಂತೆ ಬಾಳಿದ ಮಹನೀಯರು ನಮ್ಮ ಮಧ್ಯೆ ಕೆಲವೇ ಜನರಿರುತ್ತಾರೆ. ತಾವಳಿದರೂ ಇತರರು ನೆನಪಿಸಿಕೊಳ್ಳುವಂತಹ ಬಾಳ್ವೆ ಅವರದು. ಕರ್ನಾಟಕ ಸರಕಾರದಲ್ಲಿ ಸಚಿವರಾಗಿದ್ದು ಜನಾದರಣೀಯ ಕಾರ್ಯಕ್ರಮಗಳಿಂದ ಹೆಸರು ಗಳಿಸಿದ ಶ್ರೀ ಎಂ. ವೈ. ಘೋರ್ಪಡೆ ಅವರದು ಅಂತಹ ಸ್ಮರಣೀಯ ಬದುಕು. ಸಾಹಿತ್ಯಿಕ ಕಾರಣಗಳಿಗಾಗಿ ಅವರನ್ನು ಹತ್ತಿರದಿಂದ ಕಾಣುವ ಅವಕಾಶವೊಂದು ಒದಗಿಬಂದು, ಅವರ ಘನತೆಯನ್ನು ಅರಿತ ಶ್ರೀಮತಿ ಭಾರತೀ ಕಾಸರಗೋಡು ಅವರಿಗೆ ಘೋರ್ಪಡೆ ಬಗ್ಗೆ ಒಂದು ಪುಸ್ತಕ ಬರೆಯದಿರಲು ಸಾಧ್ಯವಾಗಲೇ ಇಲ್ಲ. ಬರೆಯದಿದ್ದರೆ ಅದು ದೊಡ್ಡ ಕೊರತೆಯೆಂದು ಭಾವಿಸಿ ತಾನು ಕಂಡಂತೆ ಅವರ ವ್ಯಕ್ತಿತ್ವವನ್ನು ತಮ್ಮ ಎಂದಿನ ಸುಲಲಿತ ಶೈಲಿಯಲ್ಲಿ ನಮಗೂ ಪರಿಚಯಿಸಿದ್ದಾರೆ. ಇಂದಿನ ರಾಜಕಾರಣದಲ್ಲಿ ಇವರಂತಹ ನಿಸ್ಪೃಹ ವ್ಯಕ್ತಿತ್ವವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲವೇನೋ ಎಂಬಂತಹ ಚಾರಿತ್ರ್ಯ ಇವರದೆಂದು ನಾವಿಲ್ಲಿ ಮನಗಾಣಬಹುದು.*

**ಕರ್ನಾಟಕ ಕೇಸರಿ (ಡಾ|| ಬಿ. ಎ. ಸನದಿಯವರ ಆಯ್ದ ಕಥೆಗಳು)**

*ಸಂಪಾದಕರು : ಬಿ. ಪಿ. ಶಿವಾನಂದರಾವ್*

**ಪುಟ : ೨೭೨ + iv** **ಬೆಲೆ : ರೂ. ೨೦೦**

**ಜಾಗೃತಿ ಪ್ರಿಂಟರ್ಸ್,** ನಂ. ೫೬/೧-೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆಪಾಳ್ಯ ಮಾಗಡಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧

*ಗೌರೀಶ ಕಾಯ್ಕಿಣಿಯವರಿಂದ ಮಾನವ್ಯ ಕವಿಯೆಂದು ಅಭಿಮಾನಪೂರ್ವಕ ಕರೆಸಿಕೊಂಡ ಕವಿ ಬಿ. ಎ. ಸನದಿಯವರು ಸೊಗಸಾದ ಕಥೆಗಳನ್ನು ಬರೆಯುವುದರಲ್ಲೂ ಸಿದ್ಧಹಸ್ತರು. ಇವರ ಕವನ ಸಂಕಲನಗಳು ಹೊರಬಂದಂತೆ ಕಥಾ ಸಂಕಲನಗಳೂ ಪ್ರಕಟಗೊಂಡಿವೆ. ಕಥೆಗಳಾಗಲೀ, ಕವನಗಳಾಗಲೀ ಅವರ ಬರವಣಿಗೆಯಲ್ಲಿ ಎದ್ದು ಕಾಣುವುದು ಸಾಮಾನ್ಯ ಜನತೆಯ ದೈನಂದಿನ ಬದುಕಿನ ನೈಜ ಚಿತ್ರಣ. ನೊಂದವರಿಗಾಗಿ ಅಲ್ಲಿರುವುದು ಒಂದೆರಡು ಹನಿ ಕಣ್ಣೀರು ಮತ್ತು ನಿಟ್ಟುಸಿರು. ಶ್ರೀಮಂತರ ಪರವಾಗಿ, ಕನಸಿನ ಸಾಮ್ರಾಜ್ಯದ ಕಲ್ಪನೆಯಲ್ಲಿ ಅವರೆಂದೂ ತೇಲಿದವರಲ್ಲ. ಜಾತಿ-ಮತಗಳು ಮಾನವತೆಯ ಮುಂದೆ ಅವರಿಗೆ ತರಗೆಲೆಗಳಂತೆ. ಮನುಷ್ಯ ಮನುಷ್ಯನನ್ನು ದ್ವೇಷಿಸುವಂತೆ ಮಾಡುವ ಮೂಲ ಎಲ್ಲಿದೆಯೆಂದು ಅವರು ಹುಡುಕುತ್ತಾರೆ. ಕೋಮು ಗಲಭೆಗಳು – ಬಾಂಬುಸ್ಫೋಟಗಳು – ಜಾಗತಿಕ ರಾಜಕಾರಣದ ವ್ಯವಸ್ಥೆಗಳೆಲ್ಲ ಸನದಿಯವರ ಮನಸ್ಸನ್ನು ಪ್ರಕ್ಷುಬ್ಧಗೊಳಿಸಿವೆ. ಅವರ ಲೇಖನಿ ಮಾತನಾಡುತ್ತ ಸ್ನೇಹದ ಸೇತುವನ್ನು ಕಟ್ಟಲಾರೆವೇ ಎಂದು ಮರುಗುತ್ತದೆ. ಆಕಾಶದಲ್ಲಿ ಸಂಚರಿಸುವ ಮೋಡಗಳು, ಹಕ್ಕಿಗಳು ನೆಲಕ್ಕೆ ಇಳಿದು ಬರಬೇಕೆನ್ನುವ ಹಂಬಲ ಅವರದು. ಎಲ್ಲೋ ಇದೆಯೆಂದು ನಂಬುವ ಸ್ವರ್ಗವೂ ಸಹ ನೆಲಕ್ಕಿಳಿದರೆ ಎಷ್ಟು ಚೆನ್ನವೆಂದು ಅವರು ಕಥೆ-ಕಾವ್ಯಗಳ ಮೂಲಕ ಆಶಿಸುತ್ತಾರೆ. ಅವರ ಆಯ್ದ ಕವನಗಳ ಸಂಗ್ರಹ 'ಶಾಂತಿಗೊಂದು ಸವಾಲು' ಕೂಡ ಕಳೆದ ತಿಂಗಳು ಪ್ರಕಟಗೊಂಡಿದೆ.*




**ನಾ ಕಂಡ ರಾಮಾಯಣ**

*ಸದಾಶಿವಯೋಗಿ*

**ಪುಟ : ೮೦** **ಬೆಲೆ : ರೂ. ೭೫**

**ಶ್ರೀ ಗುರುಕುಲ ಪ್ರಕಾಶನ,** ಸಿಡ್ಲೇಹಳ್ಳಿ ಮಹಾಸಂಸ್ಥಾನ ಶ್ರೀಮಠ ವೀರಶೈವ ಗುರುಕುಲಾನಂದಾಶ್ರಮ, ತಿಪಟೂರು - ೫೭೨ ೨೦೨, ತುಮಕೂರು ಜಿಲ್ಲೆ

*ಮಸ್ತಕದಲ್ಲಿ ಮೂಡುವ ಜ್ಞಾನವೇ ಹಿರಿದು (ಅಮೂರ್ತ), ಪುಸ್ತಕದಲ್ಲಿ ದಾಖಲಾಗುವುದು ನಂತರದಲ್ಲಿ (ಮೂರ್ತ) ಎಂದು ಸದಾಶಿವಯೋಗಿಗಳು ತಿಳಿಸುತ್ತಾರೆ. ಬಾಲ್ಯದಿಂದಲೇ ರಾಮಾಯಣದ ಬಾಹ್ಯರೂಪದ ಕಥೆಯನ್ನು ಸಂದೇಹಿಸುತ್ತಲೇ, ಅಲ್ಲಿ ಹೇಳಲ್ಪಟ್ಟ ಅಂತರ್ ಸ್ರೋತವನ್ನು ಅರಿತು ವಿಶಿಷ್ಟ ರೀತಿಯಲ್ಲಿ ಅದನ್ನು ಗ್ರಹಿಸಿದ್ದಾರೆ. ವಾಲ್ಮೀಕಿಯು ತನ್ನ ತಪಸ್ಸಿನ ಫಲವಾದ ಅಮೂರ್ತ ಜ್ಞಾನವೊಂದನ್ನು ಮೂರ್ತರೂಪಕ್ಕೆ ಇಳಿಸಿದಾಗ, ಪ್ರಾಪಂಚಿಕ ಸಂಬಂಧಗಳನ್ನು ಪಾತ್ರಗಳಿಗೆ ಆರೋಪಿಸಿದಾಗ, ಬಾಹ್ಯರೂಪದ ಗ್ರಹಿಕೆಯ ಕಥಾನಕ ಸೃಷ್ಟಿಯಾಯಿತು. ದಶದಿಕ್ಕುಗಳಿಗೂ ಹರಿಯುವ ಮನಸ್ಸನ್ನು ದಶರಥನ ರಾಜವೈಭೋಗದ ದಿಗ್ವಿಜಯದ ಸಂಕೇತವಾಗಿಸಿ, ಸೀತಾ ವಿಯೋಗವೆಂದರೆ ರಾಮನು ನೆಮ್ಮದಿಯನ್ನು ಕಳೆದುಕೊಂಡ ಪಾತ್ರವನ್ನಾಗಿಸಿ, ಇನ್ನುಳಿದ ಕಥಾಪಾತ್ರಗಳನ್ನೂ ಇವರು ವಿಶಿಷ್ಟ ರೀತಿಯಲ್ಲಿ ಅರ್ಥೈಸಿ ವಿಶ್ಲೇಷಿಸಿದ ಪರಿ ಅಚ್ಚರಿಪಡುವಂತಹದಷ್ಟೇ ಅಲ್ಲ; ತಲೆದೂಗುವಂಥದು ಕೂಡ. ಇಲ್ಲಿ ಪ್ರಾಪಂಚಿಕ - ಸಾಂಸಾರಿಕ ಅಪೇಕ್ಷಿತ ಸಿರಿ-ಸಂಪದ ಅಶಾಶ್ವತವೆಂದೂ ಶಾಂತಿ-ನೆಮ್ಮದಿಯ ಜ್ಞಾನಸಿರಿಯೇ ಶಾಶ್ವತವೆಂಬ ವಿವೇಕ ವಾಣಿಯೊಂದಿದೆ. ರಾಮಾಯಣದ ಬಗ್ಗೆ ಹೊಸ ಆರೋಗ್ಯಕರ ವ್ಯಾಖ್ಯಾನ.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

**ರಾಘವೇಂದ್ರ ಪಾಟೀಲ**

*ಡಾ|| ಚಿಂತಾಮಣಿ ಕೊಡ್ಲೆಕೆರೆ*

**ಪುಟ : ೧೨೦** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧




*ಕವಿ-ಲೇಖಕರ ಕುರಿತ ಕೃತಿಗಳು ಕಟ್ಟಿಕೊಡುವ ಚಿತ್ರಣ ಹಾಗೂ ನೀಡುವ ಮಾಹಿತಿ ನೈಜತೆಯಿಂದ ಕೂಡಿದ್ದು ವಸ್ತುನಿಷ್ಠವಾಗಿದ್ದಾಗ ಮಾತ್ರ ಅವು ಸರ್ವರನ್ನೂ ತಲುಪುತ್ತದೆ. ಇಂತಹ ನೈಜಕೃತಿಯೇ ಇದು. ನವಕರ್ನಾಟಕದ 'ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತ ಕನ್ನಡ ಲೇಖಕರು' ಮಾಲೆಯ ಈ ಕೃತಿ ರಾಘವೇಂದ್ರ ಪಾಟೀಲರ ಬದುಕು-ಬರಹವನ್ನು ಪರಿಚಯಿಸುತ್ತದೆ. ವಿಜ್ಞಾನ ಅಧ್ಯಾಪಕರಾದ ಪಾಟೀಲರ ಸಾಹಿತ್ಯ ಸೇವೆ ಮನನೀಯ ಹಾಗೂ ಶ್ಲಾಘನೀಯ. ಕನ್ನಡ ಸಾಹಿತ್ಯದ ಬಹುಚರ್ಚಿತ ನವೋದಯ ಲೇಖಕರಲ್ಲೊಬ್ಬರು. ಚರಿತ್ರೆ ಹಾಗೂ ಕಲ್ಪಕಥೆಗಳನ್ನು ಒಂದು ಹದದಲ್ಲಿ ಸಂಯೋಜಿಸುವುದು ಪಾಟೀಲರ ಭಿನ್ನ ತಂತ್ರಗಾರಿಕೆ. ಚರಿತ್ರೆ ಹಾಗೂ ವರ್ತಮಾನವನ್ನು ಒಟ್ಟಾರೆ ನೋಡುವ ಇವರ ಬರಹಗಳು ಗ್ರಾಮೀಣ ಸಾಮುದಾಯಿಕ ದೃಷ್ಟಿಯುಳ್ಳವಾಗಿ ಆಧುನಿಕತೆಯಿಂದ ಕೂಡಿವೆ. ಯಾವುದೋ ಒಂದು ಸಿದ್ಧಾಂತಕ್ಕೆ, ತತ್ವಗಳ ಹಿಡಿತಕ್ಕೊಳಪಡದ ನಿರ್ಲಿಪ್ತತೆಯನ್ನೂ, ಸ್ವಾತಂತ್ರ್ಯವನ್ನೂ ಇವರ ಸಾಹಿತ್ಯದಲ್ಲಿ ಕಾಣಬಹುದು. ಸಾಹಿತ್ಯದ ಮುಖ್ಯ ಗುರಿ ಸಮಾಜ ಚಿತ್ರಣವೇ ಆದರೂ ಅತಿಯಾದ ಸಾಮಾಜಿಕತೆ ಲೇಖಕನ ವಾಸ್ತವ ಪ್ರಜ್ಞೆಯನ್ನು ಕಲುಷಿತಗೊಳಿಸಿ, ನಿಯಂತ್ರಿಸುತ್ತದೆ ಎಂದು ಭಾವಿಸುವ ಪಾಟೀಲರು ವಾಸ್ತವವನ್ನೇ ಎಷ್ಟು ವಾಸ್ತವ ಎಂಬ ಪ್ರಶ್ನೆಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಲು ಯತ್ನಿಸುವ ಕಥೆಗಾರ. ಸಾಹಿತ್ಯ ಮತ್ತು ಸಾಮಾಜಿಕ ವಾಸ್ತವದ ಚರ್ಚೆಯನ್ನು ಕನ್ನಡದ ಮಟ್ಟಿಗೆ ಬೇರೆಯದೇ ನೆಲೆಗೆ ಕೊಂಡೊಯ್ಯುತ್ತಾರೆ. ಪಾಟೀಲರ ಸಾಹಿತ್ಯದಲ್ಲಿ ಗೆಲವು, ಸಂತೋಷಗಳಿಗಿಂತ ಸೋಲುಗಳ ನರಕವೇ ತುಂಬಿಗೊಂಡಿದೆ. ಬಡತನ, ಜಮೀನ್ದಾರಿಯ ದಬ್ಬಾಳಿಕೆ, ಹಸಿವು, ದ್ವೇಷ, ಅಸೂಯೆ, ಸ್ವಾರ್ಥ ಮುಂತಾಗಿ ಸಮಾಜದ ಚಿತ್ರಣವೇ ಅವರ ಕಥೆ-ಕಾದಂಬರಿಗಳ ಧಾತುವಾಗಿದೆ. ಒಟ್ಟಾರೆ ಪ್ರಸ್ತುತ ಕೃತಿ ಪಾಟೀಲರ ಸುಮಾರು ೧೯ ಕೃತಿಗಳ ಪರಿಚಯದ ಜೊತೆಗೆ ಮೌಲಿಕ ಚರ್ಚೆಯನ್ನು ಒಳಗೊಂಡಿದ್ದು, ಅವರ ಬದುಕಿನ ಹಲವು ಪ್ರಮುಖ ಘಟ್ಟಗಳನ್ನು ಹಾಗೂ ಅವರ ಸಮಗ್ರ ಸಾಹಿತ್ಯ ಚಿಂತನೆಯನ್ನು ನೀಡುವ ಪ್ರಮುಖ ಕೃತಿ.*

## ಉರಿಯೊಳಗಣ ಕರ್ಪೂರ (ವಿಮರ್ಶೆ)

ಡಾ|| ಅರ್ಜುನ ಗೊಳಸಂಗಿ

**ಪುಟ : vi + ೭೩ = ೭೯** **ಬೆಲೆ : ರೂ. ೮೦**

**ದಲಿತ ಸಾಹಿತ್ಯ ಪರಿಷತ್ತು ರಾಜ್ಯ ಘಟಕ ಗದಗ,** 'ಬುದ್ಧ ನಿಲಯ', ನಂ. ೩೦೩೭ ಕೆ. ಎಚ್. ಕಾಲೋನಿ, ಹುಲಕೋಟಿ - ೫೮೨೨೦೫, ಗದಗ ತಾಲೂಕು/ಜಿಲ್ಲೆ

ಭಾರತೀಯ ಮನಸ್ಸುಗಳಲ್ಲಿ ರಕ್ತಗತವಾಗಿ ಬೆಳೆದುಬಂದಿರುವ ಜಾತಿಯ ಅಂಧಕಾರ, ಉಳ್ಳವರ ದಬ್ಬಾಳಿಕೆ, ಶೋಷಣೆ, ಅವಮಾನ, ಮನುಷ್ಯತ್ವದ ಅಂತರ್ಜಲವೇ ಒಣಗಿ ಹೋದಂತೆ ವರ್ತಿಸುವ ಮೇಲ್ವರ್ಗ-ಮೇಲ್ಜಾತಿಗಳ ಹಿಂಸೆಯ ವಿರುದ್ಧ, ಸಮಾಜದ ಕನಸು ಕಾಣುತ್ತಾ, ಜಾತಿ ನಿರ್ಮೂಲನೆಯ ಆಶಯದಿಂದ ಅಂಬೇಡ್ಕರ್, ಮಾರ್ಕ್ಸ್, ನಾರಾಯಣ ಗುರು ಮುಂತಾದವರಿಂದ ಪ್ರಭಾವಿತಗೊಂಡು ಹುಟ್ಟಿಕೊಂಡ ಚಳುವಳಿಯೇ ದಲಿತ ಚಳುವಳಿ. ಚಳುವಳಿ ಬರೀ ಬೀದಿ ಹೋರಾಟಗಳಿಗೆ ಸೀಮಿತಗೊಳ್ಳದೆ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಚಳುವಳಿಯಾಗಿ ಬೆಳೆದುಬಂದದ್ದು ವಿಶೇಷ. ಅನೇಕ ದಲಿತ ಚಿಂತಕರು, ಬರಹಗಾರರು ಮುಖ್ಯವಾಹಿನಿಗೆ ಬಂದದ್ದು ಈ ಚಳುವಳಿಯ ಮೂಲಕವೇ. ಅವರ ಚಿಂತನೆ ಮತ್ತು ಬರಹಗಳು ಹೋರಾಟಗಾರರಿಗೆ ದಾರಿದೀಪವಾದವು.



ದಲಿತ ಮತ್ತು ದಲಿತ ಪರ ಸಾಹಿತ್ಯ ಹುಲುಸಾಗಿ ಬೆಳೆದಂತೆ ದಲಿತ ಸಾಹಿತ್ಯ ವಿಮರ್ಶೆ ಬೆಳೆಯಲಿಲ್ಲ, ಇದಕ್ಕೆ ದಲಿತರ ಹಾಗೂ ಅವರ ಕುರಿತ ಸಾಹಿತ್ಯದ ಬಗ್ಗೆ ಇವರು ನಿರ್ಲಕ್ಷ್ಯ ಹಾಗೂ ಮಡಿವಂತಿಕೆ ಕಾರಣವಿರಬಹುದು. ದಲಿತ ಸಾಹಿತ್ಯ ವಿಮರ್ಶೆಯನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ವಿಮರ್ಶಾ ಸಂಕಲನ ಹಲವಾರು ದಲಿತ ಸಾಹಿತ್ಯ ಕೃತಿಗಳು ಹಾಗೂ ದಲಿತ ಚಿಂತಕರ ಕುರಿತು ಮೌಲಿಕ ಚರ್ಚೆಯನ್ನು ನಡೆಸುತ್ತದೆ. ಸುಮಾರು ನಲವತ್ತೆರಡು ವಿಮರ್ಶಾ ಲೇಖನಗಳನ್ನು ಒಳಗೊಂಡ ಕೃತಿ ದಲಿತೇತರ ಸಾಹಿತ್ಯ ಚಿಂತನೆಯನ್ನು ಸಹ ನಡೆಸುತ್ತದೆ. ಒಟ್ಟಾರೆ ಅವಮಾನ, ಅಸ್ಪೃಶ್ಯತೆ, ಅಸಮಾನತೆ, ಅನ್ಯಾಯ, ಶೋಷಣೆ, ಅಸಹಾಯಕತೆಗಳ ಪ್ರತಿಬಿಂಬದಂತಿರುವ ದಲಿತ ಸಾಹಿತ್ಯ ಚಿಂತನೆಯನ್ನು ಒರೆಹಚ್ಚುವ ಪ್ರಯತ್ನವನ್ನು ಕೃತಿ ಮಾಡುತ್ತದೆ. ಎಲ್ಲರೂ ಓದಬಹುದಾದ ಈ ನಿಟ್ಟಿನಲ್ಲಿ ಪ್ರಯತ್ನಿಸಬಹುದಾದ ಸಂಪನ್ನ ಕೃತಿ ಇದಾಗಿದೆ.

## ಹೊಸ ಹಾದಿಯ ಹರಿಕಾರ ಹ್ಯೂಗೋ ಚಾವೆಜ್ ಜೀವನ - ಸಾಧನೆ




ಸಿ. ಆರ್. ಕೃಷ್ಣರಾವ್

**ಪುಟ : ೪೮** **ಬೆಲೆ : ರೂ. ೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್ ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೮ ಬೆಂಗಳೂರು - ೫೬೦ ೦೦೧

ಸಮರ್ಥ ಆಡಳಿತಗಾರನೊಬ್ಬ ವಸಾಹತುಶಾಹಿ ವ್ಯವಸ್ಥೆಯನ್ನು ಧಿಕ್ಕರಿಸಿ ಪರಕೀಯರಿಂದ ತಾಯ್ನಾಡನ್ನು ರಕ್ಷಿಸಿಕೊಳ್ಳುವುದು ಹೇಗೆಂದು ಜಗತ್ತಿಗೇ ಪಾಠ ಕಲಿಸಿಕೊಡಬಲ್ಲ ದಿಟ್ಟ ವ್ಯಕ್ತಿತ್ವವೆಂದರೆ ವೆನಿಜುವೇಲಾದ ಅಧ್ಯಕ್ಷ ಹ್ಯೂಗೋ ಚಾವೆಜ್. ಅಮೆರಿಕದ ಬಂಡವಾಳಶಾಹಿಯ ಹಿಡಿತದಲ್ಲಿ ಉಸಿರುಕಟ್ಟಿ ನಲುಗುತ್ತಿದ್ದ ವ್ಯವಸ್ಥೆಯ ವಿರುದ್ಧ, ತನ್ನ ಸುತ್ತಲ ಲ್ಯಾಟಿನ್ ಅಮೆರಿಕದ ರಾಷ್ಟ್ರಗಳನ್ನು ಸಂಘಟಿಸಿ ದಬ್ಬಾಳಿಕೆಯ ವಿರುದ್ಧ ಸೆಟೆದುನಿಂತ ದೇಶಪ್ರೇಮಿ ನಾಯಕ. ಬಹುರಾಷ್ಟ್ರೀಯ ಕಂಪೆನಿಗಳಿಗೆ ದೇಶವನ್ನು ಕೊಳ್ಳೆಹೊಡೆಯಲು ಬಿಡದೆ ತನ್ನ ದೇಶದ ಸಂಪನ್ಮೂಲಗಳನ್ನು ತನ್ನ ಪ್ರಜೆಗಳ ಒಳಿತಿಗಾಗಿ ಬಳಸಿ ಜನಾನುರಾಗ ಗಳಿಸಿ ಆಡಳಿತ ನಡೆಸಿದವರು ಚಾವೆಜ್. ಪ್ರಾರಂಭದಲ್ಲಿ ಎಷ್ಟೇ ಅಡೆತಡೆಗಳು ಒದಗಿಬಂದರೂ, ಬಂಧಿತರಾಗಿ ಸೆರೆಮನೆ ಕಂಡರೂ ಅದಮ್ಯ ಉತ್ಸಾಹದಿಂದ ಆಶಾವಾದಿಯಾಗಿ ಮಿಂಚಿದವರು. ಕ್ಯೂಬಾದೊಂದಿಗೆ ಬಾಂಧವ್ಯ ಸ್ಥಾಪಿಸಿ, ದೇಶದ ತೈಲೋದ್ಯಮವನ್ನು ರಾಷ್ಟ್ರೀಕರಣಗೊಳಿಸಿ, ಶಿಕ್ಷಣದಲ್ಲಿ ಸುಧಾರಣೆ ತಂದು ಪ್ರಗತಿಗೆ ಜಾಗತೀಕರಣ - ಉದಾರೀಕರಣಗಳೇ ಬೇಕಿಲ್ಲ; ಪರ್ಯಾಯ ವ್ಯವಸ್ಥೆಗಳು ಬೇಕಾದಷ್ಟಿವೆಯೆಂದು ಜಗತ್ತಿಗೇ ತೋರಿಸಿಕೊಟ್ಟವರು ಅವರು. ಇಂದಿನ ಪುರೋಗಾಮಿ ರಾಷ್ಟ್ರಗಳು ಇಂಥ ವ್ಯಕ್ತಿತ್ವದ ಬಗ್ಗೆ ಅರಿಯಬೇಕಾದ ತುರ್ತು ಬಹಳ ಇದೆ. ಅವರ ಬಗ್ಗೆ ಇದೊಂದು ಪುಟ್ಟ ಪುಸ್ತಿಕೆ – ಜಾಗತಿಕ ವಿದ್ಯಮಾನಗಳ ಬಗ್ಗೆ ಸಮರ್ಥವಾಗಿ ಬೆಳಕು ಚೆಲ್ಲುವ ಸಾಮರ್ಥ್ಯ ಇರುವ ಲೇಖಕ, ಪತ್ರಕರ್ತ ಶ್ರೀ ಸಿ. ಆರ್. ಕೃಷ್ಣರಾವ್ ಅವರಿಂದ.

**– ರಮೇಶ ಕೋಲಾರ**

ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧

# ಸಾದರ ಸ್ವೀಕಾರ

**ಕಂಡಷ್ಟೂ ಆಕಾಶ** (ಅನುಭವ ಕಥನಗಳು)
ಡಾ|| ಎಚ್. ಬಿ. ಪೂಜಾರ
**ಪುಟ : x + ೭೮ = ೮೮** **ಬೆಲೆ : ರೂ. ೮೦**

**ಬೆಳಗಾವಿ ಜಿಲ್ಲೆಯ ದಲಿತ ಸಾಹಿತ್ಯ** ಸಂ. : ಡಾ|| ಅನಸೂಯ ಕಾಂಬಳೆ, ಶ್ರೀ ಶಂಕರ ಬಾಗೇವಾಡಿ
**ಪುಟ : x + ೪೬ = ೫೬** **ಬೆಲೆ : ರೂ. ೫೦**

**ಪ್ರತಿಸ್ಪಂದನ** (ಲೇಖನಗಳು) ಡಾ|| ಸದಾಶಿವ ದೊಡಮನಿ
**ಪುಟ : xiv + ೬೨ = ೭೬** **ಬೆಲೆ : ರೂ. ೭೦**

**ಅವಳು ಬರುವ ಮುನ್ನ** (ಕವನ ಸಂಕಲನ)
ಡಾ|| ಎಂ. ಎಸ್. ಶಿವಶರಣರ
**ಪುಟ : x + ೫೪ = ೬೪** **ಬೆಲೆ : ರೂ. ೫೦**

**ದಲಿತ ಸಾಹಿತ್ಯ ಪರಿಷತ್ತಿನ ಮೂರು ಸಮ್ಮೇಳನಗಳು : ಒಂದು ನೋಟ** ಡಾ|| ಅರ್ಜುನ ಗೊಳಸಂಗಿ
**ಪುಟ : iv + ೬೮ = ೭೨** **ಬೆಲೆ : ರೂ. ೫೦**

**ಬೆಳಗಾವಿ ಜಿಲ್ಲೆಯ ದಲಿತ ಕಾವ್ಯ**
ಸಂ. : ಡಾ|| ಎಚ್. ಬಿ. ಕೋಲ್ಕಾರ, ಡಾ|| ಕೆ. ಎನ್. ದೊಡ್ಡಮನಿ
**ಪುಟ : viii + ೫೬ = ೬೪** **ಬೆಲೆ : ರೂ. ೬೦**

ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ದಲಿತ ಸಾಹಿತ್ಯ ಪರಿಷತ್ತು ರಾಜ್ಯ ಘಟಕ,** ಗದಗ 'ಬುದ್ಧ ನಿಲಯ', ನಂ. ೩೦೩೭, ಕೆ. ಎಚ್. ಕಾಲೋನಿ, ಹುಲಕೋಟಿ - ೫೮೨ ೨೦೫, ತಾಲೂಕು ಮತ್ತು ಜಿಲ್ಲೆ ಗದಗ.

**ಶ್ರೀ ಕಿರಣ - ೧** ಬಸವರಾಜ ಸಂ. ಹೊಸಮನಿ (ಹೊಸಬ)
**ಪುಟ : ೮೦** **ಬೆಲೆ : ರೂ. ೪೦**
**ಶ್ರೀಮತಿ ಉಮಾದೇವಿ ಬಿರಾದಾರ, ಗಾಂಧೀ ಸ್ಮಾರಕ ಧಾಮ (ನೊ),** ಸಂಗಮ ಟಾಕೀಸ್ ಕಾಂಪ್ಲೆಕ್ಸ್, ಸೂಪರ್ ಮಾರ್ಕೆಟ್, ಗುಲ್ಬರ್ಗ

**ಕ್ರಾಂತಿಯ ಹಾದಿಯಲ್ಲಿ... !** (ಕವನ ಸಂಕಲನ)
ಪ್ರೊ|| ಸಂಗಮೇಶ ವ್ಹಿ. ಹೊಸಮನಿ
**ಪುಟ : ೯೨ + iv** **ಬೆಲೆ : ರೂ. ೧೦೦**
**ಹೊಸಮನೆ ಪ್ರಕಾಶನ,** ರಾಮವಾಡಗಿ, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ

**ನಗೆ ನವಿಲು** (ಲಘು ಲೇಖನ, ಹರಟೆ, ನಗೆಬರಹದ ಸಂಕಲನ)
ಡಾ|| ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್
**ಪುಟ : ೮೮** **ಬೆಲೆ : ರೂ. ೫೫**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಜೋಗಜ್ಜನ ಹಾಡು** (ಕಥಾ ಸಂಕಲನ)
ಜಡೇಕುಂಟೆ ಮಂಜುನಾಥ್
**ಪುಟ : xviii + ೧೦೨** **ಬೆಲೆ : ರೂ. ೮೦**
**ದಿಗಂತ ಪುಸ್ತಕ ಪ್ರಕಾಶನ,** ಜಡೇಕುಂಟೆ, ಕಾಪರಹಳ್ಳಿ ಅಂಚೆ, ಚಳ್ಳಕೆರೆ, ಚಿತ್ರದುರ್ಗ

**ಮಾವೋವಾದಿಗಳ 'ಹಿಂದೂ'ರಾಷ್ಟ್ರ ನೇಪಾಳ**
ಶ್ರೀನಿವಾಸ ಜೋಕಟ್ಟೆ
**ಪುಟ : ೧೫೮ + ೮ + iv = ೧೭೦** **ಬೆಲೆ : ರೂ. ೧೦೦**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೯೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಕಾಯುತ್ತಾ ಕವಿತೆ** (ಕವನ ಸಂಕಲನ)
ಅನಿತಾ ಪಿ. ಪೂಜಾರಿ, ತಾಕೊಡೆ
**ಪುಟ : ೧೪೮** **ಬೆಲೆ : ರೂ. ೧೨೫**
**ಅಭಿಜಿತ್ ಪ್ರಕಾಶನ,** ಎ/೪೦೪, ವಿನಾಯಕ ಆಶೀಷ್, ಎಂ.ಎಂ.ಎಂ. ರೋಡ್, ಪಿ ಆ್ಯಂಡ್ ಟಿ ಕಾಲೋನಿ ಸಮೀಪ, ಮುಲುಂಡ್ (ಪ), ಮುಂಬಯಿ - ೪೦೦ ೦೮೦

**ಕಾಡ್ಯಾವ ನೆನಪು** (ಕಥಾ ಸಂಕಲನ) ಮೇಟಿ ಮುದಿಯಪ್ಪ
**ಪುಟ : xii + ೮೮ (೧೦೦)** **ಬೆಲೆ : ರೂ. ೮೦**
**ಮೇಟಿ ಪ್ರಕಾಶನ ,** ಬೇವಿನಹಾಳು, ಗಂಗಾವತಿ ತಾಲೂಕು, ಕೊಪ್ಪಳ ಜಿಲ್ಲೆ

**ಎಲೆಮರೆ ಕಾಯಿ** (ಸಂಪುಟ ೧) ಡಾ|| ನಟರಾಜು ಎಸ್. ಎಂ
**ಪುಟ : ೨೧೦** **ಬೆಲೆ : ರೂ. ೧೬೦**
**ಸಂಸ್ಕೃತಿ ಪ್ರಕಾಶನ,** ಡಾ|| ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ, ಆದರ್ಶ ಕಾಲೋನಿ, ಕಂಟೋನ್ಮೆಂಟ್, ಬಳ್ಳಾರಿ - ೫೮೩ ೧೦೪

# ನಾಣ್ಯಗಳ ಆಕಾರ ವ್ಯಾವಹಾರಿಕವಾಗಿರಲಿ

ದೈನಂದಿನ ವ್ಯವಹಾರದಲ್ಲಿ ರೂಪಾಯಿ ನೋಟುಗಳಿಗಿಂತ ಚಿಲ್ಲರೆ ನಾಣ್ಯಗಳು ಹೆಚ್ಚು ಬಳಕೆಯಾಗುತ್ತಿದ್ದು, ಅವುಗಳ ಸೂಕ್ತ ಸಮಯದ ಬಳಕೆಯಿಂದಾಗಿ ಗ್ರಾಹಕರು, ವ್ಯಾಪಾರಸ್ಥರು, ಪ್ರಯಾಣಿಕರು ಹಾಗೂ ಬಸ್ ನಿರ್ವಾಹಕರುಗಳು ಚಿಲ್ಲರೆ ಕೊರತೆಯಿಂದಾಗಿ ಆಗುತ್ತಿರುವ ಮುಜುಗರದಿಂದ ತಪ್ಪಿಸಿಕೊಳ್ಳಬಹುದಾಗಿದೆ.

ಆಂಗ್ಲರ ಕಪಿಮುಷ್ಟಿಯಲ್ಲಿದ್ದ ಭಾರತ ಅವರುಗಳಿಂದ ಸ್ವಾತಂತ್ರ್ಯ ಪಡೆದ ನಂತರದ ದಿನಗಳಲ್ಲಿ ಪೈ, ಪೈಸೆಗಳು ವಿವಿಧ ಮೌಲ್ಯಗಳ ರೂಪದಲ್ಲಿ ದಿನನಿತ್ಯದ ವ್ಯವಹಾರದಲ್ಲಿ ಬಳಕೆಯಾಗುತ್ತಿದ್ದವು. ನಂತರ ಪೈ, ಪೈಸೆಗಳನ್ನು ನಯಾಪೈಸೆ ಎಂದು ನಾಮಕರಣ ಮಾಡಿ ೧, ೨, ೩, ೫, ೧೦, ೨೦, ೨೫, ೫೦ ಪೈಸೆಗಳಾಗಿ ಬಳಸಲಾಗುತ್ತಿತ್ತು. ಅವುಗಳೊಂದಿಗೆ ೫೦ ಪೈಸೆ, ೧ ಮತ್ತು ೨ ರೂಪಾಯಿ ನಾಣ್ಯಗಳೂ ಚಲಾವಣೆಯಲ್ಲಿದ್ದವು.

ಚಿಲ್ಲರೆ ನಾಣ್ಯಗಳನ್ನು ಸಾರ್ವಜನಿಕರು ಸರಳವಾಗಿ ಯಾವುದೇ ಗೊಂದಲಕ್ಕೆ ಕಾರಣವಾಗದ ರೀತಿಯಲ್ಲಿ ಸುಶಿಕ್ಷಿತರು ಮತ್ತು ಅನಕ್ಷರಸ್ಥರು ಬಳಸಲು ಸೂಕ್ತವಾದ ರೀತಿಯಲ್ಲಿ ಚಿಲ್ಲರೆ ನಾಣ್ಯಗಳನ್ನು ರೂಪಿಸಲಾಗಿತ್ತು. ಆಕಾರ ನೋಡಿದ ತಕ್ಷಣ ಅದರ ಮುಖಬೆಲೆ ಸಾರ್ವಜನಿಕರಿಗೆ ಅರ್ಥವಾಗುವಂತೆ ನಾಣ್ಯಗಳನ್ನು ರೂಪಿಸಲಾಗಿತ್ತು. ಒಂದು ಪೈಸೆಯನ್ನು ತಾಮ್ರದಲ್ಲಿ ದುಂಡಗಿನ ಆಕಾರದಲ್ಲಿ ಟಂಕಿಸಲಾಗಿತ್ತು. ಅದೇ ಪ್ರಕಾರ ೨ ಹಾಗೂ ೧೦ ಪೈಸೆಗಳನ್ನು ಹೂವಿನಾಕಾರದಲ್ಲಿ, ೩ ಪೈಸೆ ನಾಣ್ಯವನ್ನು ಷಟ್ಕೋನಾಕೃತಿ, ೫ ಪೈಸೆ ನಾಣ್ಯವನ್ನು ಚೌಕಾಕಾರದಲ್ಲಿ, ೧೦ ಪೈಸೆ ನಾಣ್ಯಗಳನ್ನು ಹಳದಿ ಲೋಹದಲ್ಲಿ, ೨ ಪೈಸೆ ನಾಣ್ಯಕ್ಕಿಂತ ದೊಡ್ಡ ಆಕಾರದಲ್ಲಿ ಟಂಕಿಸಲಾಗಿತ್ತು. ಅದೇ ಪ್ರಕಾರ ೨೦ ಪೈಸೆ ನಾಣ್ಯಗಳನ್ನು ಹಳದಿ ಲೋಹದಲ್ಲಿ ಟಂಕಿಸಲಾಗುತ್ತಿತ್ತು. ಇದರಿಂದಾಗಿ ಜನಸಾಮಾನ್ಯರು ವ್ಯವಹರಿಸುವಾಗ ಯಾವುದೇ ತೊಂದರೆಯಾಗದಂತೆ ಚಿಲ್ಲರೆ ನಾಣ್ಯಗಳನ್ನು ಸುಲಭವಾಗಿ ಬಳಸಲು ಅನುಕೂಲವಾಗಿತ್ತು.

೧೯೮೦ರ ನಂತರ ಒಂದು, ಎರಡು, ಮೂರು, ಐದು ಮತ್ತು ಹತ್ತು ಪೈಸೆಗಳ ಬಳಕೆ ಬಹುತೇಕ ನಿಂತುಹೋಗಿದ್ದು ಅವುಗಳ ಜಾಗದಲ್ಲಿ ಐವತ್ತು ಪೈಸೆ, ಒಂದು ರೂಪಾಯಿ, ಎರಡು ರೂಪಾಯಿ ಹಾಗೂ ಐದು ರೂಪಾಯಿ ನಾಣ್ಯಗಳು ಚಲಾವಣೆಯಲ್ಲಿವೆ. ಅವುಗಳೆಲ್ಲ ದುಂಡಗೆ ಒಂದೇ ಆಕಾರ ಹಾಗೂ ಬಹುತೇಕ ಒಂದೇ ಅಳತೆಯನ್ನು ಹೊಂದಿದ್ದು ಬಸ್ ಪ್ರಯಾಣದಲ್ಲಿ ನಿರ್ವಾಹಕರು, ಕಾಯಿಪಲ್ಲೆ ಮಾರುಕಟ್ಟೆಯಲ್ಲಿ ಚಿಲ್ಲರೆ ನಾಣ್ಯಗಳ ಬಟವಾಡೆ ಮಾಡುವ ಸಂದರ್ಭದಲ್ಲಿ ವಿವಿಧ ಮೌಲ್ಯದ ನಾಣ್ಯಗಳನ್ನು ನೀಡುವಾಗ ಕಡಿಮೆ ಮೌಲ್ಯದ, ಇಲ್ಲವೇ ಹೆಚ್ಚಿನ ಮೌಲ್ಯದ ನಾಣ್ಯಗಳನ್ನು ಕೊಡುವ ಮೂಲಕ ವ್ಯವಹಾರದಲ್ಲಿ ಜನರು ಫಜೀತಿ ಪಡುತ್ತಿರುವುದನ್ನು ನಾನು ಗಮನಿಸಿದ್ದೇನೆ.

ಈ ಬಗ್ಗೆ ನಾನು ಚಾಮರಾಜನಗರದಲ್ಲಿ ಸತ್ರ ನ್ಯಾಯಾಲಯದಲ್ಲಿ ಸಾರ್ವಜನಿಕ ಅಭಿಯೋಜಕನಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ ೨೮-೭-೨೦೧೨ರಂದು ಭಾರತೀಯ ರಿಸರ್ವ್ ಬ್ಯಾಂಕಿನ ಗವರ್ನರ್‌ಗೆ ಸಾರ್ವಜನಿಕರು ಅನುಭವಿಸುತ್ತಿರುವ ತೊಂದರೆಯನ್ನು ವಿವರಿಸಿ ಚಲಾವಣೆಯಲ್ಲಿ ಇರುವ ವಿವಿಧ ನಾಣ್ಯಗಳ ಆಕಾರಗಳನ್ನು ಈ ಕೆಳಗಿನಂತೆ ಬದಲಿಸುವ ಮೂಲಕ ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡುವಂತೆ ಕೋರಿದ್ದೇನೆ :




ಹೀಗೆ ಮಾಡುವುದರಿಂದ ನಾಣ್ಯಗಳ ಅಳತೆ ಒಂದೇ ಆಗಿದ್ದರೂ ಆಕಾರದಲ್ಲಿ ಬದಲಾವಣೆ ಮಾಡುವ ಮೂಲಕ ಚಿಲ್ಲರೆ ವ್ಯವಹಾರದಲ್ಲಿ ಬಳಕೆಗೆ ಉಪಯುಕ್ತವಾಗಲಿದೆ ಎಂಬ ಅಂಶವನ್ನು ಮಾನ್ಯರಿಗೆ ತಿಳಿಸಿದ್ದೇನೆ.

ಮಾನ್ಯ ಗವರ್ನರ್‌ರವರು ನನ್ನ ಮನವಿಯನ್ನು ಪರಿಶೀಲಿಸಿ ಸೂಕ್ತ ಕ್ರಮ ಜರುಗಿಸುವ ಕುರಿತು ಭಾರತ ಸರಕಾರದ ಸಂಸ್ಥೆಯಾದ ನವದೆಹಲಿಯ 'ಸೆಕ್ಯೂರಿಟಿ ಪ್ರಿಂಟಿಂಗ್ ಆ್ಯಂಡ್ ಮಿಂಟಿಂಗ್ ಕಾರ್ಪೊರೇಷನ್ ಆಫ್ ಇಂಡಿಯಾ ಲಿಮಿಟೆಡ್' ಮಿಂಟಿಂಗ್ ಕೆಟಗರಿಗೆ ಕಳಿಸಿಕೊಟ್ಟಿದ್ದರು.



*೧೯೮೦ರ ಪೂರ್ವದಲ್ಲಿ ಚಲಾವಣೆಯಲ್ಲಿದ್ದ ವಿವಿಧ ಆಕಾರದ ನಾಣ್ಯಗಳು (ಸಂಗ್ರಹಿತ)*

ಸದರಿ ಸಂಸ್ಥೆಯು ನನ್ನ ಮನವಿಯಲ್ಲಿಯ ಅಂಶಗಳನ್ನು ಗಮನಿಸಿ ದಿನಾಂಕ ೨೪-೯-೨೦೧೨ ರಂದು ನನಗೆ ತಾವು ತಯಾರಿಸುವ ನಾಣ್ಯಗಳ ಕುರಿತಾಗಿರುವ ನಿಬಂಧನೆಗಳು ಹಾಗೂ ಅಂಶಗಳನ್ನು ವಿವರಿಸಿ ಓಲೆ ಬರೆದಿರುವರು.

ದೆಹಲಿಯ 'ಸೆಕ್ಯೂರಿಟಿ ಪ್ರಿಂಟಿಂಗ್ ಆ್ಯಂಡ್ ಮಿಂಟಿಂಗ್ ಕಾರ್ಪೊರೇಷನ್ ಆಫ್ ಇಂಡಿಯಾ ಲಿಮಿಟೆಡ್' ಮಿಂಟಿಂಗ್ ಕೆಟಗರಿಗೆ ಬಂದ ಉತ್ತರವನ್ನು ಮಷೀನ್ ಡಿಸೈನಿಂಗ್‌ನಲ್ಲಿ ಸ್ನಾತಕೋತ್ತರ ಪದವಿಗಳನ್ನು ಪಡೆದ, ಬೆಂಗಳೂರಿನ ಎಚ್.ಎಂ.ಟಿ.ಯಲ್ಲಿ ಹಿರಿಯ ಅಭಿಯಂತರರಾಗಿ ನಾನಾ ವಿಧದ ಯಂತ್ರಗಳ ವಿನ್ಯಾಸದ ಪ್ರತ್ಯಕ್ಷ ಅನುಭವ ಹೊಂದಿರುವ ನನ್ನ ಸೋದರ ಪ್ರಕಾಶ ಹುಡೇದಗಡ್ಡಿಯವರೊಂದಿಗೆ ಚರ್ಚಿಸಿದೆನು. ಆಗ ಅವರು, ''ನಾಣ್ಯಗಳ ಮೊತ್ತ ಮತ್ತು ಪ್ರಮಾಣಗಳಲ್ಲಿ ಯಾವುದೇ ಬದಲಾವಣೆಯನ್ನೂ ಮಾಡದೆ ಮುದ್ರೆ ಒತ್ತುವ ಸಾಧನ/ಯಂತ್ರದ ಮಾದರಿಯಲ್ಲಿ ಬದಲಾವಣೆ ತಂದು ಹೊಸ ಆಕಾರದ ನಾಣ್ಯಗಳನ್ನು ತಯಾರಿಸಬಹುದು. ಅಂತಹ ಮುದ್ರೆ ಒತ್ತುವ ಸಾಧನ ಅಥವಾ ಯಂತ್ರವನ್ನು ಒಂದೇ ಬಾರಿಗೆ ಮಾಡಲಾಗುತ್ತದೆ ಮತ್ತು ಅದೇ ಮಂತ್ರವನ್ನು ಚಾಲನೆ ಮಾಡಿ ನಾಣ್ಯಗಳನ್ನು ನಿಯತವಾಗಿ ಮುದ್ರಿಸಬಹುದು. ಈ ಪ್ರಕ್ರಿಯೆಯ ಮೂಲಕ ಲೋಹವನ್ನು ಅಧಿಕ ಪ್ರಮಾಣದಲ್ಲಿ ಬಳಸದೆ ಹಾಗೂ ಕಡಿಮೆ ಖರ್ಚಿನಲ್ಲಿ ನಾಣ್ಯಗಳ ಆಕಾರ ಮತ್ತು ಮಾದರಿಗಳನ್ನು ಬದಲಾಯಿಸಬಹುದು'' ಎಂದು ವಿವರಿಸಿದರು.

ನನ್ನ ಸೋದರನಿಂದ ತಾಂತ್ರಿಕ ಅಭಿಪ್ರಾಯ ಪಡೆದ ನಾನು ಪುನಃ ಭಾರತೀಯ ರಿಸರ್ವ್ ಬ್ಯಾಂಕ್‌ನ ಮಾನ್ಯ ಗವರ್ನರ್ ಅವರಿಗೆ ಸಾರ್ವಜನಿಕರಿಗೆ ಬಳಕೆಯಲ್ಲಿ ಗೊಂದಲವಾಗದ ರೀತಿಯಲ್ಲಿ ನಾಣ್ಯಗಳ ಆಕಾರವನ್ನು ಬದಲಿಸುವಂತೆ ದಿನಾಂಕ ೨೨-೧೦-೨೦೧೨ರಂದು ಮನವಿ ಸಲ್ಲಿಸಿರುವೆನು.

ಈ ಬಗ್ಗೆ ಆರ್ಥಿಕ ತಜ್ಞರು, ಜನಪರ ಕಾಳಜಿಯುಳ್ಳ ಸಂಘಟನೆಗಳು ಸಕಾರಾತ್ಮಕವಾಗಿ ಚಿಂತನೆ ಮಾಡಿ ಗ್ರಾಹಕರಿಗೆ ಉಪಯುಕ್ತವಾದ ನಾಣ್ಯಗಳ ಏಕರೂಪದ ಆಕಾರದಿಂದಾಗಿ ಆಗುತ್ತಿರುವ ಅನಾನುಕೂಲವನ್ನು ತಪ್ಪಿಸಲು ನಾಣ್ಯಗಳ ಆಕಾರವನ್ನು ಬದಲಿಸುವಂತೆ ಸರಕಾರ ಮತ್ತು ಭಾರತೀಯ ರಿಸರ್ವ್ ಬ್ಯಾಂಕ್ ಅಧಿಕಾರಿಗಳ ಮೇಲೆ ಒತ್ತಡ ತರುವಂತೆ ಕೋರುತ್ತೇನೆ.

**ಬಸವರಾಜ ಹುಡೇದಗಡ್ಡಿ**
ಸಾರ್ವಜನಿಕ ಅಭಿಯೋಜಕರು, ೫ನೇ ತ್ವರಿತ ವಿಲೇವಾರಿ ನ್ಯಾಯಾಲಯ
ದಿವಾಣಿ ನ್ಯಾಯಾಲಯಗಳ ಸಂಕೀರ್ಣ, ಬೆಂಗಳೂರು



# ಹೀಗೊಂದು ಚಾರಣ :

# ಹಿಮ ಕಂದರಗಳ ಹಾದಿ 'ಹಂಪ್ಟಾ ಪಾಸ್'

ಅನೇಕ ವರ್ಷಗಳಿಂದ ನನ್ನ ಮನಸ್ಸಿನಲ್ಲಿ ಬರೀ ನಿರೀಕ್ಷೆಯಾಗಿ ಉಳಿದಿದ್ದುದನ್ನು ಈ ಬಾರಿ ಈಡೇರಿಸಿಕೊಂಡೆ. ಬೆಂಗಳೂರಿನ ಕಂಠೀರವ ಕ್ರೀಡಾಂಗಣ ಕಟ್ಟಡದಲ್ಲಿರುವ ಕರ್ನಾಟಕ ಪರ್ವತಾರೋಹಣ ಸಂಸ್ಥೆ ಈ ಬಾರಿ ಚಾರಣಕ್ಕೆ 'ಹಂಪ್ಟಾ ಪಾಸ್'ಅನ್ನು ಆರಿಸಿಕೊಂಡಿತ್ತು. ಹಿಮಾಚಲ ಪ್ರದೇಶದ ಪೀರ್‌ಪಂಜಾಲ್ ವಲಯಕ್ಕೆ ಸೇರಿದ ಅದು ೪,೨೭೦ ಮೀಟರು ಎತ್ತರ ಪ್ರದೇಶ. ಈ ಬಾರಿ ಇದೊಂದು ಸಾಹಸಯಾತ್ರೆಯಾಗಿತ್ತು. ನಮಗಿಲ್ಲಿ ಸಮಗ್ರ ಕುಲು ಕಣಿವೆಯ ವಿಹಂಗಮ ನೋಟ ದಕ್ಕುತ್ತದೆ. ದುರ್ಗಮವಾದ ಹಾದಿಯುದ್ದಕ್ಕೂ ದೇವದಾರು ಜಾತಿಯ ಸೀಡರ್ ಮರ, ಸಿಲ್ವರ್ ಫರ್, ಸಿಲ್ವರ್ ಬರ್ಚ್ (ಭೋಜ ಪತ್ರದ) ಮರಗಳು, ವಾಲ್ನಟ್, ಓಕ್, ಪೈನ್ ಮರಗಳ ಕಾಡನ್ನು ಹಾದು ಹೋಗಬೇಕಾಗುತ್ತದೆ.

ಮೊದಲೇ ನಿರ್ಧರಿಸಿದಂತೆ, ನಮ್ಮ ಹದಿನೆಂಟು ಜನರ ತಂಡ ದೆಹಲಿಯ ಜನಪಥದಲ್ಲಿರುವ ಚಂದ್ರಲೋಕ ಕಟ್ಟಡದಲ್ಲಿ ಒಂದೆಡೆ ಸೇರಿ, ರಾತ್ರಿ ಹಿಮಾಚಲ ಪ್ರದೇಶದ ಮನಾಲಿಯತ್ತ ಪ್ರಯಾಣ ಮಾಡುವುದಾಗಿತ್ತು. ರಾತ್ರಿಯಿಡೀ ಪ್ರಯಾಣಿಸಿ ಬೆಳಕು ಹರಿಯುವ ಹೊತ್ತಿಗೆ ನಮ್ಮ ಬಸ್ಸು ಬಿಲಾಸಪುರ ದಾಟಿ ಕಣಿವೆಗಳ ತಿರುವು ರಸ್ತೆಯಲ್ಲಿ ವಾಲಾಡುತ್ತ ಹೊರಟಿತು. ಬಸ್ಸಿನ ಆ ಕುಲುಕಾಟಕ್ಕೆ ಹೊಟ್ಟೆ ತೊಳಸಿ, ತಲೆ ತಿರುಗಿ, ನಮ್ಮಲ್ಲಿಯೂ ನಾಲ್ಕೈದು ಜನರಿಗೆ ವಾಂತಿಯಾಯಿತು. ಬೆಟ್ಟದ ತಿರುವಿನಲ್ಲಿ ಸುತ್ತಿ ಬಳಸಿ, ಹತ್ತಿ ಇಳಿದು ಹೋಗುವ

**ಈರಪ್ಪ ಎಂ. ಕಂಬಳಿ**

ಆ ರಾಷ್ಟ್ರೀಯ ಹೆದ್ದಾರಿ (ಎನ್ ಎಚ್ ೨೧) ಅಬ್ಬಬ್ಬಾ ಎಂದರೆ ಐವತ್ತು ಅಡಿ ಅಗಲ ಇದೆಯೊ ಇಲ್ಲವೊ ಅನುಮಾನ. ಬೆಳಕು ಹರಿದಾಗ ಕಡಿದಾದ ಬೆಟ್ಟ ಕಣಿವೆಗಳ ರಸ್ತೆಯಲ್ಲಿ ತಿಣುಕುತ್ತ-ತೆವಳುತ್ತ, ಸರ್ರನೇ ತಿರುವುಗಳಲ್ಲಿ ಹೊರಳಿ-ನರಳುತ್ತ ಸಾಗುವುದೇ ಒಂದು ವಿಲಾಸ-ವೈಭವ! ಬೆಳಗಿನ ಒಂಭತ್ತಕ್ಕೆ ಮನಾಲಿಯ ಖಾಸಗಿ ಬಸ್ ನಿಲ್ದಾಣದಲ್ಲಿ ಇಳಿದು ನಿಂತಾಗ, ಥೇಟು ನಮ್ಮ ಮಡಿಕೇರಿ ನೋಡಿದಂತಾಯಿತು. ವ್ಯತ್ಯಾಸವಿಷ್ಟೆ: ಮನಾಲಿಯಲ್ಲಿ ದೂರದ ಬೆಟ್ಟಗಳ ನೆತ್ತಿಯ ಮೇಲೆ ಹಿಟ್ಟು ಉದುರಿಸಿದಂತೆ ತೋರುತ್ತಿದ್ದ ಹಿಮರಾಶಿ. ನಗರದ ಅಂಚಿನಲ್ಲಿದ್ದ ಪ್ರೀನಿಯಲ್ಲಿ ನಮಗೋಸ್ಕರ ವ್ಯವಸ್ಥೆ ಮಾಡಲಾಗಿದ್ದ ಬೇಸ್ ಕ್ಯಾಂಪಿಗೆ ಹೋಗಿ ಡೇರೆಗಳಲ್ಲಿ ಸೇರಿಕೊಂಡೆವು. ನಮ್ಮ ಕ್ಯಾಂಪಿನ ಮುಂದುಗಡೆಯೇ ಐಸು ನೀರು ಹೊತ್ತು ಹರಿಯುವ ದೊಡ್ಡ ಝರಿ - ಮುಂದೆ ಅದು ಬಿಯಾಸ್ ನದಿ ಸೇರುವ ಒಂದು ಉಪನದಿಯೇ ಆಗಿತ್ತು.

ಹಿಂದಿನ ದಿನ ಕಡುಬೇಸಿಗೆಯ, ದೆಹಲಿ ರಸ್ತೆಗಳಲ್ಲಿ ಅಲೆಯುವಾಗ ಗೊಣಗಿಕೊಳ್ಳುತ್ತಲೇ ಹೆಜ್ಜೆ ಹೆಜ್ಜೆಗೂ ತಳ್ಳುಗಾಡಿಯಲ್ಲಿ ಶೇಖರಿಸಿಟ್ಟಿದ್ದ ಚಿಲ್ಡ್ ನೀರು - ರೂಪಾಯಿಗೊಂದು ಗ್ಲಾಸು ಹೀರುತ್ತಾ ತಿರುಗಾಡಿದ್ದು ನೆನಪಾಯಿತು. ಆದರೆ ಮನಾಲಿಯ ದಾರಿಯಲ್ಲಿ ಅದಕ್ಕೆ ವಿರುದ್ಧ ವಾತಾವರಣ. ತಣ್ಣಗಿನ ಹವೆಯಲ್ಲಿ, ಹಸಿರು ಮುಡಿದ ಬೆಟ್ಟ-ಕಣಿವೆಗಳಲ್ಲಿ ಹೆಜ್ಜೆ ಹೆಜ್ಜೆಗೆ ಅಡ್ಡ

೧೯೫೩ರಲ್ಲಿ ಎಡ್ಮಂಡ್ ಹಿಲರಿ ಮತ್ತು ತೇನಸಿಂಗ್ ಶೆರ್ಪಾ ಮೊದಲ ಬಾರಿಗೆ ಎವರೆಸ್ಟ್ ಏರಿದ ಧೀರರು ಎಂಬುದನ್ನು ಪಠ್ಯ ಪುಸ್ತಕದಲ್ಲಿ ಓದಿದ್ದು ನೆನಪಾಯಿತು. ಆ ಸಾಹಸ ಯಾತ್ರೆಯಲ್ಲಿ ಒಮ್ಮೆ ರೇಮನ್ಸ್ ಲ್ಯಾಂಬರ್ಟ್‌ನೊಂದಿಗೆ ಸಾವಿರಾರು ಕಿಲೋ ಮೀಟರು ಏರಿ ಡೇರೆ ಹೊಡೆದು ಬೆಳಗೆದ್ದು ನೋಡಿದರೆ, ಪ್ರಕ್ಷುಬ್ಧ ಹವಾಮಾನದಿಂದಾಗಿ, ದೇಹವೆಂಬ ದೇಹವೇ ಆ ಅಸಾಧ್ಯ ಚಳಿಗೆ ಸೆಟೆದು ಕಟ್ಟಿಗೆಯಂತಾಗಿ ಹೋಗಿ, ಪರಸ್ಪರರು ಕೆನ್ನೆಗೆ ಹೊಡೆದುಕೊಂಡು ಮೈ ಬಿಸಿ ಮಾಡಿಕೊಳ್ಳಲು ತೊಡಗಿದ್ದು; ಸ್ವಲ್ಪ ದೂರ ಹೋದಮೇಲೆ, ಮತ್ತೆ ಹೆಜ್ಜೆ ಕಿತ್ತಿಡಲು ಸಾಧ್ಯವಾಗದೆ ಹತಾಶರಾಗಿ ಹಿಂತಿರುಗಿ ಇಳಿದದ್ದಿದೆ. ಮತ್ತೊಮ್ಮೆ ಜಾರ್ಜ್ ಫ್ರೇ ಎಂಬ ಚಾರಣಿಗ ಜಾರಿ ಪ್ರಪಾತಕ್ಕೆ ಬಿದ್ದು ಅಸುನೀಗಿದ ಪ್ರಸಂಗವಿದೆ. ಹಾದಿ ತಪ್ಪಿ ಹಿಂತಿರುಗಲಾಗದೆ ಕಾಡುಪಾಲಾದಂತೇ ಥೇಟು! ಹಿಮರಾಶಿಯಲ್ಲಿ ಹೂತು ಹೋದ ಸಾಹಸೀ ಚಾರಣಿಗರ ಕಳೇಬರಗಳೆಷ್ಟೋ. ಕವಿದ ಆ ಭೀಕರ ಮೌನ ಎಲ್ಲಿಯಾದರೂ ಬಾಯಿ ಬಿಟ್ಟೀತೇ? ಬಿಲ್ಕುಲ್ ಇಲ್ಲ. ಅದೆಲ್ಲವನ್ನೂ ಮೆಲುಕು ಹಾಕಿದಾಗ, ಈ ಹಿಮಾಲಯದ ಸಹವಾಸ ಸುಲಭ ಸಾಧ್ಯವಲ್ಲ ಅನಿಸಹತ್ತಿತ್ತು. ಯಾವ ತರಬೇತಿಯಿಲ್ಲದ, ಮೊಳೆ ಬೂಟುಗಳಾಗಲಿ, ಆಯ ತಪ್ಪದಂತೆ ಚುಚ್ಚಿ ಹಿಡಿಯುವ ಹಿಮಗೋಲುಗಳಂಥ ಅಗತ್ಯ ವೈಜ್ಞಾನಿಕ ಸಲಕರಣೆಗಳಾಗಲಿ ಇಲ್ಲದ ನನ್ನಂಥವರು ಇಷ್ಟರಮಟ್ಟಿಗೆ ತಲುಪಿದ್ದೇ ಹೆಚ್ಚು.

ಹಾಯುವ ಝರಿಗಳಾದರೂ ಐಸು ಕರಗಿದ ನೀರು. ಬೆರಳು ಅದ್ದಿದರೆ ಎರಡೇ ನಿಮಿಷಕ್ಕೆ ರಕ್ತ ಹೆಪ್ಪುಗಟ್ಟಿದ ಅನುಭವ.

ಮರುದಿನ ಬೆಳಿಗ್ಗೆ ಉಪಾಹಾರವಾದ ಮೇಲೆ ಸ್ಥಳೀಯ ಇಬ್ಬರು ಮಾರ್ಗದರ್ಶಿಗಳನ್ನು ಜೋಡಿ ಮಾಡಿಕೊಂಡ ನಮ್ಮ ತಂಡ ಹಸಿರು ಕಣಿವೆಗಳ ಹಾದಿಗಿಳಿಯಿತು. ಬೇಸ್ ಕ್ಯಾಂಪಿನಿಂದ ಸುಮಾರು ಅರವತ್ತು ಕಿ.ಮೀ. ದುರ್ಗಮವಾದ ಬೆಟ್ಟದ ದಾರಿಯನ್ನು ಕ್ರಮಿಸಿ, ಮಧ್ಯದಲ್ಲಿ ನಾಲ್ಕು ಕಡೆ ತಂಗಿ 'ಹಂಪ್ಟಾ ಪಾಸ್' ತಲುಪುವುದು ನಮ್ಮ ಗುರಿಯಾಗಿತ್ತು. ಎಳೆ ಬಿಸಿಲಿಗೆ ದೂರದ ಬೆಟ್ಟದ ಮೇಲಿನ ಹಿಮಾವೃತ ತಾಣಗಳನ್ನು ಯಾವಾಗ ಸ್ಪರ್ಶಿಸುವೆವೊ ಎನ್ನುವ ಅದಮ್ಯ ಕುತೂಹಲ ದೊಂದಿಗೆ; ಸೇಬು-ಚೆರ್ರಿ ಮರಗಳ ನೆಡುತೋಪುಗಳ ನಡುವೆ ಹಾದು ಶಿಸ್ತಿನ ಸಿಪಾಯಿಗಳಂತೆ ಹಸಿರು ಮೆರೆಯುವ ಸಾಲಾಗಿ ನಿಂತ ಸೂಜಿಪರ್ಣ(ಪೈನ್) ಮರಗಳ ಕಾಡಿನ ಹಾದಿಯನ್ನು, ಪರ್ವತಾರೋಹಿಗಳ ಇಮೇಜಿನಲ್ಲಿ ಹತ್ತಿ-ಇಳಿದು, ಇಳಿದು-ಹತ್ತಿ ನಡೆಯುತ್ತಲೇ ಹೋದೆವು.

ಪ್ರತಿವರ್ಷ ಹಿಮಾವೃತವಾಗುವ ಆ ಪ್ರದೇಶ ಏಪ್ರಿಲ್‌ನಲ್ಲಿ ಮಾತ್ರವೇ ಹಿಮ ಕರಗಿ, ದಾರಿಗಳು ತೆರೆದುಕೊಳ್ಳುತ್ತವಂತೆ. ಹೀಗಾಗಿ ಏಪ್ರಿಲ್-ಆಗಸ್ಟ್‌ವರೆಗೆ ಮಾತ್ರ ಹಿಮಾಚಲ ಪ್ರದೇಶ ದೂರದ ಪ್ರವಾಸಿಗರನ್ನೂ ಚಾರಣಿಗರನ್ನೂ ಆಕರ್ಷಿಸುತ್ತದೆ. ಉಳಿದ ಮಾಸಗಳಲ್ಲಿ ಐಸು ಆವೃತವಾಗಿ ಆ ಕಡೆಯ ದಾರಿ ಬಂದಾಗಿಬಿಡುತ್ತದೆ. ಇದು ಇಲ್ಲಿನ ನಿಸರ್ಗ ನಿಯಮ. ಹಿಮಾಚಲ ಪ್ರದೇಶಕ್ಕೆ ಸೇರಿದ ಸಿಮ್ಲಾ, ಮಂಡಿ, ಕುಲು, ಮನಾಲಿಯಂಥ ನಗರಗಳು ಇತ್ತೀಚೆಗೆ ಜನಪ್ರಿಯವಾಗುತ್ತಿರುವ 'ಪರಿಸರ ಪ್ರವಾಸ'ಕ್ಕೆ ಹೇಳಿ ಮಾಡಿಸಿದಂಥ ತಾಣಗಳು. ಈ ನಗರಗಳನ್ನು ಬರೀ ಗಿರಿಧಾಮಗಳೆಂದು ಕರೆದರೆ ಅವಕ್ಕೆ ಅವಮಾನವಾದೀತು. ಅದನ್ನೂ ಮೀರಿದ ಪ್ರಾಕೃತಿಕ ಮಹತ್ವ ಈ ನಗರಗಳಿಗೆ ಪ್ರಾಪ್ತವಾಗಿದೆ.



*ನೈಸರ್ಗಿಕ ಹಸಿರು ಕಾರ್ಪೆಟ್ಟಿನ ಮೇಲೆ ನಮ್ಮ ತಂಡದ ಕ್ರಿಕೆಟಿಗರು*

'ಮೇಲಿಂದ ನೀರ್ಗಲ್ಲುಗಳು ಉರುಳಿ ಬೀಳುತ್ತವೆ' ಎಂದು ಬರೆದು ಕಾಡು-ಬೆಟ್ಟದ ಇಳಿಜಾರು ರಸ್ತೆಯಲ್ಲಿ ನೆಟ್ಟಿದ್ದ 'ಚೇತಾವನಿ' ಫಲಕಗಳು ಅಲ್ಲಿ ಇಲ್ಲಿ ಅಚ್ಚರಿ ಹುಟ್ಟಿಸುತ್ತಿದ್ದವು. ದಿನಕ್ಕೆ ಸರಾಸರಿ ಹನ್ನೆರಡು ಕಿ.ಮೀ. ನಡೆಯುವುದೆಂದು ತಂಡದ ನಾಯಕರು ಹಿಂದಿನ ರಾತ್ರಿಯೇ ನಮಗೆ ವಿವರಿಸಿದ್ದರು. ಕರ್ನಾಟಕ ಪರ್ವತಾರೋಹಣ ಸಂಸ್ಥೆಯ ಸುಧಾಕರ ಮತ್ತು ಶಶಿಧರ ನಮ್ಮಲ್ಲಿ ಉತ್ಸಾಹ ತುಂಬುತ್ತ ಮುನ್ನಡೆಸುತ್ತಿದ್ದರು. ನಡೆಯಲ್ಲಿ ತಮ್ಮ ಹಿಂದಿನ ಹಳೆಯ ಸಾಹಸಗಳನ್ನು ಹೇಳಿ ಹುರಿದುಂಬಿಸುತ್ತಿದ್ದರು. ಆರು ದಿನಕ್ಕೆ ಬೇಕಾದ ಕನಿಷ್ಠ ಅಗತ್ಯ ವಸ್ತುಗಳ ಬೆನ್ನುಚೀಲ ಏಳೆಂಟು ಕಿಲೋ ಭಾರ ಮೀರದಂತಿತ್ತು. ಮೊದಲ ದಿನ ತಿಲಗನ್ ಕ್ಯಾಂಪು ತಲುಪಿದಾಗ ಅಷ್ಟೇನೂ ಆಯಾಸವಾಗಲಿಲ್ಲ.

ಮರುದಿನ ಅಲ್ಲಿಂದ ಹೊರಟಾಗ, ಹಿಂದಿನ ದಿನ ನಡೆದ ದಣಿವಿಗೆ ಕಾಲುಗಳು ತುಸು ಅಸಹಕಾರ ತೋರಿದರೂ ಮನಸ್ಸು ಬಿಡಬೇಕಲ್ಲ? ಅದೇ ಅತ್ಯುತ್ಸಾಹದಲ್ಲಿ, ಪೈನ್ ಮರಗಳ ಕಾಡಿನ ನಡುವೆ, ನಿಸರ್ಗದ ಪರಿಶುದ್ಧವಾದ ಕುಳಿರ್ಗಾಳಿ, ಹಿಮನೀರು ಸೇವಿಸುತ್ತ ನಮ್ಮ ಚಾರಣದ ಆಯಾಸ ಮರೆತು ದೇಹ ದಾಪುಗಾಲು ಇಕ್ಕಿತ್ತು. ಅಂತೂ ಎರಡನೇ ದಿನದ ಸಾರಾಬೋಗಿ ಕ್ಯಾಂಪಿಗೆ ಬಂದಾಗ ದೇಹಗಳು ಸಾಕಷ್ಟು ದಂಡಿತವಾಗಿದ್ದರೂ ನೆಲಕ್ಕೆ ಹಸಿರು ಕಾರ್ಪೆಟ್ ಹಾಸಿದಂತಿರುವ, ಬೆನ್ನ ಹಿಂದೆ ಕಾವಲುಗಾರರಂತೆ ನಿಂತಿದ್ದ ಪೈನ್ ಮರಗಳ ಸುಂದರ ತಾಣ ನಮ್ಮ ಆಯಾಸವನ್ನೆಲ್ಲಾ ಮರೆಸಿದ್ದವು. ಪಕ್ಕದಲ್ಲಿಯೇ ಬೆಟ್ಟದಿಂದ ಇಳಿದು ಕಣಿವೆಯಲ್ಲಿ ಮಾಯವಾಗುವ ಝರಿ. ಅಲ್ಲಿಯೇ ಕಾಯಂ ಇದ್ದುಬಿಡಬೇಕೆನ್ನುವ ಆಸೆ ನಮ್ಮೊಳಗೆ.

ಸಾರಾಬೋಗಿಯಿಂದ ಕರಿಮಿಂಡಿಯಾರಿ ಕ್ಯಾಂಪಿನತ್ತ ನಡೆದ ನಮ್ಮ ಮೂರನೇ ದಿನದ ಚಾರಣ ತುಸು ದುರ್ಗಮವಾದದ್ದೇ. ಆಕಾಶವನ್ನು ತಿವಿಯುವಂತೆ



## ಚಪ್ಪಲಿ...!

**ಜೊ**ತೆಯಾಗಿಯೇ ಹುಟ್ಟಿ
ಜೊತೆಯಾಗಿಯೇ ಅಗಲುವ
ನೀವುಗಳು ಅದಲುಬದಲಾಗದೆ ಸದಾ
ಎಡಬಲದಲ್ಲಿಯೇ ಮುನ್ನಡೆಯುವಿರಿ
ನಾವೂ ಎಡಬಲ ಕುಳಿತೆ ಜೊತೆಯಾದೆವು
ತಡಮಾಡದೆ ಅದಲುಬದಲಾದೆವು
ಸದ್ಯ, ನನ್ನವಳಿಗೀಗ ನಾನೇ ಎಡ...!
ನಮ್ಮನು ಪುಟ್ಟ ಮಗುವಿನಂತೆ ನಿಮ್ಮ
ಹೆಗಲಿಗೇರಿಸಿಕೊಂಡು ಎಲ್ಲೆಡೆ ಸುತ್ತಿ
ಕಲ್ಲು ಮುಳ್ಳುಗಳನ ನೀವೇ ಚುಚ್ಚಿಕೊಂಡು
ಹೇಸಿಗೆಯನ್ನೂ ಲೇಪಿಸಿಕೊಂಡು ನಮ್ಮ
ಪಾದಗಳನ್ನ ರಕ್ಷಿಸುವ ನಿಮ್ಮ ಗುಣ
ನಿಜಕ್ಕೂ ಶ್ಲಾಘನೀಯ...!

ಎದುರಿಗೆ ಬರುವ ಕೆಲ ನನಗಾಗದ
ಮುಖಗಳನ್ನ ನೋಡಲಾಗದೆ ನಿಮ್ಮನ್ನೆ
ನೋಡಿಕೊಂಡು ನಡೆದ, ನಡೆಯುವ
ಆ ಘಳಿಗೆಯಂತೂ ಸ್ಮರಣೀಯ !
ನಿಮ್ಮಿಂದ ಥಳಿಸಿಕೊಂಡರೆ...
ಒಗೆಸಿಕೊಂಡರೆ, ಉಗಿಸಿಕೊಂಡರೆ
ಮಾನ, ಮರ್ಯಾದೆ ಮಂಗಮಾಯ
ಇತ್ತೀಚಿನ ಕೆಲ ಸಭೆ, ಸಮಾರಂಭಗಳಲಿ
ನೀವುಗಳು ಹಾರಿಕೊಂಡು ತೂರಿಕೊಂಡು
ನುಸುಳಿಕೊಳ್ಳುವ ನಿಮಿತ್ತ ನಿಮ್ಮನ್ನ
ಸ್ವಲ್ಪ ದೂರ... ಸರಿಸುತ್ತಿದ್ದಾರೆ...
ಮೊನ್ನೆ ಮೊನ್ನೆ ದೂರದಲ್ಲಿದ್ದುಕೊಂಡೆ
ನೀವುಗಳು ನಸುನಕ್ಕಿದ್ದನ್ನ ನಾ ನೋಡಿದೆ
ನಗೆ ತಡಿಯಲಾಗದೆ ನಾನು ತುಸು ನಕ್ಕೆ...!

**ಕೆ. ಬಿ. ವೀರಲಿಂಗನಗೌಡ್ರ**, ನಂದಿಕೇಶ್ವರ - ೫೮೭ ೨೦೧, ಬಾಗಲಕೋಟೆ ಜಿಲ್ಲೆ



ಕಾಡಿನ ಹೂಗಳು



ನೈಸರ್ಗಿಕ ನಿರ್ಝರಿಣಿಗೆ ಪ್ಲಾಸ್ಟಿಕ್ಕಿನ ಮೂಗುಬೊಟ್ಟು

ಆಕರ್ಷಕವಾಗಿ ನಿಂತ ಪೈನ್ ಮರಗಳ ಕಾಡಿನ ನಡುವೆ, ಸ್ಪಷ್ಟವಾಗಿ ಕಾಲುದಾರಿಯೂ ಕಾಣದ ಕಣಿವೆಯ ಹಾದಿ ಅದು. ಸ್ಥಳೀಯ ಮಾರ್ಗದರ್ಶಿಗಳ ನೆರವಿನಿಂದ ಅವರದೇ ಆದ ಅಂದಾಜಿನ ಮೇಲೆ ನಮ್ಮ ತಂಡ ಸಾಲಾಗಿ ಚಲಿಸುತ್ತಿತ್ತು. ಕೆಲವು ಕಡೆ, ಮಾರ್ಗಸೂಚಿಯಾಗಿ ಲಗೋರಿಯಂತೆ ಕಲ್ಲುಗಳನ್ನು ಪೇರಿಸಿ ಇಡಲಾಗಿತ್ತು.

ಪೈನ್ ಮರದ ಕಾಂಡವನ್ನೇ ಬಹುತೇಕ ಕಡೆ ಝರಿಗೆ ಅಡ್ಡಲಾಗಿ ಹಾಕಿ ಸೇತುವೆಯಂತೆ ಬಳಸುತ್ತಿದ್ದರು. ಆ 'ಕಾಲುಸಂಕ'ದ ಮೇಲೆ ಆಯ ತಪ್ಪದಂತೆ ನಡೆದು ಆಚೆ ದಡ ಸೇರಬೇಕು. ಮುಂದೆ ಹಸನ್ಮುಖದ ಹುಡುಗ ಮಾನ್‌ಸಿಂಗ್ ನಮ್ಮ ರೈಲಿನ ಎಂಜಿನ್‌ನಂತೆ ಓಡುತ್ತಿದ್ದರೆ ಹಿಂದಿನ ಕೊನೆಯ ತುದಿಯಲ್ಲಿ ಆತನಿಗಿಂತ ತುಸು ಹಿರಿಯನಾದ ಸಂಜಯ, ಹಿಂದೆ ಉಳಿದವರನ್ನು 'ಚಲಿಯೇ ಸಾಬ್' ಎಂದು ಪುಸಲಾಯಿಸಿ ಮುಂದೆ ತಳ್ಳುತ್ತಿದ್ದ.

ಅಂತೂ ಕರಿಮಿಂಡಿಯಾರಿ ಕ್ಯಾಂಪು ತಲುಪಿದಾಗ ಖುಷಿಯೋ ಖುಷಿ. ಹಸಿರು ಹಾಸಿದ ನೆಲ, ದೂರದಲ್ಲಿ ನೆತ್ತಿಯ ಮೇಲೆ ಹಿಮಾವೃತ ಶಿಖರಗಳು, ಹಿತವಾದ ಬಿಸಿಲು ಅದರ ಜತೆ ತಣ್ಣಗಿನ ಗಾಳಿ ಬೆರೆತು ಆಹ್ಲಾದಕರ ವಾತಾವರಣವನ್ನು ಸೃಷ್ಟಿಸಿದ್ದವು. ಒಂದೇ ಸಮ ನಡೆದುಬಂದ ಆಯಾಸವನ್ನು ಕ್ಷಣಾರ್ಧದಲ್ಲಿ ಪರಿಹರಿಸಿದ್ದವು. ವಿರಾಮವಾಗಿ ಸ್ಥಳೀಯ ಹುಡುಗರೂ ಸೇರಿ, ಪ್ಲಾಸ್ಟಿಕ್ ಕ್ಯಾನನ್ನು ಸ್ಟಂಪಾಗಿ ಇಟ್ಟು, ಸೌದೆಯ ತುಂಡನ್ನೇ ಬ್ಯಾಟನ್ನಾಗಿ ಹಿಡಿದು, ತಮ್ಮೊಂದಿಗೆ ತಂದಿದ್ದ ಚೆಂಡನ್ನು ಎಸೆದೆಸೆದು ಕ್ರಿಕೆಟ್ ಆಡಿದರು. ಕಾಲ ಕೆಳಗೆ ಹಸಿರು ನೈಸರ್ಗಿಕ ಪಿಚ್.

'ನಾ ನಿಲ್ಲುವಳಲ್ಲ' ಎನ್ನುವಂತೆ ಅವಸರಿಸಿ ಪ್ರಪಾತಕ್ಕೆ ಧುಮ್ಮಿಕ್ಕಿ, ತರಹೇವಾರಿ ವಿನ್ಯಾಸದಲ್ಲಿ ಹಾಗೆ ಕಣಿವೆ ಹೊಕ್ಕು, ಮುಂದೆ ಸಾಗುವ ಇಲ್ಲಿನ ಅಗಣಿತ ಝರಿಗಳ ಸಂಭ್ರಮವನ್ನು ಪಕ್ಕದಲ್ಲಿ ನಿಂತು ನೋಡುವುದೇ ಒಂದು ಹಬ್ಬ.

ಅಂತೂ ಇಂತೂ, ಅಂಥವೇ ಹತ್ತಾರು ನೋಟಗಳು. ಜುವಾರಾ ಕ್ಯಾಂಪಿಗೆ ಹತ್ತಿರವಾದಾಗ ಹೊಸದೊಂದು ಲೋಕ ಪ್ರವೇಶಿಸಿದ ಅನುಭವ ನಮ್ಮದಾಗಿತ್ತು. ಕಾವ್ಯಗಳಲ್ಲಿ ವರ್ಣಿಸುವ 'ಕುಳಿರ್ಗಾಳಿ' ಎಂದರೆ ಇದೇ ಇರಬೇಕು. ಹೊರಗೆ ಅಡಿಯಿಟ್ಟರೆ, ಭಯಂಕರ ಚಳಿಗಾಳಿ ನಮ್ಮ ಮೈಯನ್ನು ತರಗೆಲೆಯಂತೆ ಅಲ್ಲಾಡಿಸುತ್ತಿತ್ತು. ಒಳ ಉಡುಪುಗಳ ಮೇಲೆ ತುಂಬು ತೋಳಿನ ಶರಟು, ಯಾವುದಕ್ಕೂ ಇರಲಿ ಎಂದು ಬೆಂಗಳೂರಿಂದಲೇ ಕೊಂಡು ಒಯ್ದಿದ್ದ ದುಬಾರಿ ಸ್ವೆಟರು, ಅದರ ಮೇಲೆ ವಿಂಡ್ ಸ್ವೆಟರ್ ತೊಟ್ಟು, ಕೈಗೆ ಉಲ್ಲನ್ ಗ್ಲವ್ಸ್, ತಲೆಗೆ ಕಿವಿಗಳನ್ನು ಮುಚ್ಚುವಂತೆ ಉಣ್ಣೆಯ ಮಂಕೀ ಕ್ಯಾಪು ಸಿಕ್ಕಿಸಿಕೊಂಡು ಹೊರಬಂದರೂ ಚಳಿಗಾಳಿ ನಮ್ಮನ್ನು ಅಟ್ಟಾಡಿಸಿಕೊಂಡು ಹೊಡೆಯುತ್ತಿತ್ತು. 'ಬುಲೆಟ್ ಪ್ರೂಫು' ಧರಿಸಿದಂತೆ ಪ್ಯಾಕ್ ಆಗಿ ಹೊರಬಂದರೂ ಬಿಡುತ್ತಿಲ್ಲವಲ್ಲ! ಇಲ್ಲಿನ ಚಳಿಗೆ ಅದೆಷ್ಟು ಶಕ್ತಿಯಿರಬೇಕು ? ಅಪ್ಪನಿಗುಟ್ಟಿದ್ದ ಚಳಿಯೆಂದರೆ ಇದಪ್ಪ . ಇವನೌನು, ನಾಲ್ಕು ಕವಚಗಳಲ್ಲಿ ನಮ್ಮ ಮೈಯನ್ನು ಸುತ್ತಿ ಅಡಗಿಸಿಟ್ಟುಕೊಂಡರೂ ಬಿಡದೆ, ತನ್ನ ಚೂಪಾದ ನಖಗಳನ್ನು ಒಳತೂರಿಸಿ, ನಿರ್ದಾಕ್ಷಿಣ್ಯವಾಗಿ ನಮ್ಮ ಅಸ್ಥಿಪಂಜರವನ್ನೇ ಕುಟ್ಟುತ್ತಲಿದೆ, ಅಕಟಕಟಾ !

ಪ್ರಕೃತಿಯ ಮುಂದೆ ಮನುಷ್ಯ ಕೂಡ ಒಂದು ಯಕಃಶ್ಚಿತ್ ಕ್ರಿಮಿ ಎಂಬುದನ್ನು ಇಲ್ಲಿನ ವಾತಾವರಣ ನೆನಪಿಸಿತ್ತು. ನಮ್ಮೆಲ್ಲ ಅಹಂಕಾರಗಳು ಈ ಹಿಮವತ್ ಪರ್ವತಗಳ ತೊಡೆಯ ಮೇಲೆ ನಿಂತಾಗ ಚೂರುಚೂರಾದಂತೆ ನಲುಗಿದ್ದವು. ಚಳಿಗೆ ಇಷ್ಟೊಂದು ಭಯಂಕರ ಶಕ್ತಿಯಿದೆಯೆಂಬುದನ್ನು ನಾನು ಮೊದಲ ಬಾರಿಗೆ ಮನದಟ್ಟು ಮಾಡಿಕೊಂಡೆ. ಬೆಂಗಳೂರಿನ ಸಮಶೀತೋಷ್ಣ ವಾತಾವರಣದಲ್ಲಿ ಸುಖವಾಗಿ ಬದುಕಿದ್ದವರಿಗೆ ಹಿಮಪರ್ವತಗಳ ಸಹವಾಸ ಇಷ್ಟೊಂದು ದುಸ್ಸಾಹಸಕರವೆಂಬುದು ಹೇಗೆ ಗೊತ್ತಾಗಬೇಕು ?

ದಿನನಿತ್ಯ ಊಟಕ್ಕೆ ಮೊದಲು ಕುಡಿಯಲು ಬಿಸಿಯಾದ ಸೂಪು ಕೊಡುವ ಪರಿಪಾಠವಿತ್ತು ಅಲ್ಲಿ. ಸುಟ್ಟ ತಂದೂರಿ ರೋಟಿಯ ಜತೆಗೆ ದಾಲ್ ಮತ್ತು ತರಕಾರಿ ಸಬ್ಜಿ ಇರುತ್ತಿದ್ದದ್ದು ಸಾಮಾನ್ಯ. 'ಚಾವಲ್-ರೈಸ್' ಎಂದು ಅವರು ಕರೆಯುತ್ತಿದ್ದ ಪಲಾವ್ ಅಥವಾ ಬಿಳಿ ಅನ್ನ-ಸಾರೂ ಇರುತ್ತಿದ್ದವು. ಅಡುಗೆಯವರು ಹಿಮಾಚಲ ಪ್ರದೇಶದ ಅಥವಾ ನೇಪಾಳಿ ಮೂಲದ ಹುಡುಗರಾಗಿರುತ್ತಿದ್ದರು. ಅವರದೇ ಆದ ಕೈನ ದೇಸೀತನದ ರುಚಿ ಅದು. ಜುವಾರಾ ಕ್ಯಾಂಪಿಗೆ ಬರುವ ಹೊತ್ತಿಗೆ ನಮ್ಮ ನಾಲಿಗೆಗಿದ್ದ ಆರಂಭದ ಆ ಅಡುಗೆಯ ರುಚಿಯೂ ಈಗ ಕುಂದಿದಂತಾಗಿ ತುಸು ಬೇಸರ ತರಿಸಿತ್ತು. ಅದಕ್ಕಿಂತ ಮಿಗಿಲಾಗಿ ರಾತ್ರಿಯ ಆ ಭಯಂಕರ ಚಳಿಯ ದೆಸೆಯಿಂದಾಗಿ ಊಟವೇ ಸೇರಲಿಲ್ಲ.

ಕುಡಿಯಲು ಸೂಪು ಅಥವಾ ಚಹದ ಲೋಟ ಹಿಡಿದು ಎರಡು ಗುಟುಕು ತುಟಿಗೆ ಮುಟ್ಟಿಸಿದ್ದೇವೋ ಇಲ್ಲವೋ, ಅಷ್ಟರಲ್ಲಿ ಕೈಯಲ್ಲಿದ್ದ ಲೋಟಾ ಸಮೇತ ತಣ್ಣಗಾಗಿ ಹೋಗಿ ನೆಲಕ್ಕೆ ಚೆಲ್ಲಿಬಿಡುವ ಮನಸ್ಸಾಗುತ್ತಿತ್ತು. ಈ ಅವಸ್ಥೆಯಲ್ಲಿ ಸ್ನಾನ ಮಾಡಬೇಕೆನ್ನುವುದು ಮರೆತೇ ಹೋಗಿತ್ತು. ಜುವಾರಾ ಕ್ಯಾಂಪು ಒಂದು ರೀತಿಯಲ್ಲಿ ಯಕ್ಷಗಾನ/ಬಯಲಾಟದ ಅಟ್ಟದಂತಿತ್ತು. ರೊಯ್ಯೆಂದು ಬೀಸುವ ಗಾಳಿಗೆ ನಮ್ಮ ಮೈಮೇಲಿನ ವಿಂಡ್ ಸ್ವೆಟರ್, ಮಫ್ಲರ್‌ಗಳು ಪಟಪಟನೇ ಬಡಿದುಕೊಳ್ಳುತ್ತಲೇ ಪ್ರಕೃತಿ ಹೂಡಿದ್ದ ಆಟಕ್ಕೆ ಹಿನ್ನೆಲೆಯಾಗಿ ಬೀಸುವ ಆ ಪ್ರಚಂಡ ಗಾಳಿ ಯಕ್ಷಗಾನ/ಬಯಲಾಟದ ಚಂಡೆ-ಮದ್ದಳೆ ನುಡಿಸುತ್ತಿದ್ದರೆ, ಹತ್ತಿರದಲ್ಲೆ ಹರಿಯುವ ಐಸು ನೀರಿನ ಝರಿ ಒಂದೇ ಸಮ ಶ್ರುತಿ ಹಿಡಿದ ವಾದ್ಯದಂತೆ ತೋರುತ್ತಿತ್ತು. ಕ್ಷಣಾರ್ಧದಲ್ಲಿ ನಾಟಕದ ಟ್ರಾನ್ಸ್‌ಫರ್ ಸೀನುಗಳಂತೆ ಪ್ರಕೃತಿಯಲ್ಲಿ ಕ್ಷಿಪ್ರ ಬದಲಾವಣೆಗಳಾಗುತ್ತಿದ್ದವು.

ನಮ್ಮ ಪೂರ್ವನಿಯೋಜಿತ ಕಾರ್ಯಕ್ರಮದಂತೆ ಇದು ನಮ್ಮ ಕಡೆಯ ಕ್ಯಾಂಪು. ಬೆಳಿಗ್ಗೆ ಬೇಗನೆ ಎದ್ದು ಸಿದ್ಧವಾಗಿ, ಸುಮಾರು ಹನ್ನೆರಡು ಕಿಲೋ ಮೀಟರು ಐಸು ಮರಳಿನಲ್ಲಿ ನಡೆದು 'ಹಂಪ್ಟಾ ಪಾಸ್' ಎಂಬ ತಾಣವನ್ನು ತಲುಪಿ ಬಿಸಿಲೇರುವುದರೊಳಗೆ ವಾಪಸ್ಸು ಬರುವುದು ನಮ್ಮ ಅಂತಿಮ ಗುರಿಯಾಗಿತ್ತು. ಈ ಕ್ಯಾಂಪಿಗೆ ಬರುವ ಹೊತ್ತಿಗೆ ಆಗಲೇ ನಮ್ಮ ಮೈಗಳು ಸಾಕಷ್ಟು ಹಣ್ಣುಗಾಯಿ ನೀರುಗಾಯಿ ಆಗಿದ್ದವು. ಕಾಲುಗಳಂತೂ ಪದ ಹಾಡುತ್ತಿದ್ದವು. ಮನಸ್ಸು ಮಾತ್ರ ಹಿಮಾವೃತ ಪರ್ವತ ಪ್ರದೇಶವನ್ನು ಕಂಡು ಗರಿಗೆದರಿ 'ಹುರ್‍ರಾ' ಎಂದು ಹುರುಪು ನೀಡುತ್ತಿತ್ತು. ನಮ್ಮಲ್ಲಿ ಕೆಲವರಿಗೆ ದೈಹಿಕ ಬಳಲಿಕೆಯ ಜೊತೆಗೆ ಸಣ್ಣಗಿನ ಅಸ್ವಸ್ಥತೆ - ಅಜಾರಿಗಳು ಕಾಣಿಸಿಕೊಂಡವು. ತಂಡದ ನಾಯಕರು ಮಾತ್ರೆ ನುಂಗಿಸಿ ಮಲಗಿಸಿದ್ದರು.

ಮರುದಿನ ಆರೂವರೆಗೆಲ್ಲ ಸಿದ್ಧವಾಗಿ ನಮ್ಮ ತಂಡ ಕಣಿವೆಯ ದಾರಿಯಲ್ಲಿ ಇಳಿದು ಸಾಲಾಗಿ ಹೊರಟಿತ್ತು. ಐದಾರು ಕಿಲೋ ಮೀಟರು ಚಲಿಸುವ ಹೊತ್ತಿಗೆ - ಎರಡು ಬೆಟ್ಟಗಳ ಕಾಲ ಬುಡದಲ್ಲಿ ಬೋಗುಣಿಯಂಥ ಆಯಕಟ್ಟಿನ ಜಾಗವೊಂದು ಸಿಕ್ಕಿತು. ಅದನ್ನು 'ಮ್ಯಾಗಿ ಪಾಯಿಂಟ್' ಎಂದು ಕರೆಯುತ್ತಾರೆ. ಎರಡೂ ಕಡೆಗೆ

ಬೆಟ್ಟದ ಪಾದಗಳಲ್ಲಿ ಬಿಳಿ ನೊರೆಯಂತೆ ಹಿಮ ಹರಡಿಕೊಂಡಿದೆ. ಮಧ್ಯದಲ್ಲಿ ಹಿಮ ಕರಗಿ ಹರಿಯುವ ಸಣ್ಣ ನದಿಯೊಂದು ನಮಗೆ ಅಭಿಮುಖವಾಗಿ ಹರಿದುಕೊಂಡು ಕೆಳಗೆ ಇಳಿದುಹೋಗುತ್ತದೆ. ಅಲ್ಲಿ ಹತ್ತು ನಿಮಿಷ ವಿಶ್ರಮಿಸಿಕೊಂಡೆವು. ಮುಂದೆ ಕ್ರಮಿಸಲಿರುವ ದಾರಿ ಅಪ್ಪಟ ಹಿಮಾವೃತವೆಂದೂ ನಾವು ತೊಟ್ಟಿದ್ದ ಬೂಟುಗಳು, ಕೈಯಲ್ಲಿದ್ದ ಕಟ್ಟಿಗೆ ಹಿಮಪರ್ವತಗಳ ಆರೋಹಣಕ್ಕೆ ತಕ್ಕುದಾಗಿಲ್ಲವೆಂದೂ ತಂಡದ ನಾಯಕರೊಬ್ಬರು ಪರಿಪರಿಯಾಗಿ ವಿವರಿಸಿದರು. ಬಹುತೇಕರಿಗೆ ಹಿಂಜರಿಕೆ ಶುರುವಾಗಿತ್ತು. ಹದಿನೆಂಟು ಜನರಲ್ಲಿ ಹತ್ತು ಜನರು ಅಲ್ಲಿಯೇ ಉಳಿದು, ನಾವು ಎಂಟು ಜನರು ಆದದ್ದಾಗಲಿ ಎಂದು ಮುಂದುವರಿಯಲು ಸಿದ್ಧರಾದೆವು.

ನಮ್ಮೊಡನೆ, ಕೈಯಲ್ಲಿ ಹಿಮಗೊಡಲಿ ಹಿಡಿದ ಮತ್ತೊಬ್ಬ ಸ್ಥಳೀಯ ಮಾರ್ಗದರ್ಶಿಯೂ ಸೇರಿಕೊಂಡು ಮುಂದೆ ಮುಂದೆ ನಡೆದಿದ್ದ. ಎವರೆಸ್ಟ್ ಏರಿದ್ದ ತೇನ್‌ಸಿಂಗನ ಕತೆಗಳನ್ನು ಓದುವಾಗ, ಹಿಮ ಬಂಡೆಗಳನ್ನು ಕಡಿದು ಕೆತ್ತಿ ಮೆಟ್ಟಿಲು ಮಾಡಿಕೊಂಡು ಮೇಲಕ್ಕೆ ಏರುತ್ತಾ ಹೋಗುತ್ತಾರೆಂದು ತಿಳಿದಿದ್ದೆವು. ಅಂಥ ತಾಣದಲ್ಲಿ ನಾವೂ ಹೊರಟಿದ್ದೇವಲ್ಲ ಎಂಬ ಮೊಂಡು ಧೈರ್ಯದಲ್ಲಿ ಮುಂದುವರಿದೆವು. ಅಲ್ಲಿಯೇ ಉಳಿದ ನಮ್ಮ ತಂಡದ ಇತರ ಸದಸ್ಯರು ನಮಗೆ ಶುಭ ಕೋರಿ ಆಲಂಗಿಸಿ ಬೀಳ್ಕೊಟ್ಟಿದ್ದರು. ಅನುಕೂಲಸ್ಥರು ಹೆಲಿಕಾಪ್ಟರ್ ಹತ್ತಿ ಹೋಗಿ ಹಿಮಾವೃತ ನೆತ್ತಿಯ ಮೇಲೆ ಕಾಲೂರಿದರೇನು ಬಂತು ಮಜಾ ? ನಮ್ಮನ್ನು ಸ್ನಾಯುಬಲವನ್ನೆ ನೆಚ್ಚಿದವರಾಗಿ ಅಂಥ ಆಯಕಟ್ಟಿನ ಜಾಗೆ ತಲುಪುವ ಖುಷಿಗೆ ಎಣೆಯುಂಟೆ ಎಲ್ಲಿಯಾದರು !

ಮರುಭೂಮಿಯಂತೆ ತೋರುತ್ತಿದ್ದ ಹಿಮರಾಶಿಯಲ್ಲಿ ಸ್ಥಳೀಯರಿಗೆ ಮಾತ್ರವೇ ಗೊತ್ತಾಗುತ್ತಿದ್ದ ಅದೃಶ್ಯ ದಾರಿ ಅದು. ಮುಂದೆ ಮುಂದೆ ಹೋದಂತೆಲ್ಲ ಕಲ್ಲುಬಂಡೆಗಳೆಲ್ಲ ಹಿಮಾವೃತವಾಗಿ, ಸುರಿದಿದ್ದ ಹಿಮರಾಶಿಯಲ್ಲಿಯೇ ಕೋಲೂರುತ್ತ ಸ್ಥಳೀಯ ಮಾರ್ಗದರ್ಶಿಗಳ ಕೈಯಲ್ಲಿದ್ದ ಹಿಮಗೊಡಲಿಯಿಂದ ಕೆರೆದು ಸವರಿ ಮಾಡಿದ 'ಪಾದಗಟ್ಟೆ'ಯಲ್ಲಿಯೇ ಕಾಲೂರುತ್ತ ಅವಸರವಸರವಾಗಿ ನಡೆದುಹೋಗಬೇಕಾಗುತ್ತಿತ್ತು. ಮೂರು ಕಿಲೋ ಮೀಟರು ಆ ಹಿಮಮರಳಿನಲ್ಲಿ ಕ್ರಮಿಸುತ್ತಿದ್ದಂತೆ ನಮಗೆದುರಾಗಿ ಪಕ್ಕದಲ್ಲಿಯೇ ಸಶಬ್ದವಾಗಿ ಹರಿದುಬರುತ್ತಿದ್ದ ಆ ಉಪ ನದಿಯೂ ಈಗ ಮಾಯವಾಗಿತ್ತು. ನಮ್ಮ ಹಿಂದೆ ಇದ್ದ ಸಂಜಯನನ್ನು ಕೇಳಲಾಗಿ, ಆತ ನಸುನಕ್ಕು ''ಆಪ್ ಕೆ ನೀಚೆ ಹೈ ಸಾಬ್'' ಎಂದು ಸಮಜಾಯಿಸಿದಾಗ ದಂಗುಬಡಿದು ನಿಂತಿದ್ದೆವು. ಒಂದೇ ಸಮ ಸುರಿದ ಹಿಮ ಪದರುಪದರಾಗಿ ಬಂಡೆಗಳ ಆಕಾರ ಪಡೆದು ಅದರ ಅಡಿ ಸದರಿ ನದಿ ಗುಪ್ತಗಾಮಿನಿಯಾಗಿ ಹರಿದು ಹೋಗುತ್ತಿರುವುದು ನಮ್ಮ ಕಾಲಕೆಳಗೇ ಎಂದಾಗ ನಿಜಕ್ಕೂ ಹೌಹಾರಿದ್ದೆವು. ನಾವು ನಡೆಯುತ್ತಿದ್ದ ಹಿಮದ ಹಾದಿಯೇನಾದರೂ ಕುಸಿದರೆ ಗತಿಯೇನು ಎಂಬ ದಿಗಿಲು ಉಂಟಾದರೂ, ಸಾವರಿಸಿಕೊಂಡು ಹೊರಟೆವು.

ಕಣಿವೆಯ ಸಮತಟ್ಟಾದ ಮರಳುಗಾಡು ಮುಗಿದು ಈಗ ತುಸು, ಏರುದಾರಿಯಲ್ಲಿ ಹೊರಟೆವು. ಎಳೆ ಬಿಸಿಲು ಇದ್ದೂ ಇಲ್ಲದಂತೆ ಹಿಮರಾಶಿಯ ಮೇಲೆ ಬಿದ್ದು ಪ್ರತಿಫಲಿಸುತ್ತಿತ್ತು. ಕಪ್ಪು ಕನ್ನಡಕ ಧರಿಸಿ, ನಡುನಡುವೆ ಹಿಂದೆ ಕ್ರಮಿಸಿದ್ದ ದಾರಿಯನ್ನು ಹಿಂತಿರುಗಿ ನಿಂತು ನೋಡಿಕೊಂಡು ನಮ್ಮನ್ನು ನಾವೇ ಸುಧಾರಿಸಿಕೊಳ್ಳುತ್ತ ಮುಂದುವರಿಯುವುದು ನಡೆದಿತ್ತು. ಒಂದು ಕಡೆ ಹಿಮರಾಶಿಯ ನಡುವೆ ಮುಳುಗದೆ ಉಳಿದಿದ್ದ ಕರಿ ಬಂಡೆಯ ನಡುಗಡ್ಡೆಯಂಥ ಸ್ಥಳದಲ್ಲಿ ಕೂತು ಫ್ರೂಟಿಯನ್ನು ಹೀರಿ ದಣಿವಾರಿಸಿಕೊಂಡು, ಮುಂದುವರಿದಿದ್ದೆವು. ಹಿಂದಿನ ನಾಲ್ಕು ದಿನಗಳ ಕಾಡಿನ ನಡಿಗೆಯಲ್ಲಿ ಉದ್ದಕ್ಕೂ ಕಾಗೆಗಳು ಕ್ರಾ ಕ್ರಾ ಎಂದು ಅರಚುತ್ತಿದ್ದದ್ದು ಸಾಮಾನ್ಯವಾಗಿತ್ತು. ಆದರೆ, ಅಚ್ಚರಿಯೆಂದರೆ, ಈ ಹಿಮಾಚ್ಛಾದಿತ ಪರ್ವತ ಪ್ರದೇಶಕ್ಕೆ ಬಂದರೆ, ಯಾವುದೇ ಕಾಗೆಯ ದನಿಯೂ ಇಲ್ಲ. ಬೇರಾವ ಪಕ್ಷಿಗಳ ಕಲರವವೂ ಇಲ್ಲ, ಥೇಟು ಕಾಡಿನ ನೀರವತೆಯ ಮರಳುಗಾಡಿನ ನಡಿಗೆಯ ಅನುಭವ ಈಗ ನಮ್ಮದಾಗಿತ್ತು. ನಾವೀಗ ಸುಮಾರು ೪,೦೦೦ ಮೀಟರು ಎತ್ತರದಲ್ಲಿದ್ದೇವೆಂದು ಸುಧಾಕರ ಹೇಳುತ್ತಿದ್ದರು.



ಮರದ ಕಾಂಡದ ಸೇತುವೆ – 'ಕಾಲುಸಂಕ'

'ಇನ್ನು ನಮ್ಮ ಕೈಲಾಗದು, ಸುಮ್ಮನೇ ಸತಾಯಿಸಬೇಡಾ' ಎನ್ನುವಂತೆ ಕಾಲುಗಳು ನಿಲ ನಿಂತಾಗ, ಹುಟ್ಟು ಸಾವುಗಳೆಲ್ಲ ಒಟ್ಟೊಟ್ಟಾಗಿ ನೆನಪಾದವು. ಕೂರಲೂ ಒಂದು ಕಲ್ಲು ಬಂಡೆಯಿಲ್ಲ. ಪುಡಿ ಐಸಿನ ಮರಳ ರಾಶಿ. ಸುತ್ತ ಬಿಮ್ಮನೇ ಬೀಗುವ ಅಗಾಧ ಮೌನ. ಈಗ ನಾವು ತಲುಪಿರುವ ಎಡೆಯಲ್ಲಿ ಮರಗಿಡಗಳಿಲ್ಲ, ಗುಡ್ಡ ಬೆಟ್ಟಗಳಿಲ್ಲ, ಇನ್ನು ಹಕ್ಕಿ ಪಕ್ಕಿಗಳ ದನಿಯಾದರೂ ಎಲ್ಲಿಂದ ಕೇಳಬೇಕು ? ಏನಾದರೂ ಹೆಚ್ಚೂಕಮ್ಮಿಯಾದರೆ, ನಮ್ಮ ದೇಹವನ್ನು ಮರಳಿ ಗೂಡಿಗೆ ಒಯ್ಯುವ ಪರಿಯಾದರೂ ಎಲ್ಲಿದೆ ? ಆಗಾಗ ದಪ್ಪ ರವೆ ಉದುರಿದಂತೆ ಬೀಳುವ ಹಿಮದಲ್ಲಿ ಹೂತು ಅಬ್ಬಬ್ಬಾ ಎಂದರೆ ಅನುಗಾಲ ಕೊಳೆಯದೆ ಉಳಿಯಬಹುದೇನೋ ನಮ್ಮ ಶರೀರವೆಂಬೋ ಈ ಮೂಳೆ-ಮಾಂಸದ ಸೌಧ. ಸಾವರಿಸಿಕೊಂಡು ಮುಂದಡಿಯಿಟ್ಟೆವು. ಮಂಕುತಿಮ್ಮನ ಕಗ್ಗದ ಸಾಲುಗಳು ಬಾಯಿಗೆ ಬಂದವು :

ನಿನ್ನ ಹೆಣವನು ನೀನೇ ಹೊತ್ತು ಸಾಗಿಸಬೇಕೊ
ಅಣ್ಣ ಬಾ ತಮ್ಮ ಬಾ ಎಂದಳುವದೇಕೊ ?

ನಮ್ಮ ಜೀವಕ್ಕೆ ನಾವೇ ಹೊಣೆಗಾರರೆಂದು ಒಪ್ಪಿ ಸಹಿ ಹಾಕಿದ ಮೇಲೆ ಇನ್ನೇನು ? ಬೇರೆ ಉಪಾಯಗಾಣದೆ ಮರಳರಾಶಿಯಲ್ಲಿ ಕಾಲುಗಳನ್ನು ಕಿತ್ತು ಕಿತ್ತು ಇಟ್ಟೆವು. ಇದೇ ಮೊದಲ ಬಾರಿಗೆ ನಮ್ಮ ದೇಹ ನಮಗೇ ಭಾರ ಅನ್ನಿಸಿದ್ದು.

೧೯೫೩ರಲ್ಲಿ ಎಡ್ಮಂಡ್ ಹಿಲೆರಿ ಮತ್ತು ತೇನಸಿಂಗ್ ಶೆರ್ಪಾ ಮೊದಲ ಬಾರಿಗೆ ಎವರೆಸ್ಟ್ ಏರಿದ ಧೀರರು ಎಂಬುದನ್ನು ಪಠ್ಯ ಪುಸ್ತಕದಲ್ಲಿ ಓದಿದ್ದು ನೆನಪಾಯಿತು. ಆ ಸಾಹಸ ಯಾತ್ರೆಯಲ್ಲಿ ಒಮ್ಮೆ ರೇಮನ್ಸ್ ಲ್ಯಾಂಬರ್ಟ್‌ನೊಂದಿಗೆ ಸಾವಿರಾರು ಕಿಲೋ ಮೀಟರು ಏರಿ ಡೇರೆ ಹೊಡೆದು ಬೆಳಗೆದ್ದು ನೋಡಿದರೆ, ಪ್ರಕ್ಷುಬ್ಧ ಹವಾಮಾನದಿಂದಾಗಿ, ದೇಹವೆಂಬ ದೇಹವೇ ಆ ಅಸಾಧ್ಯ ಚಳಿಗೆ ಸೆಟೆದು ಕಟ್ಟಿಗೆಯಂತಾಗಿ ಹೋಗಿ, ಪರಸ್ಪರರು ಕೆನ್ನೆಗೆ ಹೊಡೆದುಕೊಂಡು ಮೈ ಬಿಸಿ ಮಾಡಿಕೊಳ್ಳಲು ತೊಡಗಿದ್ದು; ಸ್ವಲ್ಪ ದೂರ ಹೋದಮೇಲೆ, ಮತ್ತೆ ಹೆಜ್ಜೆ ಕಿತ್ತಿಡಲು ಸಾಧ್ಯವಾಗದೆ ಹತಾಶರಾಗಿ ಹಿಂತಿರುಗಿ ಇಳಿದದ್ದಿದೆ. ಮತ್ತೊಮ್ಮೆ ಜಾರ್ಜ್ ಫ್ರೇ ಎಂಬ ಚಾರಣಿಗ ಜಾರಿ ಪ್ರಪಾತಕ್ಕೆ ಬಿದ್ದು ಅಸುನೀಗಿದ ಪ್ರಸಂಗವಿದೆ. ಹಾದಿ ತಪ್ಪಿ ಹಿಂತಿರುಗಲಾಗದೆ ಕಾಡುಪಾಲಾದಂತೇ ಥೇಟು ! ಹಿಮರಾಶಿಯಲ್ಲಿ ಹೂತು ಹೋದ ಸಾಹಸೀ ಚಾರಣಿಗರ ಕಳೇಬರಗಳೆಷ್ಟೋ. ಕವಿದ ಆ ಭೀಕರ ಮೌನ ಎಲ್ಲಿಯಾದರೂ ಬಾಯಿ ಬಿಟ್ಟೀತೇ ? ಬಿಲ್ಕುಲ್ ಇಲ್ಲ. ಅದೆಲ್ಲವನ್ನೂ ಮೆಲುಕು ಹಾಕಿದಾಗ, ಈ ಹಿಮಾಲಯದ ಸಹವಾಸ ಸುಲಭ ಸಾಧ್ಯವಲ್ಲ ಅನಿಸಹತ್ತಿತ್ತು. ಯಾವ ತರಬೇತಿಯಿಲ್ಲದ, ಮೊಳೆ ಬೂಟುಗಳಾಗಲಿ, ಆಯ ತಪ್ಪದಂತೆ ಚುಚ್ಚಿ ಹಿಡಿಯುವ ಹಿಮಗೋಲುಗಳಂಥ ಅಗತ್ಯ ವೈಜ್ಞಾನಿಕ ಸಲಕರಣೆಗಳಾಗಲಿ ಇಲ್ಲದ ನನ್ನಂಥವರು ಇಷ್ಟರಮಟ್ಟಿಗೆ ತಲುಪಿದ್ದೇ ಹೆಚ್ಚು. ಹಿಮಾವೃತ ಬೆಟ್ಟ-ಕಣಿವೆ ಹಾದು ಬರಬೇಕಾದರೆ, ಅನೇಕ ಬಾರಿ ಜಾರಿ ಜಾರಿ ಬಿದ್ದು-ಎದ್ದು ಬಂದದ್ದೇ ಒಂದು ವಿಶಿಷ್ಟ ಅನುಭವ. ಹೀಗೆ ಹಿಮವತ್ ಪರ್ವತಗಳ ಪಾದ ಚುಂಬಿಸಿದ, ಹಿಮಾಚಲದ ಆ ಹಿಮಾವೃತ ತೊಡೆಗಳ ಮೇಲೆ ಮಕ್ಕಳಂತೆ ನಲಿದಾಡಿದ ಅಪರೂಪದ ಆ ಅನುಭವ ಜೀವಮಾನವಿಡೀ ಮೆಲುಕು ಹಾಕಲು ನನಗೆ ಇಷ್ಟು ಸಾಕಾಗಿತ್ತು.

ಸುಮಾರು ನಾಲ್ಕು ಸಾವಿರ ಮೀಟರು ಎತ್ತರದಲ್ಲಿದ್ದದ್ದಕ್ಕೇನೋ, ಆಕ್ಸಿಜನ್ ಕೊರತೆ ಯಿಂದಾಗಿ ನಮ್ಮ ಹೃದಯ-ಪುಪ್ಪುಸಗಳು ಈಗ ಪಟಪಟ ಎಂದು ಹೊಡೆದುಕೊಳ್ಳುತ್ತಿದ್ದವು, ಶರೀರದಲ್ಲಿದ್ದ ಶಕ್ತಿಯೆಲ್ಲ ಉಡುಗಿಹೋದಂತೆ. ಇಂಧನ ಖಾಲಿಯಾದ ವಾಹನದಂತೆ ಕಾಲುಗಳು ನಿತ್ರಾಣವಾಗಿ ನಿಂತುಬಿಡಲು ಹಾತೊರೆಯುತ್ತಿದ್ದವು. ಮುಂದಿದ್ದ ಹಿಮಪರ್ವತ ಗಳಾದರೊ 'ನಾನಿರುವ ಎತ್ತರಕ್ಕೆ ನೀನೇರಬಲ್ಲೆಯಾ ?' ಎನ್ನುವಂತೆ ರುದ್ರ ಗಂಭೀರ ಸವಾಲು ಹಾಕಿ, ಸಾವು-ಬದುಕಿನ ಹೋರಾಟಕ್ಕೆ ಆಹ್ವಾನ ನೀಡಿದಂತೆ ಸೆಡ್ಡು ಹೊಡೆಯುತ್ತಿದ್ದವು.

ಅಷ್ಟರಲ್ಲಿ ಹಿಂದಿದ್ದ ಸಂಜಯ ಕೂಗಿ, ಸೀಟಿ ಹೊಡೆದು, ನಮ್ಮ ಮುಂದಿದ್ದ ತಂಡದ ನಾಯಕ ಸುಧಾಕರರ ಗಮನ ಸೆಳೆದ. ಹಿಂದೆ ಬಿದ್ದಿದ್ದ ಸುರೇಶ ಅವರಿಗೆ ನಡೆಯಲು ಆಗುತ್ತಿಲ್ಲವೆಂದೂ ತಲೆ ಸುತ್ತಿ ಬಂದು ಹಿಮದ ಮರಳಲ್ಲಿಯೇ ಅಸಹಾಯಕತೆಯಿಂದ ಕೂತುಬಿಟ್ಟಿದ್ದಾರೆಂದೂ ತಿಳಿಸಿದೊಡನೆ, ಸುಧಾಕರ ಅವಸರವಸರವಾಗಿ ವಾಪಸು ನಡೆದರು. ಮುಂದುವರಿಯುವುದೋ ಬೇಡವೋ ಎಂಬ ಸಂದಿಗ್ಧತೆಗೆ ಬಿದ್ದ ಮಲ್ಲಿಕಾರ್ಜುನ ಮತ್ತು ನಾನು ಪರಸ್ಪರ ಮುಖ-ಮುಖ ನೋಡಿಕೊಂಡೆವು. ಅಷ್ಟರಲ್ಲಿ, ಸಂಜಯ ನಮ್ಮ ಕಷ್ಟವನ್ನು ನೋಡಲಾಗದೆ 'ಹೆಚ್ಚು ರಿಸ್ಕ್ ತೆಗೆದುಕೊಳ್ಳುವುದು ಬೇಡ' ಎನ್ನುವಂತೆ



*ಸ್ಥಳೀಯ ಹಸನ್ಮುಖಿ ಮಾರ್ಗದರ್ಶಿಗಳು - ಮಾನಸಿಂಗ್ ಮತ್ತು ಸಂಜಯ*

ಪರಿಪರಿಯಾಗಿ ಹೇಳಿ, ನನ್ನನ್ನು ಆಲಿಂಗಿಸಿ, ಮರಳಿ ಹೋಗಲು ಪುಸಲಾಯಿಸಿದ. ಸುರೇಶ ಮತ್ತು ಸುಧಾಕರರೊಡನೆ ಒಲ್ಲದ ಮನಸ್ಸಿನಲ್ಲಿಯೇ ಹಿಂದಕ್ಕೆ ಹೆಜ್ಜೆ ಹಾಕಿದ್ದೆವು. ಸದ್ಯಕ್ಕೆ ನಮ್ಮಲ್ಲಿ ಯಾರಿಗೂ ಏನೂ ಅನಾಹುತವಾಗಲಿಲ್ಲವೆಂಬ ಸಮಾಧಾನ ನಮ್ಮದು.

ಸ್ವಲ್ಪ ಹೊತ್ತು ಕಾದು, ಹಿಂದಿರುಗಿದ ಸ್ಥಳೀಯ ಮಾರ್ಗದರ್ಶಿ ಹುಡುಗನೊಂದಿಗೆ ಹೊರಟೆವು. ಒಂದು ಕಡೆ ಎರಡು ಕರಿ ಗುಂಡುಗಳ ನಡುವೆ ಹಿಮದ ತಾರಸಿಯಂತೆ ತೋರುತ್ತಿದ್ದ ಕಡೆ ಆತ, ಕೈಯಲ್ಲಿದ್ದ ಹಿಮಗೊಡಲಿಯಿಂದ ಕಡಿದು ಮೆಟ್ಟಿಲು ಮಾಡಲು ಕುಕ್ಕಿದ ತಕ್ಷಣ, ರಪ್ಪ ಹಾಕಿದ್ದ ಹಿಮದ ನೆಲ ಕುಸಿದು, ಒಳಗೆ ಕರಿ ನೀರು ಬಿದ್ದು ಹರಿಯುತ್ತಿದ್ದದ್ದನ್ನು ಕಂಡು ನಮಗೆ ಅಚ್ಚರಿಯಾಯಿತು. ಅದರ ಬದಿಯಲ್ಲಿ ಮತ್ತೊಂದು ಕಡೆ ಹಿಮದ ಮೆಟ್ಟಿಲು ಮಾಡಿ ತುಳಿದು ಗಟ್ಟಿಗೊಳಿಸಿ ಆತ ಹತ್ತಿ ಮೇಲೆ ಹೋಗಿ, ಹಿಮಗಟ್ಟಿದ ಜಗುಲಿಯ ಮೇಲೆ ಸುಮಾರು ಮೂವತ್ತು ಅಡಿ ದೂರ ಹೆಜ್ಜೆ ಗುರುತು ಮಾಡಿ ನಾವು ಅದರಲ್ಲೇ ಪಾದ ಊರಿ ದಾಟಿ ಬರುವಂತೆ ಹೇಳಿದ. ನನ್ನ ಮುಂದೆ ಇದ್ದ ಸುರೇಶ ಸುಮ್ಮನೇ ಹೋಗದೆ ಆರಂಭದಲ್ಲಿ ಒಂದು ಬದಿಗೆ ಕೈಯಲ್ಲಿದ್ದ ಕೋಲಿನಿಂದ ಜೋರಾಗಿ ಕೆಳಕ್ಕೆ ಅಪ್ಪಳಿಸಿದ್ದಕ್ಕೆ ಹಿಮಬಂಡೆಯಲ್ಲಿ ಅಂಗೈ ಅಗಲ ಬಿಲ ಉಂಟಾಗಿತ್ತು.

ಮೂವರೂ ಆಚೆ ಬದಿ ಹೋಗಿ ನಿಂತಿದ್ದಾರೆ. ಕೊನೆಯಲ್ಲಿ ಉಳಿದ ನಾನು ಒಂದು ಹೆಜ್ಜೆ ಮುಂದಿಕ್ಕಿ ಆ ಬಿಲದಲ್ಲಿ ಹಣಕಿದಾಗ ನೀರು ಹರಿಯುವುದನ್ನು ಕಂಡು ಭಯ ಮೂಡಿತ್ತು. ನಾನೇ ಎಂಭತ್ತು ಕೆ.ಜಿ., ಬೆನ್ನಿಗೆ ಹತ್ತು ಕೆ.ಜಿ. ಬ್ಯಾಗು ಬೇರೆ, ಆ ಭಾರಕ್ಕೇ ಕಾಲ ಕೆಳಗಿನ ಹಿಮಬಂಡೆ ಒಡೆದು ಕೆಳಗೆ ಹರಿವ ನೀರಿನಲ್ಲಿ ಕೊಚ್ಚಿಕೊಂಡು ಹೋದರೆ ಗತಿಯೇನು ಎಂಬ ಭಯ ನನ್ನನ್ನು ಆವರಿಸಿತ್ತು. ಅಲ್ಲೇ ನಿಂತೆ. ಆ ಹುಡುಗ ಮುಗುಳ್ನಕ್ಕು, ಹಿಂತಿರುಗಿ ನನ್ನ ಬಳಿ ಬಂದು, ಬಲಕ್ಕೆ ಎರಡು ಅಡಿ ದೂರದಲ್ಲಿ ಹೊಸದಾಗಿ ಮೆಟ್ಟಿಲು ಕೆತ್ತಿ ತಾನೊಂದು ಬಾರಿ ಹೋಗಿ ಬಂದು ಮಾಡಿ, ಗಟ್ಟಿಯಿರುವುದಾಗಿ ಹೇಳಿ, ಈಗ ನಡೆದು ಬರುವಂತೆ ಹೇಳಿದ. ಹೃದಯವೇ ಬಾಯಿಗೆ ಬಂದಂತಾದರೂ ಗಟ್ಟಿ ಧೈರ್ಯ ಮಾಡಿ, ಕೆಂಡ ಹಾಯುವವರಂತೆ ಮುಷ್ಟಿಯಲ್ಲಿ ಜೀವ ಹಿಡಿದುಕೊಂಡು ದಡದಡ ಎಂದು ಆ ಬದಿಗೆ ಓಡಿ ಉಸಿರು ಬಿಟ್ಟಿದ್ದೆ - 'ಬದುಕಿದೆಯಾ ಬಡ ಜೀವವೇ' ಎಂದುಕೊಂಡು.

ಬೆಳಗಿನ ಹತ್ತೂವರೆ - ಹನ್ನೊಂದು. ಆಗಲೇ ಬಿಸಿಲು ಬಿದ್ದಿದ್ದರಿಂದಾಗಿ, ಹಿಮದಲ್ಲಿ ಹೇಗೆ ನಡೆಯಬೇಕೆನ್ನುವ ತರಬೇತಿಯಿಲ್ಲದ ನಾನು ಹತ್ತಾರು ಬಾರಿ ಜಾರಿ ಜಾರಿ ಬಿದ್ದು ಎದ್ದೆ. ಮೇಲೆದ್ದು ಹಿಮದ ಕಣಗಳನ್ನು ಕೊಡವಿಕೊಂಡು ಮುಂದುವರಿಯುತ್ತಿದ್ದೆ. ಮೈಗೆ ಪೆಟ್ಟಾಗುತ್ತಿರಲಿಲ್ಲವೆಂಬುದು ಬೇರೆ ಮಾತು. ಅರ್ಧ ದಾರಿ ಕ್ರಮಿಸಿದಾಗ ದಾರಿ ತಪ್ಪಿತ್ತು. ನಮ್ಮೊಂದಿಗೆ ಸ್ಥಳೀಯ ಮಾರ್ಗದರ್ಶಿಗಳು ಯಾರೂ ಇರಲಿಲ್ಲ ಬೇರೆ. ಆ ಹರಿಯುವ ನದಿ ಬೇರೆ ನಮ್ಮ ಕಾಲ ಕೆಳಗೆ ಅದೃಶ್ಯವಾಗಿದೆ. ನಮ್ಮ ಭಾರಕ್ಕೆ ಹಿಮ ಬಂಡೆ ಏನಾದರೂ ಕುಸಿದರೆ ನಾವು ಅದರ ತಣ್ಣಗೆ ಕೊರೆಯುವ ನೀರಿಗೆ ಬಿದ್ದೊಡನೆ ಈಜು ಬರುತ್ತಿದ್ದರೂ ಸೆಟೆದುಹೋಗುವುದು ಗ್ಯಾರಂಟಿ ಎಂಬುದನ್ನು ನೆನೆದು ಒಂದು ಕ್ಷಣ ನಡುಕವುಂಟಾಯಿತು.

ಸುತ್ತ ಕಣ್ಣು ಹಾಯಿಸುತ್ತಲೇ, ಬೆಳಿಗ್ಗೆ ಬಂದಿದ್ದ ಒಂದು ಅಂದಾಜಿನಲ್ಲಿಯೇ (ಹಿಮದಲ್ಲಿ ನಡೆದು ಬಂದಿದ್ದ ನಮ್ಮ ಹೆಜ್ಜೆಗಳಾಗಲೇ ಅಳಿಸಿಹೋಗಿದ್ದರಿಂದಾಗಿ) ಕೋಲು ಊರೂರಿ ಮುಂದಡಿಯಿಟ್ಟೆವು. ಬಾಯ ಪಸೆ ಒಣಗಿಹೋಗಿತ್ತು. ಸ್ವಲ್ಪ ದೂರ ಕ್ರಮಿಸಿದ ಮೇಲೆ ಸದರಿ ನದಿಯ ಶಬ್ದ ಕೇಳಿ, ಅದು ಕಣ್ಣಿಗೆ ಬಿದ್ದಾಗಲೇ ಹೋದ ಜೀವ ಬಂದಂತಾಗಿತ್ತು. ಅದರ ಪಕ್ಕದಲ್ಲಿಯೇ ಈಗ ನಿರ್ಭಯವಾಗಿ ಸರಸರ ಕಾಲು ಹಾಕಿ, ಕಣಿವೆಯ ಬೇಸಿನ್ ಬುಟ್ಟಿಯಂಥ ಜಾಗ 'ಮ್ಯಾಗಿ ಪಾಯಿಂಟ್' ತಲುಪಿದ್ದೆವು. ನನಗೆ ಯಾಕೋ ಹಿಂದಿನ ರಾತ್ರಿಯಿಂದಲೂ ಒಂದು ಬಗೆಯ ಅಸ್ವಸ್ಥತೆ. ಹೈ ಆಲ್ಟಿಟ್ಯೂಡ್ ಸಿಕ್‌ನೆಸ್‌ನಿಂದಾಗಿಯೋ ಏನೋ ನನಗೆ ತಲೆನೋವು, ವಾಂತಿ. ಹಸಿವಾಗದೆ ಏನೂ ಸೇರದೆ ಇರುವ ಆ ಬಳಲಿಕೆ ಈಗ ಇನ್ನೂ ಹೆಚ್ಚಾಗಿ ಒಮ್ಮೆ ತಂಗಿದ್ದ ಜುವಾರಾ ಬೇಸ್‌ಕ್ಯಾಂಪಿಗೆ ಕಾಲು ಎಳೆದುಕೊಂಡು ಮರಳಿದರೆ ಸಾಕು ಅನ್ನಿಸಿತ್ತು.

ನಾವು ಮರಳಿ ಇಳಿದುಬಂದಿದ್ದ ಹಿಮಾವೃತ ಪರ್ವತ ಪ್ರದೇಶಗಳತ್ತ ನೋಡುತ್ತಿದ್ದರೆ, ದೂರದಲ್ಲಿ ಕೆಂಪು ಇರುವೆಯೊಂದು ಜಾರುತ್ತ-ಉರುಳುತ್ತ ಓಡೋಡಿ ಬರುತ್ತಿರುವಂತೆ ಕಂಡಿತು.

ಅರ್ಧ ಗಂಟೆ ಬಿಟ್ಟು ನೋಡಿದರೆ, ಆ ಇರುವೆ ನಮ್ಮೊಂದಿಗೆ ಬೆಳಿಗ್ಗೆ ಮುಂದೆ ಮುಂದೆ ದಾರಿ ಮಾಡಿ ಮುನ್ನಡೆಸಿದ ಸ್ಥಳೀಯ ಮಾರ್ಗದರ್ಶಿ ಹುಡುಗನಾಗಿತ್ತು. ಹಿಮರಾಶಿಯಲ್ಲಿ ಅವರು ಅಷ್ಟೊಂದು ಸರಾಗವಾಗಿ ನಡೆದುಬರುವುದನ್ನು ನೋಡುವುದೇ ಒಂದು ಚಂದ. ಆದರೆ ಅದು ನಮಗೆ ಮಾತ್ರ ಸವಾಲಾಗುತ್ತಿತ್ತು. ಹಿಮದ ಜಾರು ದಾರಿಯಲ್ಲಿ ಬೂಟು ತೊಟ್ಟು ಅವರು ಕಾಲಿಡುವುದೇ ಒಂದು ತಂತ್ರ. ಇಳಿಜಾರಿನಲ್ಲಿ ಸರ್ರನೇ ಜಾರಿ, ಬೆಟ್ಟಕ್ಕೆ ಅಡ್ಡಲಾಗಿ ಹತ್ತುವಾಗ ಕಾಲನ್ನು ಜಾರು ತುಳಿದು, ಗ್ರಿಪ್ ಸಿಕ್ಕುವಂತೆ ಊರಿ ಸರಸರ ನಡೆಯುವ ಅವರದೇ ಆದ ಆ ಶೈಲಿಯನ್ನು ನಾವು ಮೊದಲು ಕರಗತ ಮಾಡಿಕೊಳ್ಳಬೇಕಿತ್ತು.

ಜೀವಮಾನದಲ್ಲಿ ಒಮ್ಮೆಯಾದರೂ ಹಿಮಾಲಯ ಸ್ಪರ್ಶಿಸಿ ಬರಬೇಕೆಂಬ ಆಸೆಯನ್ನು ಇಪ್ಪತ್ತು ವರ್ಷಗಳಿಂದ ಅದುಮಿಟ್ಟುಕೊಂಡು ಬಂದಿದ್ದೆ. ಆದರೆ, 'ಹಲ್ಲಿದ್ದಾಗ ಕಡಲೆಯಿಲ್ಲ, ಕಡಲೆಯಿದ್ದಾಗ ಹಲ್ಲಿಲ್ಲ' ಎನ್ನುವಂತೆ ನಮ್ಮ ಪಾಡು. ಕಾಲ ಅದೆಷ್ಟು ಕ್ರೂರಿ ? ಹಿಂಗದ ಬಾಲ್ಯದ ಹಸಿವು ಮನಸ್ಸಿನೊಳಗೆ, ಶರೀರ ಮಾತ್ರ ಅಸಹಕಾರ ತೋರುತ್ತದೆ. ಹಿಮಾಚಲ ಪ್ರದೇಶದ ಗಿರಿಕಂದರಗಳ ಐಸುಸುಕಿನಲ್ಲಿ ಕಾಲೂರಿ ಬಂದಿದ್ದು ಸಾರ್ಥಕವಾಗಿತ್ತು. ಕ್ಷಣಕ್ಕೊಮ್ಮೆ ಬದಲಾಗುವ ಇಲ್ಲಿನ ವಾತಾವರಣ ನಮ್ಮ ಈ ಹುಚ್ಚು ಸಾಹಸವನ್ನು ಬಗ್ಗು ಬಡಿಯದೆ ಸಹಕರಿಸಿತ್ತೇ ವಿನಾ ಪ್ರತಿಕೂಲ ಪರಿಸ್ಥಿತಿ ಒಡ್ಡಲಿಲ್ಲ. ಹೀಗಾಗಿ ನಾವು ಬಚಾವು.

ನಮ್ಮನ್ನು ಹಸನ್ಮುಖದಿಂದಲೇ ಮುನ್ನಡೆಸಿದ ಸ್ಥಳೀಯ ಮಾರ್ಗದರ್ಶಿಗಳ ಅಪ್ರತಿಮ ತಾಳ್ಮೆ, ಆ ಸಾಹಸ ಪ್ರವೃತ್ತಿ, ಅವರ ಆ ಆಪ್ತ ನಡವಳಿಕೆ, ಜೀವನದಲ್ಲೇ ಮರೆಯಲಾಗದ ಸುಂದರ ಅನುಭವ ನಮಗೆ. ನಾನು ಅವರನ್ನು 'ಐಸಿನ ಮಕ್ಕಳು' ಎಂದೇ ಕರೆದೆ. ಮಾನವೀಯ ತುಡಿತದ ಮುಂದೆ ಭಾಷೆ, ಜನಾಂಗ, ಧರ್ಮ ಈ ಯಾವುವೂ ಅಡ್ಡ ಬರಲಿಲ್ಲ. ಇದು ಹಿಮಾಲಯದಷ್ಟೇ ಸತ್ಯ ಶುದ್ಧ. ಇದನ್ನೇ ಬೇಕಾದರೆ 'ಸತ್ಯಂ ಶಿವಂ ಸುಂದರಂ' ಎಂದು ಉದ್ಗರಿಸಬಹುದೇನೋ !

**ಈರಪ್ಪ ಎಂ. ಕಂಬಳಿ**
ಉಪನಿರ್ದೇಶಕ, ಭಾಷಾಂತರ ನಿರ್ದೇಶನಾಲಯ
ಅಂಬೇಡ್ಕರ್ ವೀದಿ, ಬೆಂಗಳೂರು - ೫೬೦ ೦೦೧

## ಓದುಗರ ಹಾಗೂ ಚಂದಾದಾರರ ಗಮನಕ್ಕೆ

ಪ್ರಿಯ ಓದುಗರೇ,

'ಹೊಸತು' ಪತ್ರಿಕೆಯನ್ನು ಓದುಗರ ಹಿತದೃಷ್ಟಿಯಿಂದ ಸಾಧ್ಯವಾದಷ್ಟು ಕಡಿಮೆ ಬೆಲೆಯಲ್ಲಿ ಇದುವರೆಗೂ ಒದಗಿಸಿದ್ದೇವೆ. ಕಾಗದ ಮತ್ತು ಮುದ್ರಣ ವೆಚ್ಚದ ಹೆಚ್ಚಳ ಹಾಗೂ ಇನ್ನಿತರ ಅನಿವಾರ್ಯ ಕಾರಣಗಳಿಂದಾಗಿ ನಾವು 'ಹೊಸತು' ಪತ್ರಿಕೆಯ ಬೆಲೆಯನ್ನು ಪರಿಷ್ಕರಿಸಲೇಬೇಕಾಗಿ ಬಂದಿದೆ. ಹಾಗಾಗಿ ೨೦೧೩ರ ಆಗಸ್ಟ್ ಸಂಚಿಕೆಯಿಂದ ಈ ಕೆಳಗಿನ ದರಗಳು ಅನ್ವಯವಾಗುತ್ತವೆ. ಓದುಗರು ಎಂದಿನಂತೆ ಸಹಕರಿಸಬೇಕಾಗಿ ವಿನಂತಿ.

| | |
|---|---|
| ಬಿಡಿ ಪ್ರತಿ | - ರೂ. ೧೫-೦೦ |
| ವಿಶೇಷಾಂಕ (ಜನವರಿ) | - ರೂ. ೪೫-೦೦ |
| ವಾರ್ಷಿಕ ಚಂದಾ | - ರೂ. ೨೦೦-೦೦ |
| ತ್ರೈವಾರ್ಷಿಕ | - ರೂ. ೪೫೦-೦೦ |

ಹೊಸದಾಗಿ ಚಂದಾ ನೀಡುವವರು ಹಾಗೂ ನವೀಕರಿಸುವವರು ೩೧-೦೭-೨೦೧೩ರ ಒಳಗೆ ಪಾವತಿಸಿದಲ್ಲಿ ಹಿಂದಿನ ದರಗಳು ಅನ್ವಯ (ಹಿಂದಿನ ದರಗಳು : ವಾರ್ಷಿಕ : ರೂ. ೧೫೦. ತ್ರೈವಾರ್ಷಿಕ :ರೂ. ३५೦)

-ವ್ಯವಸ್ಥಾಪಕ, 'ಹೊಸತು'

'ಹೊಸತು', ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು-೫೬೦ ೦೦೧

# ಮಹಿಳೆಯರ ಸಂಘಟಿತ ಪ್ರಯತ್ನಗಳ ಪ್ರತೀಕ 'ಕಸೂತಿ'







ಕೃತಿ : **ಕಸೂತಿ**
ಲೇಖಕರು : **ಪ್ರೊ॥ ಸ. ಉಷಾ**
ಪುಟಗಳು : ೧೫೬ ಬೆಲೆ : ೯೫.೦೦
ಪ್ರಕಾಶಕರು : ಅಭಿನವ ಪ್ರಕಾಶನ, ಬೆಂಗಳೂರು

**ಕ**ವಯಿತ್ರಿ ಪ್ರೊ॥ ಸ. ಉಷಾರವರ ಪ್ರಕಟಿತ ಕವನ ಸಂಗ್ರಹಗಳೆಂದರೆ 'ತೊಗಲುಗೊಂಬೆಯ ಆತ್ಮಕಥೆ', 'ಈ ನೆಲದ ಹಾಡು' ಹಾಗೂ 'ಹವಳ ಹಾರಿದ ಹೊತ್ತು'. ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ, ಕನ್ನಡ ಪುಸ್ತಕ ಪ್ರಾಧಿಕಾರದ 'ಜನಪ್ರಿಯ ಪುಸ್ತಕ ಮಾಲಿಕೆ'ಯ ಸಂಪಾದಕರಾಗಿದ್ದ ಉಷಾರವರಿಗೆ 'ವರ್ಧಮಾನ ಉದಯೋನ್ಮುಖ ಪ್ರಶಸ್ತಿ', 'ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ' ಮುಂತಾದ ಪ್ರಶಸ್ತಿಗಳು ಲಭಿಸಿವೆ. ಇವರ ಕಾದಂಬರಿ 'ಕಸೂತಿ' ಹಲವು ವಿಧಗಳ ವೈಶಿಷ್ಟ್ಯತೆ ಹೊಂದಿದೆ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಂತೆ 'ಕಸೂತಿ' ಕೂಡ ಮೂರು ತಲೆಮಾರುಗಳ ಕತೆ ಹೇಳುತ್ತದೆ. ಪ್ರತಿ ಅಧ್ಯಾಯವೂ ತನ್ನದೇ ವಿಶಿಷ್ಟ ಶೀರ್ಷಿಕೆ ಹೊಂದಿದೆ. ಆದರೊಂದಿಗೆ ಕಾದಂಬರಿಯು 'ಸರಸ್ವತಿ-೧೯೦೯', 'ಸ್ವರ್ಣ-೧೯೩೬' ಮತ್ತು 'ವೀಣಾ-ವಿದ್ಯಾ-ಕಲಾ-೧೯೫೪' ಎಂದು ಮೂರು ವಿಭಾಗಗಳಾಗಿ ಇಪ್ಪತ್ತನೇ ಶತಮಾನದ ಆದಿಯಿಂದ ಮೂರು ತಲೆಮಾರುಗಳ ಕಥಾನಕಕ್ಕೆ ರಂಗಸಜ್ಜಿಕೆ ರೂಪಿಸಿಕೊಂಡಿದೆ.

ಕೆಸರೆ ಎಂಬ ಊರಿನ ಶಾನುಭೋಗರ ಎಂಟು ವರ್ಷದ ಮಗಳು ಸರಸ್ವತಿಗೆ ಶಾಮಣ್ಣ ಉಪಾಧ್ಯರ ಮಗ ಹದಿನಾಲ್ಕು ವರ್ಷದ ವೆಂಕಣ್ಣನೊಂದಿಗೆ ಮದುವೆ ನಿಶ್ಚಯವಾಗುವುದರೊಂದಿಗೆ ಅವಳ ವಿದ್ಯಾಭ್ಯಾಸ ನಿಲ್ಲುತ್ತದೆ. ಪನ್ನೇರಳೆ, ಜಾಜಿಕಲ್ಲು, ತಾವರೆಕೆರೆ, ಸುಂಕದಹಳ್ಳಿ, ತಿಮ್ಮನಹಳ್ಳಿ, ಮುಂತಾದ ಮಲೆನಾಡ ಸೆರಗು ಬಯಲುನಾಡ ಅಂಚಿನಂಥ ಪ್ರದೇಶಗಳಲ್ಲಿ ಒಂದು ಕೊಂಬೆಗೆ ಗೊಂಚಲು ಗೊಂಚಲಾಗಿ ಅಂಟಿಕೊಂಡ ಹಣ್ಣಿನಂಥ ಊರುಗಳಲ್ಲಿ ಚಕ್ರವ್ಯೂಹದ ಸಂಬಂಧಗಳು. ಅವಿಭಕ್ತ ಕುಟುಂಬಗಳ ಪರಸ್ಪರಾವಲಂಬನೆ, ಮನೆ ತಪ್ಪಿದ ವಿಧವೆ ಪಾರ್ವತಮ್ಮಂಗೆ, ಗಂಡನನ್ನು ಕಳೆದುಕೊಂಡ ಸುಬ್ಬಮ್ಮಂಗೆ ತಮ್ಮ ಸಹಜ ಕರ್ತವ್ಯ ಎಂಬಂತೆ ಶಾನುಭೋಗರು ಆಶ್ರಯ ನೀಡುವುದು ಅಂದಿನ ಸಾಮಾಜಿಕತೆಗೆ ಸಹಜವಾದ ಸಂಗತಿ. ಓದಲು ದೂರದ ಊರಿನಿಂದ ಬಂದ ಮಕ್ಕಳಿಗೆ ಮನೆಯಲ್ಲಿ ಆಶ್ರಯ ನೀಡುವುದು, ಒಂದು ಮನೆಯ ಮದುವೆಗೆ ಊರವರು, ನೆಂಟರಿಷ್ಟರು ಸಡಗರಿಸುತ್ತ ಸಿದ್ಧತೆ ಮಾಡುವುದು, ಪನ್ನೇರಳೆಯ ಸೀತೆ, ರಾಮಲಕ್ಷ್ಮಿಯ ಮನೆಯಲ್ಲಿ ಬೆಳೆದಂತೆ ಯಾರದೋ ಮನೆಯ ಕರುಳಕುಡಿ ಇನ್ನಾರದೋ ಮನೆಯಲ್ಲಿ ಹಬ್ಬಿ ಬೆಳೆದು ಹೂ ಬಿಡುವುದು ಇಂಥ ಸಂಗತಿಗಳೂ ಅಂದಿನ ಸಾಮಾಜಿಕ ಚೌಕಟ್ಟಿನಲ್ಲಿ ಸಹಜವಾದುವು.

ಸರಸ್ವತಿಯ ಮದುವೆ ಅವಳ ಓದನ್ನು ನುಂಗಿ ನೊಣೆದರೆ, ಸೀತೆ, ಲಕ್ಷ್ಮಿ, ಚೆನ್ನಲಕ್ಷ್ಮಿಯರ ಮದುವೆ ಗೊತ್ತಾಗುವಾಗ ಹುಡುಗಿಯರಿರಲಿ, ಅವರ ತಾಯಂದಿರಿಗೆ ಕೂಡ ತಮ್ಮ ಹೆಣ್ಣುಮಕ್ಕಳನ್ನು ನೋಡಲು ಬರುವ ವರನ ಕಡೆಯವರು ಯಾರು ಎಂಬುದನ್ನು ತಿಳಿಸಬೇಕಾದ ಅನಿವಾರ್ಯತೆ ಆ ಕಾಲದ ಪುರುಷರಿಗಿರಲಿಲ್ಲ. ಸಂಬಂಧ ಹೊಂದಿಸುವುದು ಪುರುಷರಿಗೆ ಬಿಟ್ಟಿದ್ದು. ಅವರು ತೋರಿಸಿದಲ್ಲಿ ಮದುವೆಯಾಗುವುದು, ಆ ಮದುವೆಗೆ ಸಿದ್ಧತೆ ಮಾಡುವುದು ಹೆಂಗಸರ ಪಾಲಿಗೆ ಬಂದಿದ್ದು. ಇಂಥ ಪರಿಸ್ಥಿತಿಯ ಬಲಿಪಶುವಾದ ಜಯಾ ಕಟವಾಯಲ್ಲಿ ಜೊಲ್ಲು ಸುರಿಸುವ ಮಂದ ಬುದ್ಧಿಯವನ ಪತ್ನಿಯಾಗಬೇಕಾಗುತ್ತದೆ. ''ಸ್ವರ್ಣಗೌರಿ ಎಂಬ ಎಳೆಯ ಕೋಳಿಯನ್ನು ಯಾರೂ ಸಾಂಬಾರ ಅರೆಯಲೋ ಬಿಡಲೋ ಎಂದು ಕೇಳಲಿಲ್ಲ, ನಾನು ಬಿ.ಎ. ಮಾಡುತ್ತೇನೆ ಎಂಬ ಅವಳ ಸಣ್ಣ ದನಿಯ ಕೋರಿಕೆಗೆ ಯಾರೂ ಗಮನ ಕೊಡಲೇ ಇಲ್ಲ'' – ಎಂಬಂಥ ಪರಿಸ್ಥಿತಿ ಮುಂದುವರಿದಿದ್ದರೂ ಕೂಡ ಪರಿವರ್ತನೆಯ ಸುಳಿ ಒಳಗೊಳಗೇ ಸುಳಿದಾಡುತ್ತಾ ಇತ್ತು. ಸಂಸಾರದ ಜವಾಬ್ದಾರಿ ಹೊರದ ಗಂಡನಿಂದಾಗಿ ಸೀತೆ, ಹೊಲಿಗೆ ಕಸೂತಿ ಕಲಿಯುತ್ತಾಳೆ. ಕ್ರಮೇಣ ಎಲ್. ಎಸ್. ಮಾಡಿ ಶಿಶುವಿಹಾರದ ಮೇಡಂ ಆದವಳು, ವಾದಮಾಡಿ ಬಿ.ಎ.ಬಿ.ಟಿ.ಗೆ ಡೆಪ್ಯುಟೇಷನ್ ಸೌಲಭ್ಯ ಪಡೆದು ಹೈಸ್ಕೂಲಿನ ಹೆಡ್ಮೇಡಂ ಆಗುತ್ತಾಳೆ. ಸಾತು ಎಳೆಯ ವಯಸ್ಸಿಗೇ ವಿಧವೆಯಾದಾಗ ಸಂಪ್ರದಾಯಸ್ಥ ತಂದೆ ಅವಳಿಗೆ ಶಿಕ್ಷಕರ ತರಬೇತಿ ಕೊಡಿಸುತ್ತಾರೆ. ಜಯಾ ಕೂಡ ಮಂದಬುದ್ಧಿಯ ಗಂಡನಿಂದ ಸೆಟೆದು ನಿಂತು ವಿದ್ಯಾಭ್ಯಾಸದತ್ತ ಮುಖ ಮಾಡುತ್ತಾಳೆ. ಹೀಗೆ ಇಲ್ಲಿನ ಹಲವಾರು ಸ್ತ್ರೀ ಪಾತ್ರಗಳು ವಿದ್ಯೆಯಿಂದಾಗಿ ಸ್ವಾವಲಂಬನೆ, ಸ್ವಾಭಿಮಾನದ ಜೀವನಕ್ರಮ ರೂಪಿಸಿಕೊಳ್ಳುವ ಮೌನಕ್ರಾಂತಿಯ ಒಳಸುಳಿ ಕಾದಂಬರಿಯಲ್ಲಿ ಅಂತರ್ಗತವಾಗಿ ಎಂಬಂತೆ ಒಡಮೂಡಿದೆ.

ಇಪ್ಪತ್ತನೇ ಶತಮಾನದ ಉತ್ತರಾರ್ಧದ ಭಾಗದಲ್ಲಿ ವೀಣಾ, ವಿದ್ಯಾ, ಕಲಾ ಇವರೆಲ್ಲ ಆರ್ಥಿಕ ಸ್ವಾವಲಂಬನೆಯ ಹೊಸ ಭಾಷ್ಯವನ್ನೇ ಬರೆಯುತ್ತಾರೆ. ಬಾಲ್ಯ ವಿವಾಹ, ವೈಧವ್ಯ, ವಿಷಮ ದಾಂಪತ್ಯದ ಹಿಂದಿನ ತಲೆಮಾರುಗಳ ಸ್ತ್ರೀಯರ ಬವಣೆಗಳು ಇವರಿಗಿಲ್ಲ. ಇವರು ತಮ್ಮ ಬಾಳಸಂಗಾತಿಗಳನ್ನು ಧರ್ಮ, ಅಧಿಕಾರ, ಕಂದಾಚಾರಗಳ ಕಟ್ಟು ಬಿಡಿಸಿಕೊಂಡು ತಾವೇ ಆರಿಸಿಕೊಳ್ಳುವ ಧಾರ್ಷ್ಟ್ಯ ಹೊಂದಿದವರು.

ಕಸೂತಿ ಹೆಣ್ಣಿನ ಜೀವನವನ್ನು ಬಿಂಬಿಸುವ ಒಂದು ಪ್ರಮುಖ ಅಂಶ. ತನ್ನ ಶಿಕ್ಷಕಿಯಿಂದ ಮದುವೆಗೆ ಕ್ರೋಷಾ ಡಬ್ಬಿ ಉಡುಗೊರೆ ಪಡೆದ ಸರಸ್ವತಿ ಅದರಿಂದಲೇ ಹೊಲಿಗೆ ಕಲಿತು ಸ್ವತಂತ್ರಳಾಗುತ್ತಾಳೆ. ಮಗಳು ಸ್ವರ್ಣಾಗೂ ಹೊಲಿಗೆಯ ನೈಪುಣ್ಯ ಕಲಿಸುತ್ತಾಳೆ. ಸ್ವರ್ಣಾ ಮಗಳು ವಿದ್ಯಾ, ವಿದ್ಯೆಯಿಂದ ಸ್ವಲ್ಪ ಹಿಂದೆ ಇದ್ದರೂ ಮಹಿಳಾ ಸಂಘಟನೆಯ ಬೆಂಬಲದಿಂದ ಆರ್ಥಿಕ ಸಹಾಯ ಪಡೆದು ಸ್ವತಂತ್ರಳಾಗಿ 'ಲಾವಣ್ಯ ಮ್ಯಾಚಿಂಗ್ ಸೆಂಟರ್' ತೆರೆದು ತನ್ನ ನೈಪುಣ್ಯದಿಂದ ಅಜ್ಜಿಯ ಸಿಂಗರ್ ಮಷೀನ್‌ಗೆ ನಿಜವಾದ ಉತ್ತರಾಧಿಕಾರಿಯಾಗುತ್ತಾಳೆ. ಹೀಗೆ ಲೇಖಕಿ, ಸ್ತ್ರೀಯರ ವಿದ್ಯೆ, ಆರ್ಥಿಕ ಸ್ವಾವಲಂಬನೆ, ಸ್ವಾತಂತ್ರ್ಯ ಮಹಿಳೆಯರ ಸಂಘಟಿತ ಪ್ರಯತ್ನಗಳ ನವಿರು ಎಳೆಗಳ ಸುಂದರ ಕಸೂತಿಯನ್ನು ಈ ಕಾದಂಬರಿಯಲ್ಲಿ ಹೆಣೆದಿದ್ದಾರೆ.

ಅಂದಂದಿನ ಕಾಲದ ಸಾಮಾಜಿಕ ಪರಿಸರ, ಸಾಂಪ್ರದಾಯಿಕ ಜೀವನಕ್ರಮಗಳು, ಅವಕ್ಕೆ ಸೂಕ್ತವಾದ ಸಂಭಾಷಣೆಗಳು, ವಿಶಿಷ್ಟ ಪದ ಪ್ರಯೋಗಗಳು, ಮೈಸೂರಿನ ಅರಸರ ತೊಟ್ಟಿ ವೈಭವ, ದಸರಾ ಸಡಗರ, ಲಿಂಗ ತಾರತಮ್ಯ, ಪುರುಷ ಪ್ರಾಧಾನ್ಯದ ಚಪ್ಪಡಿಯ ಚಡಿಯಲ್ಲೇ ತಲೆಯೆತ್ತಿ ಬೆಳೆದು ಹಬ್ಬಿ ಹೂ ಬಿಡಬಲ್ಲ ಸ್ತ್ರೀಯ ಅದಮ್ಯ ಚೇತನ... ಹೀಗೆ ಸೂಕ್ಷ್ಮ ವಿಶ್ಲೇಷಣೆಯ ನೈಪುಣ್ಯದ ನೇಯ್ಗೆಯಲ್ಲಿ ಹೆಣೆದ ಸುಂದರ ಕಸೂತಿಯ ನವಿರು, ಓದುಗರಿಗೆ ಈ ಕಾದಂಬರಿಯಿಂದ ಲಭಿಸುತ್ತದೆ.

**ಕೆ. ಆರ್. ಉಮಾದೇವಿ ಉರಾಳ್**
ನಿವೃತ್ತ ಉಪನ್ಯಾಸಕಿ, 'ವನಸುಮ', ಆಜಾದ್ ರಸ್ತೆ
ತೀರ್ಥಹಳ್ಳಿ -೫೭೭ ೪೩೨

# ಇವತ್ತಿನ ಶಿಕ್ಷಣಕ್ಕೆ ಅಗತ್ಯ ಒಂದು ಕಾಯಕಲ್ಪ

ಕೆ. ಟಿ. ಗಟ್ಟಿ

**ಕಲಿಕೆಗೆ ಕೊನೆಯೆಂಬುದಿಲ್ಲ. ಕಲಿಯಬೇಕಾದ್ದು ಮಕ್ಕಳು ಮಾತ್ರ ಅಲ್ಲ. ಪಾಲಕರು ಕೂಡ ಕಲಿಯಬೇಕು. ಕಲಿಯದೆ, ಎಲ್ಲದರಲ್ಲಿಯೂ ಅಜ್ಞಾನಿಗಳಾಗಿ ಉಳಿದು ತಮ್ಮ ಮಕ್ಕಳ ಮುಂದೆ ಬೆದರಿ ಬಾಯಿ ಮುಚ್ಚಿ ಕುಳಿತುಕೊಳ್ಳುವ ಪರಿಸ್ಥಿತಿ ಎಷ್ಟೋ ತಾಯಿತಂದೆಯರಿಗೆ ಉಂಟಾಗುತ್ತದೆ! ಹೆಚ್ಚು ಅಂಕಕ್ಕಾಗಿ ಮತ್ತು ರ್‍ಯಾಂಕಿಗಾಗಿ ಹಟ ಹಿಡಿಯುವ ಪಾಲಕರು ನಿರಂತರ ಅಸುಖಿಗಳು. ಇತರ ಮಕ್ಕಳಿಗಿಂತ ತನ್ನ ಮಗ/ಮಗಳು ಹೆಚ್ಚು ಅಂಕ ಗಳಿಸಬೇಕು ಎನ್ನುವ ಬಕಧ್ಯಾನ ಮಕ್ಕಳ ಆರೋಗ್ಯಕ್ಕೂ ಒಳ್ಳೆಯದಲ್ಲ, ಮಕ್ಕಳ ಅಪ್ಪ ಅಮ್ಮನ ಆರೋಗ್ಯಕ್ಕೂ ಒಳ್ಳೆಯದಲ್ಲ. ಕಲಿಕೆಯಲ್ಲಿ ಸ್ಪರ್ಧೆ ತನ್ನ ಒಳಗೆ ಇರಬೇಕು. 'ನಿನ್ನೆಗಿಂತ ಇವತ್ತು ಚೆನ್ನಾಗಿ ಬದುಕಬೇಕು, ಇವತ್ತಿಗಿಂತ ನಾಳೆ ಚೆನ್ನಾಗಿ ಬದುಕಬೇಕು' ಎನ್ನುವ ಸ್ಪರ್ಧೆ ಹೆಚ್ಚು ತಿಳಿದವನಾಗಲು, ಹೆಚ್ಚು ಒಳ್ಳೆಯವನಾಗಲು, ಹೆಚ್ಚು ಅಂಕ ಪಡೆಯಲು, ತಪ್ಪುಗಳನ್ನು ತಿದ್ದಿಕೊಳ್ಳಲು, ಅನ್ಯಾಯ ಮಾಡದಿರಲು – ಎಲ್ಲದಕ್ಕೂ, ಎಲ್ಲ ಪ್ರಾಯದವರಿಗೂ ಸಾಕು.**

ಇಡೀ ದೇಶದ ಶಿಕ್ಷಣ ರಂಗದಲ್ಲಿ ಮತ್ತು ಸಾಮಾಜಿಕ ಮನೋರಂಗದಲ್ಲಿ ಇದು ವಿಶೇಷವೂ ವಿಲಕ್ಷಣವೂ ಆದಂಥ ಒಂದು ಘಟ್ಟ. ತುಸು ಉತ್ಪ್ರೇಕ್ಷಿಸಿ ಹೇಳುವುದಾದರೆ ಪ್ರತಿಯೊಬ್ಬ ವಿದ್ಯಾರ್ಥಿಯ ಬಯಕೆ ತಾನು ಎಂಜಿನಿಯರಾಗಬೇಕೆಂಬುದು ಮತ್ತು ಪ್ರತಿ ತಾಯಿತಂದೆಯ ಬಯಕೆ ತನ್ನ ಮಗ ಅಥವಾ ಮಗಳು ಎಂಜಿನಿಯರಾಗಬೇಕೆಂಬುದು. ಯಾಕಾಗಿ ಎಂದು ಲೋಕಕ್ಕೇ ಗೊತ್ತಿರುವುದರಿಂದ ಆ ಬಗ್ಗೆ ಮಾತು ಬೇಡ. ತಮ್ಮ ಮಕ್ಕಳು ದೊಡ್ಡ ಸಂಬಳದ ಕೆಲಸ ಪಡೆಯಬೇಕು, ತಮ್ಮ ಜೀವನಮಟ್ಟ ಮೇಲಕ್ಕೆ ಬರಬೇಕು ಎನ್ನುವ ತಾಯಿತಂದೆಯರ ಬಯಕೆಯಲ್ಲಿ ಏನೂ ತಪ್ಪು ಇಲ್ಲ. ತಪ್ಪು ಇರುವುದು ಬೇರೆ ಹಲವು ವಿಚಾರಗಳಲ್ಲಿ. ಮಗ ಅಥವಾ ಮಗಳು ಸಂಪಾದನೆಯಲ್ಲಿ ಮೇಲಕ್ಕೇರಿ ಬದುಕಿನಲ್ಲಿ ಮುಗ್ಗರಿಸಿದರೆ ಅದಕ್ಕೆ ಎಂಜಿನಿಯರಿಂಗ್ ಕಾರಣವಲ್ಲ.

ಯಾವ ವಿದ್ಯಾರ್ಥಿಗೆ ತಾನು ಪಡೆದ ಅಂಕಗಳು ಎಂಜಿನಿಯರಿಂಗ್ ಕಾಲೇಜು ಸೇರಲು ಸಾಕಾಗುವುದಿಲ್ಲವೋ, ಯಾವ ತಾಯಿತಂದೆಯರಿಗೆ ತಮ್ಮ ಮಗ ಅಥವಾ ಮಗಳಿಗೆ ಎಂಜಿನಿಯರಿಂಗ್ ಓದಲು ಬೇಕಾದಷ್ಟು ಅಂಕಗಳಿದ್ದರೂ ಓದಿಸಲು ಬೇಕಾದ ಆರ್ಥಿಕ ಶಕ್ತಿ ಇಲ್ಲವೋ ಇವೆರಡು ವರ್ಗದವರು ಮಾತ್ರವೇ ಇವತ್ತು 'ಎಂಜಿನಿಯರಿಂಗ್ ಇವತ್ತು ಸಮೂಹ ಸನ್ನಿಯಾಗಿದೆ' ಎಂದು ಹಳಿಯುವವರು. ಈ ರೀತಿ ಹಳಿಯುವವರಲ್ಲಿ ಸಾಮಾನ್ಯ ಜನರಿಂದ ಶಿಕ್ಷಣ ತಜ್ಞರವರೆಗೆ ಎಲ್ಲಾ ವರ್ಗದ ಪ್ರಜ್ಞಾವಂತರೂ ಇದ್ದಾರೆ. ವಾಸ್ತವದಲ್ಲಿ, ಅನುಕೂಲವಿದ್ದರೆ ಇವರು ಯಾರೂ ತಮಗೆ ಎಂಜಿನಿಯರಿಂಗ್ ಬೇಡ ಎನ್ನುವವರಲ್ಲ.

'ಎಲ್ಲರಿಗೂ ಎಂಜಿನಿಯರಿಂಗ್ ಬೇಕು, ಎಲ್ಲರಿಗೂ ಇಂಗ್ಲಿಷ್ ಬೇಕು' ಎಂಬಂಥ ಈ ಶೈಕ್ಷಣಿಕ ಸಾಮಾಜಿಕ ಪರಿವೇಷದಲ್ಲಿ ಎಲ್ಲರಿಗೂ ಎಂಜಿನಿಯರಿಂಗ್ ಸಿಗುವಂತೆ, ಎಲ್ಲರಿಗೂ ಇಂಗ್ಲಿಷ್ ಸಿಗುವಂತೆ ಶಿಕ್ಷಣದ ರೀತಿನೀತಿಗಳನ್ನು ಬದಲಾಯಿಸಿದರೆ ಹೇಗೆ ಎಂಬ ಒಂದು ಹೊಸ ಚಿಂತನೆ ನಡೆಸುವುದರಲ್ಲಿ ತಪ್ಪಿಲ್ಲ ಎನಿಸುತ್ತದೆ. ಆದರೆ ಅದು ಕೇವಲ ಐಟಿಬಿಟಿ ಎಂಜಿನಿಯರಿಂಗ್ ಅಲ್ಲ. ಐಟಿಬಿಟಿ ಎಂಜಿನಿಯರಿಂಗಿನ ಆಯುಷ್ಯ ಎಷ್ಟು ಎಂದು ಯಾರಿಗೂ ಗೊತ್ತಿಲ್ಲ. ಬಹಳ ಆಯುಷ್ಯವಂತೂ ಖಂಡಿತ ಇಲ್ಲ. ಸ್ವಲ್ಪ ಕಾಲದ ನಂತರದ ಬೇಡಿಕೆ ಹೀಗೆಯೇ ಇರಲಾರದು. ಆದ್ದರಿಂದ ಮನುಷ್ಯನ ಸಕಲ ಕರ್ಮ ಅರ್ಥಾತ್ ಬದುಕಿಗೆ ಬೇಕಾದ ಎಲ್ಲಾ ಕೆಲಸಗಳನ್ನು ಎಂಜಿನಿಯರಿಂಗಿನ ಕಕ್ಷೆಗೆ ತಂದು ಶಿಕ್ಷಣದ ಆರಂಭದ ಹಂತದಿಂದಲೇ ಓದನ್ನು ಎಂಜಿನಿಯರಿಂಗೀಕರಿಸುವುದು ಒಳ್ಳೆಯದು. ಇವತ್ತಿನ ಜನರಲ್ ಎಜುಕೇಶನ್ ವಿದ್ಯಾರ್ಥಿಯನ್ನು ಬದುಕಿನಿಂದ ಹೊರಗಿನ ಕೇವಲ ಅಕ್ಷರವಂತ ನಿಷ್ಪ್ರಯೋಜಕನನ್ನಾಗಿ ಮಾಡುವಂಥದಾಗಿದೆ. ವೃತ್ತಿ ಶಿಕ್ಷಣ ಏಕ ವಿಷಯ ಪ್ರಭು, ಏಕ ಭಾಷಾ ಪ್ರಭುವನ್ನಾಗಿ ಮಾಡುವಂಥದಾಗಿದೆ. ಏಕ ವಿಷಯ ಪ್ರಭುವಾದರೂ ಅದು ಅವನನ್ನು ತಾಂತ್ರಿಕ ವಿಷಯ ಪದವೀಧರನಂತೆ ತಲೆಯೆತ್ತಿ ನಡೆಯುವಂತೆ ಮಾಡುತ್ತದೆ ಎನ್ನುವಂತಿಲ್ಲ. ಬದುಕುವ ಕ್ರಿಯೆಗೆ ಬೇಕಾದ ಜ್ಞಾನ ಮತ್ತು ತರಬೇತಿ ವಿಜ್ಞಾನ ಮತ್ತು ಕಲಾ ವಿಷಯಗಳಲ್ಲಿ ಶೂನ್ಯ. ವಿದ್ಯಾರ್ಥಿಗೆ ಅವನ/ಅವಳ ಪ್ರಥಮ ಹನ್ನೆರಡು ವರ್ಷಗಳ ಕಾಲದಲ್ಲಿಯೇ ಬದುಕಿಗೆ ಬೇಕಾದ ಹಲವು ಕೆಲಸಗಳನ್ನು, ಹಲವು ಭಾಷೆಗಳನ್ನು ಕಲಿಯಲು ಅವಕಾಶವಿರುವಂಥ ಎಂಜಿನಿಯರಿಂಗ್ ಸ್ವರೂಪದ ಶಿಕ್ಷಣ ದೊರೆಯುವಂತೆ ಶಿಕ್ಷಣ ವಿಧಾನದಲ್ಲಿ ಬದಲಾವಣೆಯಾಗಬೇಕು. ನಿಜವಾಗಿ, ಎಂಜಿನಿಯರಿಂಗ್ ಅಂದರೆ ಏನು? ಎಂಜಿನಿಯರಿಂಗ್ ಅಂದರೆ



‘ವೈಜ್ಞಾನಿಕವಾದ ವಿಧಿ ವಿಧಾನದಲ್ಲಿ ವಿನ್ಯಾಸಗೊಳಿಸಿ ನಿರ್ಮಿಸುವುದು’ ಎಂದು ಅರ್ಥ. ಇದು ಬದುಕಿಗೂ ಅನ್ವಯಿಸುತ್ತದೆ. ಎಲ್ಲಾ ಅಧ್ಯಯನಗಳಿಗೂ ಅನ್ವಯಿಸುತ್ತದೆ. ಬದುಕಿಗೆ ಸಂಬಂಧಿಸಿದ ಸಕಲ ಕೆಲಸಗಳಿಗೆ ಅನ್ವಯಿಸುತ್ತದೆ. ಈ ಅರ್ಥದಲ್ಲಿ, ಅಡುಗೆ, ಉಡುಪು ತಯಾರಿ, ಪೀಠೋಪಕರಣಗಳ ತಯಾರಿ, ಗೋಡೆ ಕಟ್ಟುವುದು, ಕೃಷಿ, ತೋಟಗಾರಿಕೆ, ಹೈನುಗಾರಿಕೆ, ಔಷಧ ತಯಾರಿ, ಮೀನು ಹಿಡಿಯುವುದು, ಈಜು, ಪೈಂಟಿಂಗ್, ಪುಸ್ತಕ ಮುದ್ರಣ, ಹಾಡಲು ಕಲಿಯುವುದು, ವಾದ್ಯೋಪಕರಣಗಳನ್ನು ನುಡಿಸುವುದು, ನೃತ್ಯ, ಕ್ರೀಡೆಗಳು, ಡಾಕ್ಟರನ ಕೆಲಸ ಎಲ್ಲವೂ ಎಂಜಿನಿಯರಿಂಗೇ. ಎಂಜಿನಿಯರಿಂಗ್ ಅನ್ನುವುದು ವಿಮಾನ ಮತ್ತು ಹಡಗು ಕಟ್ಟುವುದಕ್ಕೆ ಮಾತ್ರವಲ್ಲ, ದೋಣಿ ಕಟ್ಟುವುದರಲ್ಲೂ ಇದೆ. ಬದುಕಿನಲ್ಲಿ ಮತ್ತು ವೃತ್ತಿಯಲ್ಲಿ, ಇಂಗ್ಲಿಷ್ ಭಾಷೆಯೊಂದೇ ಸಾಕಾಗಲಿಕ್ಕಿಲ್ಲ. ಮಾತೃಭಾಷೆ ಮತ್ತು ಇತರ ಭಾಷೆಗಳ ಅಗತ್ಯ ಕೂಡ ಉಂಟಾಗಬಹುದು. ಎಲ್ಲ ಕಲಿಕೆಯ ಜೊತೆಗೆ ವ್ಯಕ್ತಿ ಸಾಂಸ್ಕೃತಿಕವಾಗಿ ಕೂಡ ಆರೋಗ್ಯವಂತನಾಗಿರಬೇಕು. ಕಾಳುರೂಢಿಗೆ ಅಂಟಿಕೊಳ್ಳದೆ ಉತ್ತಮ ಸಮಾಜಜೀವಿಯಾಗಿ ವಿಕಾಸಗೊಳ್ಳುತ್ತಿರಬೇಕು.




ಪ್ರಾಥಮಿಕ ಶಿಕ್ಷಣದ ಹಂತದಲ್ಲೇ ಮಕ್ಕಳಿಗೆ ಐಚ್ಛಿಕವಾಗಿ ಸುಮಾರು ನೂರು ಕೋರ್ಸುಗಳನ್ನು ನೀಡಿ, ಬೇಕಾದಷ್ಟನ್ನು ಆರಿಸಿಕೊಂಡು, ಆಯ್ಕೆಮಾಡಿಕೊಂಡ ಪ್ರಧಾನ ಅಧ್ಯಯನ ವಿಷಯದ ಜೊತೆಯಲ್ಲಿಯೇ ಇಷ್ಟವಾದ ಇತರ ಕೋರ್ಸಿನಲ್ಲಿ ವಿಶೇಷ ಪರಿಣತಿ ಗಳಿಸಿಕೊಂಡು ಅದನ್ನೇ ಬದುಕಿಗಾಗಿ ಆಯ್ಕೆ ಮಾಡಿಕೊಳ್ಳಲು ಮುಕ್ತ ಅವಕಾಶ ಮಾಡಿಕೊಡುವ ಅಮೆರಿಕೆಯ ಶಿಕ್ಷಣ ಕ್ರಮ ನಿಜಕ್ಕೂ ಉತ್ತಮವಾಗಿದೆ. ಇವತ್ತು ನಗರಗಳಲ್ಲಿ ಕೋಟ್ಯಾಧೀಶರಾಗಿರುವ ಸಾವಿರಾರು ಉದ್ಯಮಿಗಳು, ವಾಣಿಜ್ಯ ವ್ಯವಹಾರದ ಮನುಷ್ಯರು, ಹೋಟೆಲು ಮಾಲಿಕರು, ಮಹಾ ಬಿಲ್ಡರುಗಳು ತಮ್ಮ ಬದುಕನ್ನು ಆರಂಭಿಸಿದ್ದು ಬಾಲಕಾರ್ಮಿಕರಾಗಿ. ಅವರಲ್ಲಿ ಕೆಲವರು ಬದುಕಿನಲ್ಲಿ ಮೇಲೆದ್ದದ್ದು ರಸ್ತೆ ಬದಿಯಿಂದ. ಈ ವಿಚಾರವನ್ನು ಅವಲೋಕಿಸಿದರೆ, ನಿಜವಾದ ಶಿಕ್ಷಣ ಏನು ಎಂದು ಅರಿತುಕೊಳ್ಳಲು ಅನುಕೂಲವಾದೀತು.

**ಇವತ್ತಿನ ಶಿಕ್ಷಣದ ವಿಚಾರ**

ಅರುವತ್ತು-ಎಪ್ಪತ್ತು-ಎಂಬತ್ತು-ತೊಂಬತ್ತು ಪರ್ಸೆಂಟ್ ಮಾರ್ಕ್ಸ್ ಪಡೆದ ಮಗ ಖಂಡಿತ ಎಂಜಿನಿಯರ್ ಆಗಬಹುದು. ಆದರೆ ಅಷ್ಟು ಬೇಕೆಂದಿಲ್ಲ, ಅದಕ್ಕಿಂತ ಬಹಳ ಕಡಿಮೆ ಪಡೆದರೂ ಎಂಜಿನಿಯರ್ ಆಗಬಹುದು ಎಂದು ಇವತ್ತು ಎಲ್ಲರಿಗೂ ಗೊತ್ತಿದೆ. ಎಂಬತ್ತೋ ತೊಂಬತ್ತೋ ಪರ್ಸೆಂಟ್ ಮಾರ್ಕ್ಸ್ ಪಡೆದ ಮಗ ಅಥವಾ ಮಗಳು ಕಡ್ಡಾಯವಾಗಿ ಎಂಬಂತೆ ಯಾಕೆ ಡಾಕ್ಟರ್ ಅಥವಾ ಎಂಜಿನಿಯರೇ ಆಗಬೇಕು ಎಂದರೆ ತಾವು ಆ ಮೂಲಕ ಶ್ರೀಮಂತರಾಗಬೇಕು, ಪ್ರತಿಷ್ಠಿತರೆನಿಸಿಕೊಳ್ಳಬೇಕು ಎಂಬುದು ಬಹಳ ತಾಯಿತಂದೆಯರ ಆಸೆ. ಆ ರೀತಿ ಮಗನನ್ನು ಉಪಯೋಗಿಸಿಕೊಂಡು ಬಡತನವನ್ನು ಪರಿಹರಿಸಿಕೊಳ್ಳಲಿಕ್ಕೆ ಆಗುತ್ತದೆಯೆ ? ಎಷ್ಟು ಮಂದಿಯಿಂದ ಅದು ಸಾಧ್ಯವಾಗಿದೆ ? ಮಗ ಬೇರೆ ಹುಡುಗಿಯನ್ನು ಮದುವೆಯಾಗಿ ಬೇರೆ ಊರಿನಲ್ಲಿ ಅಥವಾ ಬೇರೆ ದೇಶದಲ್ಲಿ ‘ಸೆಟ್ಲ್’ ಆಗಿ ಅಪ್ಪ ಅಮ್ಮನನ್ನು ಮರೆಯಲಿಕ್ಕಿಲ್ಲವೆ ? ಎಂಬ ಪ್ರಶ್ನೆಗೂ ಸಮಾಜದಲ್ಲಿ ಉತ್ತರ ಸಿಕ್ಕಿದೆ, ಸಿಗುತ್ತಿದೆ. ಹಾಗೆ ಅವನು ಮಾಡಿದ್ದರಲ್ಲಿ ಏನೂ ತಪ್ಪಿಲ್ಲ. ಯಾಕೆಂದರೆ, ಒಂದು ಹಂತದಲ್ಲಿ ‘ನನ್ನ ಬದುಕು ನನ್ನದು’ ಎಂಬ ಅರಿವು ಎಲ್ಲರಿಗೂ ಉಂಟಾಗುತ್ತದೆ. ಕೆಲವರಿಗೆ ಅಪ್ಪ ಸತ್ತ ಮೇಲೆ ಈ ಅರಿವು ಉಂಟಾದರೆ, ಕೆಲವರಿಗೆ ಅಪ್ಪನಿರುವಾಗಲೇ ಉಂಟಾಗುತ್ತದೆ. ಹಾಗೆಯೇ ತಮ್ಮ ಮಗನ ಬಗ್ಗೆ ‘ಅವನ ಬದುಕು ಅವನದು’ ಎಂದೊಂದು ದಿನ ಅಪ್ಪ ಅಮ್ಮ ತಿಳಿದುಕೊಳ್ಳಬೇಕಾಗುತ್ತದೆ. ಮಗಳ ವಿಚಾರದಲ್ಲಿ ಕೂಡ ಹಾಗೆಯೇ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ.

ಹಣ ಪೋಲು ಮಾಡದೆ ಆರ್ಥಿಕವಾಗಿ ಮೇಲೆ ಬರಲು ಪ್ರಯತ್ನಿಸುವ, ನಗರದಲ್ಲಿ ದಿನಕ್ಕೆ ಹನ್ನೆರಡು ಗಂಟೆ ದುಡಿಯುವ ಎಂಜಿನಿಯರ್ (ತಿಂಗಳಿಗೆ ೩೦-೪೦ ಸಾವಿರ), ಹಳ್ಳಿಯಲ್ಲಿ ಆರಾಮವಾಗಿ ದಿನದಲ್ಲಿ ಎಂಟು ಗಂಟೆ ಸರ್ವಿಸ್ ಮಾಡುವ ಡಾಕ್ಟರ್ (ತಿಂಗಳಿಗೆ ೩೦-೪೦ ಸಾವಿರ), ಪಟ್ಟಣದ ಮೇಲ್-ಮಧ್ಯಮ ವರ್ಗದ ವ್ಯಾಪಾರಿ, ವಿವಿಧ ವರ್ಗದ ‘ಕಂಟ್ರಾಕ್ಟರ್’ದಾರರು (ತಿಂಗಳಿಗೆ ೪೦-೫೦ ಸಾವಿರ) ಸಾಮಾನ್ಯ ಆರಾಮದ ಸ್ಥಿತಿಯಲ್ಲಿ ದಿನದಲ್ಲಿ ಎಂಟು ಗಂಟೆ ಕೆಲಸ ಮಾಡುವ ಹೋಮ್ ರೆಸಿಡೆಂಟ್ ಬಡಗಿ, ಉಪ್ಪಾರ, ಸೆಂಟ್ರಿಂಗ್ನವನು, ಮಧ್ಯಮ ಮಟ್ಟದ ವ್ಯಾಪಾರಿ (ತಿಂಗಳಿಗೆ ೮-೯-೧೦-೧೨-೧೫ ಸಾವಿರ+) ಮುಂತಾದವರ ವಿಚಾರ ಬೇಡ. ಅವರಲ್ಲಿ ಕೆಲವರು ಅತಿಯಾಸೆಯವರು ಇರಬಹುದಾದರೂ ‘ಪಾಪ, ಬಡವರು. ಮೇಲಕ್ಕೆ ಬರಲಿ ಅಥವಾ ಇರುವಂತೆಯೇ ಆರಾಮವಾಗಿರಲಿ’ ಎಂದು ಅವರ ಪಾಡಿಗೆ ಬಿಡೋಣ.

ನಾವೀಗ ಗಂಭೀರವಾಗಿ ವಿಚಾರ ಮಾಡಬೇಕಾದ್ದು ಎಂಜಿನಿಯರ್ ಅಥವಾ ಡಾಕ್ಟರ್ ಆಗಲು ಇಂಗ್ಲಿಷ್ ಮಾಧ್ಯಮದಲ್ಲಿ ಕೂರಿಸಿ, ರೆಸಿಡೆನ್ಶಿಯಲ್ ಶಾಲೆಗಳಲ್ಲಿ ಓದಿಸಿ, ಅನಂತರ ಮಕ್ಕಳನ್ನು ಎಂಜಿನಿಯರ್ ಅಥವಾ ಡಾಕ್ಟರ್ ಮಾಡಲು ೩೦-೬೦ ಲಕ್ಷದವರೆಗೂ ಖರ್ಚು ಮಾಡುವವರ ಬಗ್ಗೆ. ಇಂಥ ತಾಯಿತಂದೆಯರಲ್ಲಿ ಮೂರು-ನಾಲ್ಕು ಎಂಜಿನಿಯರ್ ಮಕ್ಕಳು ಅಥವಾ ಡಾಕ್ಟರ್ ಮಕ್ಕಳಿರುವವರೂ ಇದ್ದಾರೆ. ಇವರಿಗೆ ಮಕ್ಕಳು ಎಂಜಿನಿಯರ್ ಅಥವಾ ಡಾಕ್ಟರ್ ಆಗಬೇಕಾದ್ದು ಶ್ರೀಮಂತರಾಗಲಿಕ್ಕಾಗಿ ಅಲ್ಲ. ಇಂಥ ಪೇರೆಂಟ್ಸ್ ವೃದ್ಧಾಪ್ಯದಲ್ಲಿ ಮತ್ತು ಇವರ ಮಕ್ಕಳು ಸುಮಾರು ನಡು ವಯಸ್ಸು ತಲಪುವಾಗ ಹಣ ಖರ್ಚು ಮಾಡಲಿಕ್ಕಾಗದೆ ತೊಳಲಾಡುವುದನ್ನು, ಖರ್ಚು ಮಾಡಲು ನಾನಾ ವಿಧದ ಅಡ್ಡದಾರಿಗೆ ಇಳಿಯುವುದನ್ನು ಕೂಡ ನೀವು ಕಾಣಬಹುದು. ಸಂಪತ್ತು ಯಾಕೆ ಬೇಕು ಎನ್ನುವುದಕ್ಕೆ ಹಲವು ಬಗೆ ಉತ್ತರಗಳು ಸಿಗಬಹುದು. ಕೆಲವರಿಗೆ ಇಳಿವಯಸ್ಸಿನಲ್ಲಿ ಕೊಚ್ಚಿಕೊಳ್ಳಲು ವಿಷಯ ಬೇಡವೆ ? ಅದಕ್ಕಾಗಿಯೇ ಅವರು ಕೋಟಿ ಕೋಟಿ ಬೆಲೆಯ ಹಲವು ಮನೆಗಳನ್ನು, ಕಟ್ಟಡಗಳನ್ನು ಎಸ್ಟೇಟುಗಳನ್ನು ಕೊಂಡಿಟ್ಟುಕೊಳ್ಳುತ್ತಾರೆ. ಇವರಲ್ಲನೇಕರಿಗೆ ತಮ್ಮ ಮಕ್ಕಳು ಮಾತ್ರವಲ್ಲ ಮೊಮ್ಮಕ್ಕಳೂ ಕೂಡ ಎಂಜಿನಿಯರ್ ಅಥವಾ ಡಾಕ್ಟರಾಗಬೇಕೆಂಬ ಬಲವಾದ ಆಸೆ ಇರುತ್ತದೆ! ಈ ಮೂಲಕ ಮೂರು ತಲೆಮಾರು ಕೂಡ ‘ನಿಜವಾದ ಶಿಕ್ಷಣ’ದಿಂದ ವಂಚಿತರಾದ ಎಪಿಕ್ಯೂರಿಯನ್ ಕುಟುಂಬಗಳಿವೆ. ‘ಶಿಕ್ಷಣದಿಂದ ವಂಚಿತ’ರಾದ ಎನ್ನುವುದರಲ್ಲಿ ಏನೂ ತಪ್ಪಿಲ್ಲ. ಯಾಕೆಂದರೆ, ವ್ಯಕ್ತಿಯನ್ನು ಎಂಜಿನಿಯರ್, ಡಾಕ್ಟರ್, ಎಂಬಿಎ, ಸಿಎ ಇತ್ಯಾದಿ ಮಾಡುವ ಕೋರ್ಸ್ ಕೇವಲ ವೃತ್ತಿ ತರಬೇತಿ. ಅದರೊಳಗೆ ‘ಮಾನವ ಶಿಕ್ಷಣ’ ಎಂಬುದು ಐದು ಪರ್ಸೆಂಟ್ ಕೂಡ ಇಲ್ಲ! ಶಿಕ್ಷಣ ಬೇಕೆಂದರೆ ವ್ಯಕ್ತಿಗೆ ಎಂಜಿನಿಯರ್, ಡಾಕ್ಟರ್, ಎಂಬಿಎ, ಸಿಎ ಇತ್ಯಾದಿ ಆಗುವ ಕಾಯಕ ಅಡ್ಡಿಯಾಗುವುದಿಲ್ಲ ನಿಜ. ಅದನ್ನವನು ಹೇಗೂ ಪಡೆದುಕೊಳ್ಳಬಹುದು. ಆದರೆ ಅದಕ್ಕೆ ಅವಕಾಶವಾದರೂ ಎಲ್ಲಿದೆ ? ಮನಸ್ಸು ಇದೆಯೆಂದುಕೊಂಡರೂ ಅದಕ್ಕೊಂದು ಮಾದರಿಯಾಗುವ ವ್ಯವಸ್ಥೆ ಯಾವ ಕಾಲೇಜಿನಲ್ಲಿದೆ ? ಎಂಜಿನಿಯರ್ ಅಥವಾ ಡಾಕ್ಟರ್ ಆಗುವ ವ್ಯಕ್ತಿ ತನ್ನ ನಿಜವಾದ ಮಾತೃಭಾಷೆಯನ್ನು ಮರೆಯಲೇಬೇಕು, ಮಾತೃಭಾಷೆಯಾಗಿ ಇಂಗ್ಲಿಷನ್ನು ಬಳಸಬೇಕು ಎನ್ನುವ ವಿಚಾರದಲ್ಲಿ ಎರಡು ಮಾತಿಲ್ಲ. ಮಾತನ್ನು ಜ್ಯೋತಿ ಅಥವಾ ಮುತ್ತು ಮಾಡಿಕೊಂಡಿರದ, ಪುಸ್ತಕ ಮುಟ್ಟದ, ಪರಿಸರದ ಬಗ್ಗೆ, ಇತರರ ಮನಸ್ಸಿನ ಬಗ್ಗೆ, ಸಮಾಜದ ಬಗ್ಗೆ, ಪ್ರಪಂಚದ ಬಗ್ಗೆ – ಹಾಗೆಯೇ ನೂರಾರು ವಿಷಯಗಳ ಬಗ್ಗೆ ಏನೇನೂ ತಿಳಿದಿರದ ದೊಡ್ಡ ಸಂಬಳದ ದೊಡ್ಡ ಕಾರ್ಮಿಕರನ್ನು ಸೃಷ್ಟಿಸುವುದಷ್ಟೇ ಇಂದಿನ ‘ಮಹಾ ಶಿಕ್ಷಣ’ದ ಕೆಲಸ. ಎಷ್ಟೋ ವಿದ್ಯಾರ್ಥಿಗಳಿಗೆ ತಾವು ಕಲಿಯುತ್ತಿರುವ ಮೆಡಿಸಿನ್ ಮತ್ತು ಎಂಜಿನಿಯರಿಂಗ್ ಅಂದರೆ ವಿಜ್ಞಾನ ಎಂದು ಕೂಡ ಗೊತ್ತಿಲ್ಲ! ಶಿಕ್ಷಣ ಬೇಕು ಎಂಬ ಬಯಕೆಯಿರುವವನು ಜಗತ್ತಿನ ಬಗ್ಗೆ, ಪರಿಸರದ ಬಗ್ಗೆ, ಸಮಾಜದ ಬಗ್ಗೆ ಬೇರೆ ಓದು ಮತ್ತು ಅಧ್ಯಯನದಿಂದ ತಿಳಿದುಕೊಳ್ಳಬೇಕು, ಸುಸಂಸ್ಕೃತನಾಗಿರಬೇಕು ಎಂದಿರುವವನು ಅದನ್ನೆಲ್ಲ ಹೊರಗಡೆ ಕಲಿತುಕೊಳ್ಳಬೇಕು. ಹಾಗಿದೆ ಇವತ್ತಿನ ಔದ್ಯೋಗಿಕ ತಾಂತ್ರಿಕ ಶಿಕ್ಷಣ. ಅದು ಎಷ್ಟು ಸಮೃದ್ಧವಾಗಿದ್ದರೂ ಅದರೊಳಗೆ ಹೃದಯವೆನ್ನುವುದು ಇಲ್ಲ.

ಇವತ್ತು ಕಿಡ್ನಿ, ಹಾರ್ಟ್, ಲಿವರನ್ನು ಉಳಿಸಿಕೊಳ್ಳಲು ಮತ್ತು ಕೊಂಡುಕೊಳ್ಳಲು ಹಣ ಶೇಖರಿಸಿಡುವ ಶ್ರೀಮಂತರಿದ್ದಾರೆ. ಹೇಗಾದರೂ ಮಾಡಿ ಮತ್ತೆ ಮತ್ತೆ ಐಸಿಯು ವಾಸ ಮಾಡಿಕೊಂಡು ಸಾಧ್ಯವಾದಷ್ಟು ಹೆಚ್ಚು ಬದುಕಬೇಕೆಂಬ ಆಸೆಯಿಲ್ಲದವರಿದ್ದಾರೆಯೆ ? ಬಡವರು ಆರಾಮವಾಗಿ ಸಾಯುತ್ತಾರೆ ಎನ್ನುವುದು ಬೇರೆಯೇ ವಿಚಾರ.

ಸಂಪತ್ತು ಒಂದು ಹಂತದವರೆಗೆ ಮಾತ್ರ ನಮ್ಮ ಗುಲಾಮ. ಅನಂತರ ನಾವು ಅದರ

ಗುಲಾಮರು. ಕೆಲವು ವರ್ತಕ ಸಮುದಾಯದಲ್ಲಿ ದೀಪಾವಳಿಯ ದಿನ ಹಣವನ್ನು ನೆಲದ ಮೇಲೆ ಹಾಕಿ ಅದರ ಮೇಲೆ ಕುಣಿಯುವ ಸಂಪ್ರದಾಯವಿದೆಯಂತೆ. ಬಹುಶಃ ಗುಟ್ಟಾಗಿ ಕುಣಿಯುತ್ತಾರೇನೊ. ಯಾಕೆಂದರೆ, ಉಳಿದ ೩೬೪ ದಿನ ಹಣ ಎಲ್ಲರಿಗೂ ಕಾಣುವಂತೆ ಅವರ ಮೇಲೆ ಕುಣಿಯುತ್ತದೆ! ಅದರ ಕುಣಿತದ ರೀತಿಯನ್ನು ಬೇಂದ್ರೆ 'ಕುರುಡು ಕಾಂಚಣ' ಕುಣಿಯುತಲಿತ್ತು ಎನ್ನುವ ಪದ್ಯದಲ್ಲಿ ಮನಮುಟ್ಟುವಂತೆ ವರ್ಣಿಸಿದ್ದಾರೆ.

ಕೋಟಿಗಟ್ಟಲೆ ಸಂಪತ್ತು ಇರುವ, ಮಕ್ಕಳು ಹಣ ಗಳಿಸಲಿಕ್ಕಾಗಿ ಎಂಜಿನಿಯರ್, ಡಾಕ್ಟರ್ ಆಗಬೇಕಾದ ಅಗತ್ಯವಿಲ್ಲದ 'ಪರಿಪೂರ್ಣ ಶ್ರೀಮಂತ'ರ ಕೈಯಲ್ಲಿ ಇವತ್ತು ನಮ್ಮ ಸಮಾಜದ ಉದ್ಧಾರದ ಕೀಲಿಕೈ ಇದೆ ಎಂದರೆ, ಆ ಮಾತಿಗೆ ವಿವರಣೆ ನೀಡಬೇಕಾಗುತ್ತದೆ. ಇವರ ಮಕ್ಕಳು ಸ್ವಾಭಾವಿಕವಾಗಿಯೇ ತೊಂಬತ್ತು ಮತ್ತು ಅದಕ್ಕಿಂತ ಹೆಚ್ಚು ಪರ್ಸೆಂಟ್ ಮಾರ್ಕ್ ಪಡೆಯುತ್ತಾರೆ. ಈ ವರ್ಗದ ಅಪ್ಪ ಅಮ್ಮಂದಿರಲ್ಲಿ ಹೆಚ್ಚಿನವರು ತಮ್ಮ ಮಗ ಎಂಜಿನಿಯರ್ ಅಥವಾ ಡಾಕ್ಟರಾಗಬೇಕೆಂದು ಬಯಸಲು ಒಂದೇ ಕಾರಣ, ಉಳಿದ ಎಲ್ಲಾ ವೃತ್ತಿ ಅಥವಾ ಉದ್ಯೋಗ ಅದಕ್ಕಿಂತ ಕೀಳು ಎಂಬ ನಂಬಿಕೆ. ಅದಕ್ಕೆ ತಳಕುಹಾಕಿಕೊಂಡಿರುವುದು ತಮ್ಮ ಘನತೆಗೆ ಅಥವಾ ಪ್ರತಿಷ್ಠೆಗೆ ಮಕ್ಕಳು ಎಂಜಿನಿಯರ್ ಅಥವಾ ಡಾಕ್ಟರ್ ಆಗಲೇಬೇಕು ಎಂಬ ಇನ್ನೊಂದು ನಂಬಿಕೆ. ಇಂಥವರ ಬಳಗ ಸಾಕಷ್ಟು ದೊಡ್ಡದಿದೆ. ಒಂದು ವೇಳೆ, ಯಾರಾದರೊಬ್ಬರು ತೊಂಬತ್ತು ಪರ್ಸೆಂಟ್ ಪಡೆದ ತನ್ನ ಮಗನನ್ನು ಎಂಜಿನಿಯರಿಂಗಿಗೆ ಅಥವಾ ಮೆಡಿಕಲ್‌ಗೆ ಕಳಿಸಲಿಲ್ಲವೆಂದಾದರೆ, ''ಯಾಕೆ, ಯಾಕೆ'' ಎಂದು ನೂರು ಮಂದಿ ಕೇಳುತ್ತಾರೆ. ಈ ನೂರು ಮಂದಿಯೂ ಪರಮ ಅಜ್ಞಾನಿಗಳು-ಅವಿದ್ಯಾವಂತರು ಎಂದು ಅರ್ಥ ಮಾಡಿಕೊಳ್ಳುವವರು ಯಾರೋ ನೂರಕ್ಕೊಬ್ಬರು. ಇಂಥವರಿಂದ ಸಮಾಜಕ್ಕೆ ಏನೂ ಸಿಗುವುದಿಲ್ಲ. ಹೆಚ್ಚೆಂದರೆ ಹತ್ತಿರದ ಭವಿಷ್ಯದಲ್ಲಿ 'ಎಂಜಿನಿಯರ್ ಜಾತಿ' ಎಂಬ ವೈವಾಹಿಕ ಸಂಬಂಧದ ವಿಷಯದಲ್ಲಿ ಬಹಳ ಕಟ್ಟುನಿಟ್ಟಿನ ಒಂದು ಹೊಸ ಜಾತಿ ಸಿಗಬಹುದು!

'ಪರಿಪೂರ್ಣ ಶ್ರೀಮಂತ'ರ ಕೈಯಲ್ಲಿ ಇವತ್ತು ನಮ್ಮ ಸಮಾಜದ ಉದ್ಧಾರದ ಕೀಲಿಕೈ ಇದೆ ಎಂಬ ಮಾತಿನ ಆಶಯ ಇಷ್ಟೆ. ಇವರು ತಮ್ಮ ತೊಂಬತ್ತು ಪರ್ಸೆಂಟ್ ಅಂಕ ಪಡೆದ ಮಕ್ಕಳಿಗೆ, ''ಶಾಲೆ ಕಾಲೇಜುಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರಾಗಿ, ವಿಜ್ಞಾನಿಗಳಾಗಿ, ಉತ್ತಮ ಆಡಳಿತಗಾರರಾಗಿ'' ಎಂದು ಹೇಳಬೇಕು. ಅವರವರ ಆಯ್ಕೆಗೆ ಬಿಟ್ಟರೆ ಕೆಲವರು ಆಗಿಯೇ ಆಗುತ್ತಾರೆ. ಕೆಲವರು ಸಂಗೀತಗಾರರಾಗಬಹುದು. ಕೆಲವರು ಲೇಖಕರಾಗಬಹುದು. ಕೆಲವರು ಶ್ರೇಷ್ಠ ಚಲನಚಿತ್ರ ನಿರ್ದೇಶಕರಾಗಬಹುದು. ಕೆಲವರು ಹೊಸ ಬಗೆಯ ಶಾಲೆ ಕಾಲೇಜುಗಳನ್ನು ಕಟ್ಟಬಹುದು. ಕೆಲವರು ಸಮಾಜಸೇವಕರಾಗ ಬಹುದು. ಬಹಳ ಮಂದಿ ಎಂಜಿನಿಯರಾದ ಬಳಿಕವೂ ಇಂಥದೆಲ್ಲ ಆಗಿದ್ದಾರೆ. ಅವರಿಂದಾಗಿ ಸಮಾಜ ಶ್ರೀಮಂತವಾಗಿದೆ. ನಮಗಿಂಥವರು ಬೇಕು, ದೊಡ್ಡ ಸಂಖ್ಯೆಯಲ್ಲಿ ಬೇಕು. ಸಮಾಜದ ಭವಿಷ್ಯವಿರುವುದು ಇವರ ಕೈಯಲ್ಲಿ. ಎಷ್ಟು ಪ್ರತಿಭಾವಂತನಾದರೂ ಬಡವನಿಂದ ಅದು ಕಷ್ಟ ಸಾಧ್ಯ. ಯಾಕೆಂದರೆ, ಸಮಾಜದ ಉದ್ಧಾರಕ್ಕೆ ಹಣ ಅಗತ್ಯ. ಸ್ವಾತಂತ್ರ್ಯದ ಹೋರಾಟಕ್ಕೆ ಗಾಂಧೀಜಿಗೆ ಕೂಡ ಕೇವಲ ಜನಶಕ್ತಿಯಲ್ಲ, ಮಹಾ ಶ್ರೀಮಂತರ ಸಹಕಾರದ ಅಗತ್ಯ ಕೂಡ ಇತ್ತು.

ತಾನೊಬ್ಬನೇ ಶ್ರೀಮಂತನಾಗಬೇಕು ಎನ್ನುವ ಆಸೆ ಮತ್ತು ಕೃಪಣತೆ ತರುವುದು ಒಂದಲ್ಲ ಒಂದು ದಿನ ದುಃಖವನ್ನಲ್ಲದೆ ಸಂತೋಷವನ್ನಲ್ಲ. ಸಾವಿರಾರು ಗುಡಿಸಲುಗಳ ನಡುವೆ ಇರುವ ಮಹಡಿ ಮನೆ ಯಾವ ಕೋನದಿಂದ ನೋಡಿದರೂ ಚೆಂದ ಕಾಣುವುದಿಲ್ಲ.

ಗುಡಿಸಲುಗಳನ್ನು ಮನೆಗಳಾಗಿ ಪರಿವರ್ತಿಸುವ ಸಾಮರ್ಥ್ಯ ಗುಡಿಸಲುಗಳಲ್ಲಿರುವವರಿಗಿಲ್ಲ. ಇದ್ದರೂ ಸಾವಿರದಲ್ಲಿ ಯಾರೋ ಒಬ್ಬಿಬ್ಬರಿಗಿರಬಹುದು. ಆದರೆ ಮಹಡಿ ಮನೆಯಲ್ಲಿರುವ ಮಕ್ಕಳಲ್ಲಿ ನೂರರಲ್ಲಿ ತೊಂಬತ್ತು ಮಂದಿಗೆ ಅಂಥ ಸಾಮರ್ಥ್ಯ ಇದೆ. ಆ ಸಾಮರ್ಥ್ಯದ ಅರಿವು ಮಕ್ಕಳಿಗೆ ಇರುವುದಿಲ್ಲ. ಆ ಅರಿವನ್ನು ನಮ್ಮ ಮಕ್ಕಳಲ್ಲಿ ಮೂಡಿಸಬೇಕಾದುದು ಅತಿ ಮುಖ್ಯ. ಯಾಕೆಂದರೆ, ಸಾಮಾಜಿಕ ಅಸುರಕ್ಷಿತತೆಯ ಲಕ್ಷಣಗಳು ಈಗಾಗಲೇ ನಗರದ ಬೀದಿಗಳಲ್ಲಿ ಕಾಣಿಸಿಕೊಂಡಿರುವುದನ್ನು ನಾವು ಗಮನಿಸಬಹುದು. ವರ್ತಮಾನದಲ್ಲೂ ಭವಿಷ್ಯದಲ್ಲೂ ಸಾಮಾಜಿಕ ಸುರಕ್ಷಿತತೆ ಬೇಕೆಂದಾದರೆ ಅದಕ್ಕೆ ಬೇಕಾದ ಪ್ರಯತ್ನ ನಮ್ಮ ನಮ್ಮ ಮನೆಗಳಲ್ಲೇ ಆರಂಭವಾಗಬೇಕು. ಶಿಕ್ಷಣದ ಅರ್ಥ ಮತ್ತು ವ್ಯಾಪ್ತಿ ಇನ್ನಷ್ಟು ವಿಸ್ತಾರವಾಗಬೇಕು. ಮೊದಲು ಮನೆ, ಅಲ್ಲಿಂದ ಶಾಲೆ, ಅಲ್ಲಿಂದ ಕಾಲೇಜು. ಇದೊಂದೇ ದಾರಿ, ಸ್ವಂತ ಬದುಕಿನ ಸುರಕ್ಷಿತತೆಗೆ ಮಾತ್ರವಲ್ಲ, ಸಾಮಾಜಿಕ ಸುರಕ್ಷಿತತೆಗೂ.

ಕಲಿಕೆಗೆ ಕೊನೆಯೆಂಬುದಿಲ್ಲ. ಕಲಿಯಬೇಕಾದ್ದು ಮಕ್ಕಳು ಮಾತ್ರ ಅಲ್ಲ. ಪಾಲಕರು ಕೂಡ ಕಲಿಯಬೇಕು. ಕಲಿಯದೆ, ಎಲ್ಲದರಲ್ಲಿಯೂ ಅಜ್ಞಾನಿಗಳಾಗಿ ಉಳಿದು ತಮ್ಮ ಮಕ್ಕಳ ಮುಂದೆ ಬೆದರಿ ಬಾಯಿ ಮುಚ್ಚಿ ಕುಳಿತುಕೊಳ್ಳುವ ಪರಿಸ್ಥಿತಿ ಎಷ್ಟೋ ತಾಯಿತಂದೆಯರಿಗೆ ಉಂಟಾಗುತ್ತದೆ! ಹೆಚ್ಚು ಅಂಕಕ್ಕಾಗಿ ಮತ್ತು ರ್‍ಯಾಂಕಿಗಾಗಿ ಹಟ ಹಿಡಿಯುವ ಪಾಲಕರು ನಿರಂತರ ಅಸುಖಿಗಳು. ಇತರ ಮಕ್ಕಳಿಗಿಂತ ತನ್ನ ಮಗ/ಮಗಳು ಹೆಚ್ಚು ಅಂಕ ಗಳಿಸಬೇಕು ಎನ್ನುವ ಬಕಧ್ಯಾನ ಮಕ್ಕಳ ಆರೋಗ್ಯಕ್ಕೂ ಒಳ್ಳೆಯದಲ್ಲ, ಮಕ್ಕಳ ಅಪ್ಪ ಅಮ್ಮನ ಆರೋಗ್ಯಕ್ಕೂ ಒಳ್ಳೆಯದಲ್ಲ. ಕಲಿಕೆಯಲ್ಲಿ ಸ್ಪರ್ಧೆ ತನ್ನ ಒಳಗೆ ಇರಬೇಕು. 'ನಿನ್ನೆಗಿಂತ ಇವತ್ತು ಚೆನ್ನಾಗಿ ಬದುಕಬೇಕು, ಇವತ್ತಿಗಿಂತ ನಾಳೆ ಚೆನ್ನಾಗಿ ಬದುಕಬೇಕು' ಎನ್ನುವ ಸ್ಪರ್ಧೆ ಹೆಚ್ಚು ತಿಳಿದವನಾಗಲು, ಹೆಚ್ಚು ಒಳ್ಳೆಯವನಾಗಲು, ಹೆಚ್ಚು ಅಂಕ ಪಡೆಯಲು, ತಪ್ಪುಗಳನ್ನು ತಿದ್ದಿಕೊಳ್ಳಲು, ಅನ್ಯಾಯ ಮಾಡದಿರಲು - ಎಲ್ಲದಕ್ಕೂ, ಎಲ್ಲ ಪ್ರಾಯದವರಿಗೂ ಸಾಕು.

ಬುದ್ಧಿವಂತರಾದ, ಮೇಧಾವಿಗಳಾದ ಮಕ್ಕಳ ಮುಂದೆ ಹೆಚ್ಚು ಓದದ, ಅಥವಾ ಅಕ್ಷರ ಜ್ಞಾನವಿಲ್ಲದ ತಾಯಿತಂದೆಯರು, ಕೀಳರಿಮೆ ಬೆಳೆಸಿಕೊಳ್ಳದೆ ಆರಾಮವಾಗಿರಬೇಕಾದರೆ, ಒಂದು ಉಪಾಯವಿದೆ.

ನಿಮ್ಮ ಮಕ್ಕಳೊಡನೆ ನಿರಂತರ ಸಂಪರ್ಕದಲ್ಲಿರಿ. ಅವರೊಡನೆ ಜಗಳ ಆಡಬೇಡಿ. ಮಾತು ಅಗತ್ಯ; ಆದರೆ ಅತಿ ಮಾತು, ವಿವೇಚನಾರಹಿತ ಮಾತು ಬಹಳ ಕೆಟ್ಟದು. ಮಕ್ಕಳ ಜೊತೆ ವಾಗ್ಯುದ್ಧ ನಡೆಸಬೇಡಿ. ನೆನಪಿನಲ್ಲಿಡಿ, ಹಾಗೆ ಮಾಡಿದರೆ, ಯಾವಾಗಲೂ ನೀವೇ ಸೋಲುತ್ತೀರಿ. ನಿಮ್ಮ ಮಗನಿಗೆ ಅಥವಾ ಮಗಳಿಗೆ ಸದಾ ಕಾಲ ಬೇಕಾದ್ದು ನಿಮ್ಮ ಪ್ರೀತಿ, ವಿಶ್ವಾಸ ಮತ್ತು ನೀವು ನೀಡುವ ಧೈರ್ಯ ಮಾತ್ರ. ಆದ್ದರಿಂದ ಅವರೊಡನೆ ಮಾತಾಡಿ, ಸ್ನೇಹಿತರಂತೆ ಮಾತಾಡಿ. ದಿನಕ್ಕೆ ಕನಿಷ್ಠ ಅರ್ಧ ಗಂಟೆಯಾದರೂ ಮಾತಾಡಿ. ಅವನ ಅಥವಾ ಅವಳ ಓದು, ಬದುಕು ಹೇಗೆ ನಡೆಯುತ್ತಿದೆ ಎಂದು ತಿಳಿದುಕೊಳ್ಳಿ. ನಿಮ್ಮ ಓದು ಮತ್ತು ಬದುಕು ಹೇಗೆ ನಡೆಯುತ್ತಿದೆ ಎಂದು ಕೂಡ ಹೇಳಿ. ಇದಕ್ಕಿಂತ ದೊಡ್ಡ ಶಿಕ್ಷಣ ಬೇರೆ ಇಲ್ಲ. ಅದು ಕುಟುಂಬವನ್ನು ಮಾತ್ರವಲ್ಲ ದೇಶವನ್ನೂ ಕೂಡ ಉಳಿಸುತ್ತದೆ.

**ಕೆ. ಟಿ. ಗಟ್ಟಿ**
'ವನಶ್ರೀ', ಉಜಿರೆ
ದಕ್ಷಿಣ ಕನ್ನಡ ಜಿಲ್ಲೆ - ೫೭೪ ೨೪೦



## ದ್ವಂದ್ವ

ಮನದ ಭಾವಗಳಲ್ಲಿ
ಸುಳಿದ ಪ್ರೇಮದ
ರೂಹು
ಒಮ್ಮೊಮ್ಮೆ ಮುಗಿಲು
ಮತ್ತೊಮ್ಮೆ
ಭುಗಿಲು

**ಹೊಸಕೊಪ್ಪ ಶ್ರೀಧರ**
ಆಲೂರು - ಹೊಸಕೊಪ್ಪ
ತೀರ್ಥಹಳ್ಳಿ ತಾ|| - ೫೭೭೪೩೨
ಶಿವಮೊಗ್ಗ ಜಿಲ್ಲೆ

## ಇರಾಕ್‌ಯುದ್ಧದ ಹತ್ತನೇ ವರ್ಷ - ಮರೆಯಲಾಗದ ಹತ್ಯಾಕಾಂಡ

ವಿಯೆಟ್ನಾಮ್ ಯುದ್ಧದಲ್ಲಿ ಅಮೆರಿಕ ಬಳಸಿದ ರಾಸಾಯನಿಕ ಅಸ್ತ್ರಗಳ ದುಷ್ಪರಿಣಾಮ ಈಗಲೂ ಕಂಡುಬರುತ್ತಿದೆ. ಸುಮಾರು ಆರೂವರೆ ದಶಕಗಳು ಕಳೆದಿದ್ದರೂ ಹಿರೋಷಿಮಾ ನಾಗಸಾಕಿಗಳ ಮೇಲೆ ಸುರಿದ ಪರಮಾಣು ಬಾಂಬ್‌ಗಳ ದುಷ್ಪರಿಣಾಮ ಇನ್ನೂ ಮಾಸಿಲ್ಲ. ಅಂಥದ್ದರಲ್ಲಿ ಇರಾಕಿನ ದಾಳಿಯದು ಇನ್ನೂ ಹತ್ತುವರ್ಷ ಹಿಂದಿನದು. ಇರಾಕ್ ಯುದ್ಧ ವಿಯೆಟ್ನಾಮ್‌ನಂತೆ ದೀರ್ಘ ಕಾಲದ್ದೇನಲ್ಲ, ಅಥವಾ ಜಪಾನಿನ ನಗರಗಳ ಮೇಲಣ ಪ್ರಯೋಗಶಾಲೆಯೇನಲ್ಲ, ಆದರೂ ಆಗಿರುವ ಅನಾಹುತ ಮಾತ್ರ ಅದೇ ಮಟ್ಟದ್ದಾಗಿದೆ. ಅಮೆರಿಕ ಇರಾಕಿನ ಮೇಲೆ ದಾಳಿ ನಡೆಸಿ (ಮಾರ್ಚ್ ೧೯, ೨೦೦೩) ಹತ್ತು ವರ್ಷ. ಹೊಸದಾಗಿ ಹುಟ್ಟುತ್ತಿರುವ ಶಿಶುಗಳ ಮೇಲೆ ಅದರ ಪರಿಣಾಮ ಗೋಚರವಾಗುತ್ತಿದೆ. ಇರಾಕಿನ ಪ್ರಮುಖ ನಗರಗಳಾದ ಬಾಸ್ರಾ, ಫಲ್ಲೂಜ ನಗರಗಳಲ್ಲಿನ ನವಜಾತ ಶಿಶುಗಳಲ್ಲಿ ಅರ್ಧದಷ್ಟು ನ್ಯೂನತೆಯಿಂದ ಕೂಡಿವೆ. ಈ ಯುದ್ಧದಲ್ಲಿ ಅಮೆರಿಕ ಬಳಸಿದ ಮಾರಕಾಸ್ತ್ರಗಳಲ್ಲಿ ಇದ್ದ ದುರ್ಬಲ ಯುರೇನಿಯಮ್ ಇದಕ್ಕೆ ಕಾರಣ ಎಂದು ಜರ್ಮನಿಯ ವೈದ್ಯಕೀಯ ಬುಲೆಟಿನ್ ಒಂದು ಅಭಿಪ್ರಾಯಪಟ್ಟಿದೆ. ಅಮೆರಿಕ ಉಪಯೋಗಿಸಿರುವುದು ಸುಮಾರು ೨೦೦೦ ಟನ್ ದುರ್ಬಲ ಯುರೇನಿಯಮ್ ಎಂದು ಅಂದಾಜು ಮಾಡಲಾಗಿದೆ. ಹಾಗಾಗಿ, ೨೦೦೭ರಲ್ಲಿ ಜನಿಸಿದ ಮಕ್ಕಳಲ್ಲಿ ಲುಕೇಮಿಯ (ರಕ್ತದ ಕ್ಯಾನ್ಸರ್) ಪ್ರಮಾಣ ಹೆಚ್ಚಾಗಿದೆ. ೧೯೯೩ರಲ್ಲಿ ಈ ಪ್ರಕರಣಗಳು ೧೦೦,೦೦೦ ಮಕ್ಕಳಲ್ಲಿ ೨.೬ ಇದ್ದುದು, ೨೦೦೬ರಲ್ಲಿ ೧೨.೨ಕ್ಕೆ ಹೆಚ್ಚಿದೆ. ೧೯೯೧ರಲ್ಲಿ ಮೊದಲನೆ ಇರಾಕ್ ಯುದ್ಧದಲ್ಲೇ ೪೦೦ ಟನ್ ದುರ್ಬಲ ಯುರೇನಿಯಮ್ ಬಳಸಲಾಗಿತ್ತು ಎಂಬುದನ್ನು ನೆನಪು ಮಾಡಿಕೊಳ್ಳಬೇಕು.

ಈ ಯುದ್ಧದಲ್ಲಿ ಮಡಿದವರ ಸಂಖ್ಯೆ ಸುಮಾರು ಹತ್ತು ಲಕ್ಷ ಮಂದಿ. ಹೆಚ್ಚು ಕಡಿಮೆ ನಲವತ್ತು ಲಕ್ಷ ಮಂದಿ ಮನೆಮಠ ಕಳೆದುಕೊಂಡರು. ಈಗಲೂ ಹತ್ತುಲಕ್ಷ ಮಂದಿ ನಿರಾಶ್ರಿತರಿದ್ದಾರೆ. ಇರಾಕಿನಲ್ಲಿ ವಾಸವಾಗಿದ್ದ ಹದಿನೈದು ಲಕ್ಷ ಕ್ರೈಸ್ತರ ಪೈಕಿ ಈಗ ಉಳಿದಿರುವುದು ೨೦೦,೦೦೦ ಮಂದಿ ಮಾತ್ರ. ಉಳಿದವರು ಪರಾರಿಯಾಗಿದ್ದಾರೆ ಇಲ್ಲವೇ ಅಸುನೀಗಿದ್ದಾರೆ. ಇರಾಕಿನ ಮೇಲೆ ದಾಳಿ ನಡೆಸುವುದಕ್ಕೆ ಮುನ್ನ, ಅಂದರೆ ೧೯೯೧ರ ನಂತರ ವಿಧಿಸಲಾಗಿದ್ದ ಆರ್ಥಿಕ ದಿಗ್ಬಂಧನದ ಪರಿಣಾಮವಾಗಿ ೫೦೦,೦೦೦ ಮಕ್ಕಳು ಅಸುನೀಗಿದ್ದಾರೆಂದು ವಿಶ್ವಸಂಸ್ಥೆಯ ಅಂಗಸಂಸ್ಥೆ ಯೂನಿಸೆಫ್ ಅಂದಾಜು ಮಾಡಿದೆ. ವಿಶ್ವಸಂಸ್ಥೆಯ ಬೇರೆ ಬೇರೆ ಏಜೆನ್ಸಿಗಳು ಮತ್ತು ಇತರ ಅಂತರರಾಷ್ಟ್ರೀಯ ಸಂಸ್ಥೆಗಳ ಪ್ರಕಾರ ಆರ್ಥಿಕ ದಿಗ್ಬಂಧನ ಅವಧಿಯಲ್ಲಿ ಹತ್ತು ಲಕ್ಷಕ್ಕೂ ಹೆಚ್ಚು ಮಂದಿ ಹತರಾಗಿದ್ದಾರೆ. ೨೦೦೩ರಿಂದ ೨೦೦೯ರವರೆಗೆ ಅಮೆರಿಕದ ಆಕ್ರಮಣದ ಅವಧಿಯಲ್ಲಿ ಹತ್ತು ಲಕ್ಷಕ್ಕೂ ಹೆಚ್ಚು ಮಂದಿ ನಾಗರಿಕರು, ಮುಖ್ಯವಾಗಿ ಮಕ್ಕಳು ಮಡಿದಿದ್ದಾರೆಂದು 'ಲಾನ್ಸೆಟ್' ವೈದ್ಯಕೀಯ ನಿಯತಕಾಲಿಕೆ ಅಂದಾಜು ಮಾಡಿದೆ. ಇರಾಕಿ ಸಚಿವಾಲಯದ ಪ್ರಕಾರ ಹೆಚ್ಚು ಕಡಿಮೆ ೪.೫ ದಶಲಕ್ಷ ಮಕ್ಕಳು ಅನಾಥರಾಗಿದ್ದಾರೆ. ಇವರ ಪೈಕಿ ಶೇಕಡ ೭೦ರಷ್ಟು ಮಕ್ಕಳು ತಮ್ಮ ತಂದೆತಾಯಿಗಳನ್ನು ಕಳೆದುಕೊಂಡಿದ್ದಾರೆ. ಈ ಅಂಕಿಅಂಶಗಳನ್ನೆಲ್ಲ ಗಮನಿಸಿದರೆ ಇರಾಕಿ ಯುದ್ಧದಲ್ಲಿ ಎಂಥ ನರಹತ್ಯೆ ನಡೆದಿದೆ ಎಂಬುದು ವೇದ್ಯವಾಗುತ್ತದೆ.

ಇಷ್ಟೆಲ್ಲ ಅನಾಹುತಗಳಾಗಿದ್ದರೂ ಪಾತಕಿಗಳಾದ ಯುದ್ಧ ಪಿಪಾಸು ಜಾರ್ಜ್ ಬುಷ್ ಮತ್ತು ಟೋನಿ ಬ್ಲೇರ್ ಆರಾಮವಾಗಿದ್ದಾರೆ. ಯುದ್ಧಾಪರಾಧಗಳಿಗಾಗಿ ಇವರಿಬ್ಬರೂ ನ್ಯಾಯವಾಗಿ ವಿಚಾರಣೆಗೆ ಗುರಿಯಾಗಬೇಕಾಗಿತ್ತು, ಆದರೆ ನ್ಯಾಯ ಎಲ್ಲಿದೆ? ಇರಾಕಿನಿಂದ ಅಮೆರಿಕದ ಸೇನೆ ಹೆಸರಿಗೆ ವಾಪಸ್ಸಾಗಿದೆ. ಆದರೂ ಸಾಕಷ್ಟು ಅಮೆರಿಕನ್ ಸೈನಿಕರು, ಬಾಡಿಗೆ ಸೈನಿಕರು ಅಮೆರಿಕನ್ ಕಂಪನಿಗಳ ರಕ್ಷಣೆಗೆ ಇದ್ದಾರೆ. ಅಮೆರಿಕದ ರಾಯಭಾರಿ ಕಚೇರಿಯ ರಕ್ಷಣೆಗೇ ೧೬,೦೦೦ ಮಂದಿ ಅಮೆರಿಕದ ಯೋಧರಿದ್ದಾರೆ. ಯುದ್ಧ ಮತ್ತು ಅದಕ್ಕೂ ಮೊದಲು ಆರ್ಥಿಕ ದಿಗ್ಬಂಧನದಿಂದ ಜರ್ಜರಿತಗೊಂಡಿರುವ ಇರಾಕ್ ಸದ್ಯದಲ್ಲೇನೂ ಚೇತರಿಸಿಕೊಳ್ಳುವಂತಿಲ್ಲ. ದೇಶ ಛಿದ್ರಗೊಳ್ಳುವ ಸ್ಥಿತಿಯಲ್ಲಿದೆ. ಕುರ್ದಿಷ್, ಸುನ್ನಿ, ಷಿಯಾ ಪಂಗಡಗಳ ನಡುವಣ ವೈಷಮ್ಯ ತಾರಕಕ್ಕೇರಿದೆ. ಸದ್ದಾಮ್ ಹುಸೇನನ ಆಡಳಿತದಲ್ಲಿ ಇಲ್ಲದಿದ್ದ ಭಯೋತ್ಪಾದನೆ ಈಗ ವಿಪರೀತವಾಗಿ ಹೆಚ್ಚಾಗಿದೆ. ಆತ್ಮಾಹುತಿ ಬಾಂಬುದಾಳಿಗಳು ದಿನಂಪ್ರತಿ ನಡೆಯತೊಡಗಿವೆ. ಸದ್ದಾಮ್ ಹುಸೇನನ ಇರಾಕಿನಲ್ಲಿ ಅಮೆರಿಕಕ್ಕೆ ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನು ಏನೂ ಪತ್ತೆಯಾಗಲಿಲ್ಲ, ಆದರೆ ಇರಾಕಿ ಜನಸಮೂಹಗಳ ಸರ್ವನಾಶವಂತೂ ಆಯಿತು.

## ಭಾರತ - ಚೀಣಾ ಸಂಬಂಧ ಅನಗತ್ಯ ಕಿರಿಕಿರಿ ನಿಲ್ಲಲಿ

ಕೆಲವು ವಾರಗಳ ಹಿಂದೆ ಭಾರತ-ಚೀಣಾ ಗಡಿಯಲ್ಲಿ ಭುಗಿಲೆದ್ದ ಅತಿಕ್ರಮಣ ವಿಪರೀತದ ಮಟ್ಟಕ್ಕೆ ಹೋಗಿತ್ತು. ಲಡಾಕ್ ಪ್ರದೇಶದಲ್ಲಿ ಚೀಣೀ ಗಡಿಸೇನೆ ಭಾರತದ ನೆಲ ಪ್ರವೇಶಿಸಿ ಗುಡಾರಗಳನ್ನು ಸ್ಥಾಪಿಸಿಕೊಂಡಿದ್ದುವು. ಪರಿಸ್ಥಿತಿ ಆಸ್ಫೋಟಕವಾಗಿತ್ತು. ಮಾಧ್ಯಮಗಳಲ್ಲಿ ಪ್ರಕಟಗೊಂಡ ಆರ್ಭಟಗಳು, ಚರ್ಚೆ, ವಾದವಿವಾದಗಳನ್ನು ಗಮನಿಸಿದರೆ ೧೯೬೨ರ ಪುನರಾವರ್ತನೆ ಆದೀತೆ ಎಂಬ ಆತಂಕವೂ ಇತ್ತು. ಭಾಜಪದವರು ಮಾಮೂಲಿನಂತೆ 'ಅತಿರೇಕದ ರಾಷ್ಟ್ರಪ್ರೇಮ'ದ ಆಕ್ರೋಶ ತೋರಿದರು. ಭಾರತ-ಚೀಣ ಸಂಬಂಧಗಳಲ್ಲಿ ಈ ಬಗೆಯ ಕಿರಿಕಿರಿ ಸಂಭವಿಸುತ್ತಿರುವುದು ಇದು ಮೊದಲ ಸಲವೇನಲ್ಲ. 'ಹಿಂದೀ-ಚೀಣೀ ಭಾಯಿ ಭಾಯಿ' ಸಂಬಂಧ ಹೋಗಿ ಕೈಕೈ ಮಿಲಾಯಿಸಿದ್ದೂ ಆಯಿತು. ಅರ್ಧ ಶತಮಾನ ಕಳೆಯುತ್ತ ಬಂದಿದ್ದರೂ ಗಡಿವಿವಾದ ಮಾತ್ರ ಬಗೆಹರಿಯದೆ ಜಗ್ಗಾಡುತ್ತಿದೆ.

ಚೀಣೀಯರು ತಮಗೆ ಬೇಕೆನಿಸಿದಾಗ ಈ ವಿವಾದವನ್ನು ಕೆದಕುತ್ತಿದ್ದಾರೇನೋ ಎನಿಸುತ್ತದೆ ಗಡಿಯಲ್ಲಿ ಸಂಭವಿಸುತ್ತಿರುವ ಘಟನೆ ಗಳನ್ನು ಅವಲೋಕಿಸಿದಾಗ. ಈ ಅತಿಕ್ರಮಣಗಳ ಹಿಂದೆ ಚೀಣೀಯರ ರಾಜಕೀಯ ಸಂಚೊಂದಿದೆ ಎನಿಸಿದರೆ ತಪ್ಪಾಗದು. ಲಡಾಕ್‌ನಲ್ಲಿ ನಡೆದ ಚೀಣೀ ಅತಿಕ್ರಮಣವೇನೋ ಕೆಲದಿನಗಳ ನಂತರ ತಣ್ಣಗಾಯಿತು. ನಮ್ಮ ಗಡಿಯೊಳಗೆ ಪ್ರವೇಶಿಸಿದ್ದ ಚೀಣೀ ಸೇನೆಗಳು ಸ್ವಸ್ಥಾನಕ್ಕೆ ಮರಳಿದುವು. ಎರಡೂ ಕಡೆಯವರು ಇಂಥ ಘಟನೆಗಳು ಸಂಭವಿಸದ ಹಾಗೆ ಎಚ್ಚರ ವಹಿಸಲು ಕ್ರಮ ಕೈಗೊಳ್ಳುವುದಾಗಿ ಹೇಳಿದ್ದಾರೆ. ಚೀಣೀ ಅಧಿಕಾರಿಗಳ ಪ್ರಕಾರ ಇದು ನಗಣ್ಯ ಪ್ರಕರಣ. ಆದರೆ ಹಾಗೆಂದು ನಾವು ಕಡೆಗಣಿಸಲು ಸಾಧ್ಯವಾಗದು.

ಈ ಘಟನೆ ಸಂಭವಿಸಿದ್ದು ಚೀಣಾದಲ್ಲಿ ಹೊಸ ನಾಯಕತ್ವ ಅಧಿಕಾರ ವಹಿಸಿಕೊಂಡ ಕೆಲವು ದಿನಗಳ ನಂತರ. ಮತ್ತೊಂದು, ಭಾರತದ ವಿದೇಶಾಂಗ ಸಚಿವರು ಚೀಣಾಗೆ ಭೇಟಿ ನೀಡಿ ಅಲ್ಲಿನ ನಾಯಕರೊಂದಿಗೆ ಮಾತುಕತೆಗಳನ್ನು ನಡೆಸಲು ನಿಯೋಜಿತವಾಗಿದ್ದ ಸಮಯಕ್ಕೆ ಪೂರ್ವದಲ್ಲಿ. ಮುಖ್ಯವಾದ ಇನ್ನೊಂದು ಸಂಗತಿಯೆಂದರೆ ಚೀಣದ ನೂತನ ಪ್ರಧಾನಿ ಲೀ ಕಿಕಿಯಾಂಗ್ ಭಾರತಕ್ಕೆ ಭೇಟಿ ನೀಡುವುದು ನಿಗದಿಯಾಗಿದ್ದಾಗ. ಇವೆಲ್ಲಕ್ಕೂ ಮತ್ತು ಲಡಾಕ್‌ನ ಘಟನೆಗೂ ಏನಾದರೂ ಸಂಬಂಧವಿದೆಯೇ? ಈ ಪ್ರಶ್ನೆ ಸಹಜ. ವಿಪರೀತ ವ್ಯವಹಾರಸ್ಥರಾದ ಚೀಣೀಯರು ಗಮನ ಸೆಳೆಯಲು ಪ್ರಕರಣವನ್ನು ಹುಟ್ಟುಹಾಕಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಭಾರತ ಅನವಶ್ಯಕ ಆಕ್ರೋಶಕ್ಕೆ ಬಲಿಯಾಗದೆ ಎಚ್ಚರಿಕೆಯಿಂದ ಅಡಿಯಿರಿಸಿ ಗಡಿ ವಿವಾದಕ್ಕೆ ಪರಿಹಾರ ಕಾಣಬೇಕಾಗಿದೆ.

ಆಗಾಗ್ಗೆ ಸಂಭವಿಸುವ ಇಂಥ ಘಟನೆಗಳಿಂದ ಪರಸ್ಪರ ವಿಶ್ವಾಸ ಕುಂಠಿತವಾಗುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಗಡಿವಿವಾದ ಇತ್ಯರ್ಥಗೊಳಿಸಲು ನೇಮಕಗೊಂಡಿರುವ ವಿಶೇಷ ತಂಡಗಳು ಸಮ್ಮತವಾದ ಸೂತ್ರವನ್ನು ರೂಪಿಸಲು ಆಗಾಗ ಸೇರುತ್ತಿವೆ. ಉಳಿದಂತೆ ಎರಡೂ ದೇಶಗಳ ನಡುವಣ ಸಂಬಂಧಗಳು ಸುಸೂತ್ರವಾಗಿ ಮುನ್ನಡೆಯುತ್ತಿವೆ. 'ಬ್ರಿಕ್ಸ್'ನಂಥ ವೇದಿಕೆಯಲ್ಲಿ ಎರಡೂ ದೇಶಗಳು ರಚನಾತ್ಮಕವಾಗಿ ಸಹಕರಿಸುತ್ತಿವೆ. ಭಾರತಕ್ಕೆ ಚೀಣೀ ಪ್ರಧಾನಿಯ ಭೇಟಿಯ ಸಮಯದಲ್ಲಿ ಹದಿನಾರು ಹೊಸ ಒಪ್ಪಂದಗಳಾಗುವ ನಿರೀಕ್ಷೆ ಇದೆ. ಮಾತುಕತೆಗಳಲ್ಲಿ ಗಡಿವಿವಾದದ ಇತ್ಯರ್ಥಕ್ಕೂ ಹಾದಿ ಸುಗಮಗೊಳಿಸಲು ಅನುವಾದರೆ ಒಳ್ಳೆಯದು. ಏನೇ ಆಗಲಿ ಚೀಣೀಯರು ಗಡಿಯಲ್ಲಿ ಅನಗತ್ಯ ಕಿರಿಕಿರಿ ಉಂಟುಮಾಡುವುದನ್ನು ಕೈಬಿಡಲಿ.

ಸೀಯಾರ್ಕೆ
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ವೈದ್ಯಕೀಯ ಸಾಹಿತ್ಯ ಎಂಬ 'ಅನಾಥ ಕೂಸು'!



**ಡಾ|| ಕೆ. ಎಸ್. ಪವಿತ್ರ**

"ವೈದ್ಯಕೀಯ ಸಾಹಿತ್ಯ? ಅದು 'ಸಾಹಿತ್ಯ'ವೇ ಅಲ್ಲ, ಏಕೆಂದರೆ ಅದು ವಿಜ್ಞಾನ ತಾನೆ? ಸೃಜನಶೀಲ ಅಂತಲೇ ಅನ್ನಿಸಿಕೊಳ್ಳಲ್ವೇ" ಎನ್ನುವವರು ಹಲವರು. ಆರೋಗ್ಯದ ಬಗ್ಗೆ ಹೀಗೆ ಮಾಡು, ಮಾಡಬೇಡ, ಅಥವಾ ಕಾಯಿಲೆ ಲಕ್ಷಣಗಳು ಹೀಗೆ, ಅದಕ್ಕೆ ಚಿಕಿತ್ಸೆ ಇದು ಎಂದು ಹೇಳುವ ಬರಹಗಳು ಕೇವಲ ವರದಿಗಳು. ಹಾಗಾಗಿ ಅದು ನಿಜವಾದ ಅರ್ಥದಲ್ಲಿ ಸಾಹಿತ್ಯ ಎಂದೆನಿಸುವುದಿಲ್ಲ ಎಂಬುದು ಬಹು ಜನರ ವಾದ.

ಆಶ್ಚರ್ಯಕರ ವಿಷಯ ಏನೆಂದರೆ, ಹಲವಾರು ದಿನಪತ್ರಿಕೆಗಳು ಇಂದು ಕನಿಷ್ಠ ಒಂದು ಪುರವಣಿಯನ್ನಾದರೂ 'ಆರೋಗ್ಯ' ವಿಷಯಕ್ಕೆ ಮೀಸಲಿಡುತ್ತವೆ. ವಾರಪತ್ರಿಕೆ - ಮಾಸಿಕಗಳಲ್ಲಾದರೂ ಅಷ್ಟೆ, ಆರೋಗ್ಯಕರ ಜೀವನಶೈಲಿಗೆ ಸಂಬಂಧಪಟ್ಟ ಲೇಖನಗಳು ಕನಿಷ್ಠ ೨೫% ಭಾಗವನ್ನು ತಮ್ಮದಾಗಿಸಿಕೊಳ್ಳುತ್ತವೆ. ಆರೋಗ್ಯಕ್ಕೆ ಸಂಬಂಧಪಟ್ಟ ಪುಸ್ತಕಗಳು ಮಾರಾಟವಾದಷ್ಟು ಕಥೆ - ಕಾದಂಬರಿ - ಕವನ ಸಂಕಲನಗಳು ಮಾರಾಟವಾಗುವುದಿಲ್ಲ (ಖ್ಯಾತನಾಮರ ಪುಸ್ತಕಗಳನ್ನು ಹೊರತುಪಡಿಸಿ!). ಎಲ್ಲಕ್ಕಿಂತ ಮುಖ್ಯವಾಗಿ ಈ ವೈದ್ಯಕೀಯ ಲೇಖನಗಳನ್ನು ಜನ ಓದಿ ಪಾಲಿಸುವ ಸಾಧ್ಯತೆ, ಬೇರೆ ಕಥೆ - ಕವನಗಳಲ್ಲಿ ಅಡಕವಾಗಿರಬಹುದಾದ ಸಂದೇಶ – ಜೀವನ ಸೂಕ್ತ್ರಗಳನ್ನು ಪಾಲಿಸುವ ಸಾಧ್ಯತೆಗಿಂತ ಬಹುಪಾಲು ಹೆಚ್ಚು! ಆದ್ದರಿಂದಲೇ ವೈದ್ಯಕೀಯ ಸಾಹಿತ್ಯದ ಹೆಸರಿನಲ್ಲಿ ಹರಿದುಬರುತ್ತಿರುವ ಅಸಂಖ್ಯಾತ ಲೇಖನಗಳನ್ನು 'ಇವು ಸೃಜನಶೀಲವಲ್ಲ, ಹಾಗಾಗಿ ವಿಮರ್ಶೆ-ಗಣನೆಗಳಿಗೆ ಯೋಗ್ಯವಲ್ಲ' ಎಂದು ತಳ್ಳಿಹಾಕುವಂತಿಲ್ಲ. ಬದಲಾಗಿ ವೈದ್ಯಕೀಯ ಸಾಹಿತ್ಯದ ಅಡಿಯಲ್ಲಿ ಏನನ್ನು ಸೇರಿಸಬೇಕು, ಸೇರಿಸಬಾರದು, ವೈದ್ಯಕೀಯ ಸಾಹಿತ್ಯಕ್ಕೆ ನೀತಿಸಂಹಿತೆಯೊಂದನ್ನು ರೂಪಿಸುವ ಅಗತ್ಯವಿದೆಯೇ, ಶುದ್ಧ ಸಾಹಿತ್ಯ ಸಂಚಿಕೆಗಳು – ಸಾಹಿತ್ಯ ಸಂಘಟನೆಗಳು ವೈದ್ಯಕೀಯ ಸಾಹಿತ್ಯವನ್ನು ಸಾಹಿತ್ಯದ ಅಡಿಯಲ್ಲಿ ಸೇರಿಸುವುದರ ಸಾಧಕ-ಬಾಧಕಗಳೇನು ಇವೆಲ್ಲದರ ಚರ್ಚೆ ಆಗಲೇಬೇಕಾದ ಪರಿಸ್ಥಿತಿ ಇಂದಿದೆ.

ವೈದ್ಯಕೀಯ ಸಾಹಿತ್ಯ ಎಂದಾಕ್ಷಣ ಅದು ವೈದ್ಯರಿಗಾಗಿ ಅಧ್ಯಯನ ನಡೆಸುವ ಇತರ ವೈದ್ಯರು - ಸಂಶೋಧಕರು ಬರೆಯುವ ವೈಜ್ಞಾನಿಕ ಸಾಹಿತ್ಯವಲ್ಲ. ಬದಲಾಗಿ ಜನಸಾಮಾನ್ಯರಿಗೆ ವೈಜ್ಞಾನಿಕ ವಿಷಯಗಳನ್ನು ಸರಳವಾಗಿ, ಆಸಕ್ತಿಪೂರ್ಣವಾಗಿ ಆದರೆ ವಸ್ತುನಿಷ್ಠವಾಗಿ ಬರೆಯಲ್ಪಡುವಂಥದ್ದು. ಅಂದರೆ ಕಲ್ಪನೆಗೆ ಇಲ್ಲಿ ಅವಕಾಶವಿಲ್ಲ. ಹಾಗೆಂದಾಕ್ಷಣ ಸೃಜನಶೀಲತೆಯ ಅಗತ್ಯವಿಲ್ಲ ಎಂದುಕೊಂಡಲ್ಲಿ ಅದು ಮೂರ್ಖತನವೇ ಸರಿ. ಹೇಳಬೇಕಾದ ವಿಷಯವನ್ನು ಆಸಕ್ತಿಕರವಾಗಿ ಹೇಳುವುದು, ಮನಮುಟ್ಟುವಂತೆ ಬರೆಯುವುದು ಸುಲಭದ ಕೆಲಸವಲ್ಲ. ಸತ್ಯಕ್ಕೆ ಚ್ಯುತಿಬಾರದಂತೆ, ಆದರೆ ಬರೆಹ ಒಣ ವರದಿಯಾಗದಂತೆ ರಚಿಸುವ ಕಾರ್ಯ ಎಲ್ಲ ವೈದ್ಯರಿಗೂ ಸಾಧ್ಯವೆನಿಸುವುದಿಲ್ಲ. ಆಯಾ ವೈದ್ಯನ ಅನುಭವ, ಆ ಅನುಭವದ ಮಾನವೀಯ ಅಂಶಗಳು, ಇವು ವೈಜ್ಞಾನಿಕವಾದರೂ, ಕಾಯಿಲೆ- ರೋಗಲಕ್ಷಣಗಳನ್ನು ಸಾಹಿತ್ಯ ಸ್ಪರ್ಶದಿಂದ ಜೀವಂತವಾಗಿಸುವಂತೆ, ಓದುಗನಿಗೆ ರೋಗದ ಸ್ಪಷ್ಟ ಪರಿಕಲ್ಪನೆ ಮೂಡಿಸುವಂತೆ ಮಾಡಬಲ್ಲವು. ಹಾಗೆಯೇ ಇಂದಿನ ಕನ್ನಡ ಸಾರಸ್ವತಲೋಕ ವೈದ್ಯನ ಅನುಭವ ಕಥನ/ ಆತ್ಮಕತೆ (ಉದಾಹರಣೆ : ಡಾ|| ಸಿ. ಆರ್. ಚಂದ್ರಶೇಖರ್ ಅವರ ಹಿತ -ಅಹಿತ), ರೋಗಿಯ ಅನುಭವ ಕಥನ (ಮನೋರೋಗಿಯ ಆತ್ಮಕಥೆ - ಸ್ನೇಹಾ), (ರಾಶಿ ಅವರ ಮನ-ಮಂಥನ), ವೈದ್ಯ ವಿಜ್ಞಾನಗಳ ಅದ್ಭುತ ಆವಿಷ್ಕಾರಗಳ ಕಥನ (ಡಾ|| ಹೆಚ್. ಡಿ. ಚಂದ್ರಪ್ಪ ಗೌಡ ಅವರ ವೈದ್ಯ ವಿಜ್ಞಾನ ಸಾಧಕರು) ಈ ಕೃತಿಗಳನ್ನು ವೈದ್ಯಕೀಯ ಸಾಹಿತ್ಯದ ಅಡಿಯಲ್ಲಿ ಸೇರಿಸಿಯೋ/ ಸೇರಿಸದೆಯೋ ಅವುಗಳ ಸಾಹಿತ್ಯಿಕ ಮೌಲ್ಯವನ್ನೇ ಕಡೆಗಣಿಸಿದೆ ಎನ್ನಬೇಕು.

ರೋಗಿಗಳ/ ಅವರ ಕುಟುಂಬದವರ ಅನುಭವ ಕಥನಗಳು ಆಂಗ್ಲಭಾಷೆಯಲ್ಲಿ ಸಾಮಾಜಿಕ ಕ್ರಾಂತಿಯನ್ನೇ ಉಂಟುಮಾಡಿದ ಉದಾಹರಣೆಗಳಿವೆ. ಮೊರಾಗ್ ಕೋಚ್‌ಳ ಬಿಯಾಂಡ್ ಆಲ್ ರೀಸನ್ಸ್, ಕ್ಲಿಫರ್ಡ್ ಬೀರ್ಸ್‌ನ ದಿ ಮೈಂಡ್ ದಟ್ ಫೌಂಡ್ ಇಟ್‌ಸೆಲ್ಫ್, ಯೂಂಗನ ದಿ ರೆಡ್ ಬುಕ್, ಕ್ಯಾಥರೀನ್ ಮಾರೀಸ್‌ಳ ಲೆಟ್ ಮಿ ಹಿಯರ್ ಯುವರ್ ವಾಯ್ಸ್ ಹೀಗೆ ಹಲವು ಕೃತಿಗಳು ಆ ಸಾಲಿಗೆ ಸೇರುತ್ತವೆ. ಆದರೆ ಭಾರತದಲ್ಲಿ ಈ ರೀತಿಯ ಪುಸ್ತಕಗಳನ್ನು ಬಿಟ್ಟು, ಬಿಡಿ ಲೇಖನಗಳು




*ವೈದ್ಯಕೀಯ ಸಾಹಿತ್ಯ ಎಂದಾಕ್ಷಣ ಅದು ವೈದ್ಯರಿಗಾಗಿ ಅಧ್ಯಯನ ನಡೆಸುವ ಇತರ ವೈದ್ಯರು – ಸಂಶೋಧಕರು ಬರೆಯುವ ವೈಜ್ಞಾನಿಕ ಸಾಹಿತ್ಯವಲ್ಲ. ಬದಲಾಗಿ ಜನಸಾಮಾನ್ಯರಿಗೆ ವೈಜ್ಞಾನಿಕ ವಿಷಯಗಳನ್ನು ಸರಳವಾಗಿ, ಆಸಕ್ತಿಪೂರ್ಣವಾಗಿ ಆದರೆ ವಸ್ತುನಿಷ್ಠವಾಗಿ ಬರೆಯಲ್ಪಡುವಂಥದ್ದು. ಅಂದರೆ ಕಲ್ಪನೆಗೆ ಇಲ್ಲಿ ಅವಕಾಶವಿಲ್ಲ. ಹಾಗೆಂದಾಕ್ಷಣ ಸೃಜನಶೀಲತೆಯ ಅಗತ್ಯವಿಲ್ಲ ಎಂದುಕೊಂಡಲ್ಲಿ ಅದು ಮೂರ್ಖತನವೇ ಸರಿ. ಹೇಳಬೇಕಾದ ವಿಷಯವನ್ನು ಆಸಕ್ತಿಕರವಾಗಿ ಹೇಳುವುದು, ಮನಮುಟ್ಟುವಂತೆ ಬರೆಯುವುದು ಸುಲಭದ ಕೆಲಸವಲ್ಲ. ಸತ್ಯಕ್ಕೆ ಚ್ಯುತಿಬಾರದಂತೆ, ಆದರೆ ಬರೆಹ ಒಣ ವರದಿಯಾಗದಂತೆ ರಚಿಸುವ ಕಾರ್ಯ ಎಲ್ಲ ವೈದ್ಯರಿಗೂ ಸಾಧ್ಯವೆನಿಸುವುದಿಲ್ಲ. ಆಯಾ ವೈದ್ಯನ ಅನುಭವ, ಆ ಅನುಭವದ ಮಾನವೀಯ ಅಂಶಗಳು, ಇವು ವೈಜ್ಞಾನಿಕವಾದರೂ, ಕಾಯಿಲೆ– ರೋಗಲಕ್ಷಣಗಳನ್ನು ಸಾಹಿತ್ಯ ಸ್ಪರ್ಶದಿಂದ ಜೀವಂತವಾಗಿಸುವಂತೆ, ಓದುಗನಿಗೆ ರೋಗದ ಸ್ಪಷ್ಟ ಪರಿಕಲ್ಪನೆ ಮೂಡಿಸುವಂತೆ ಮಾಡಬಲ್ಲವು.*

# ‘ಆಧುನಿಕ ಭಾರತಂ’ನಿಂದ ಆಯ್ದ ಭಾಗ

## (ತೆಲುಗಿನ ವಿಪ್ಲವ ಕವಿ ಗುಂಟೂರು ಶೇಷೇಂದ್ರ ಶರ್ಮ)



ಕವಿತೆಯೊಂದು ಸುಂದರವಾಗಿರಬೇಕಾದರೆ
ಅದಕ್ಕೊಂದು ಹೃದಯವಿರಬೇಕು
ಅದು ಕಣ್ಣೀರು ಸುರಿಸಬೇಕು
ರೋಷದ ಬೆಂಕಿ ಉಗುಳಬೇಕು
ದುಃಖಿತನ ಪರ ನಿಲ್ಲಬೇಕು
ಮಾನವೀಯತೆಯ ಋಣ ತೀರಿಸಬೇಕು
ಕಾಲ ಹೊರಿಸುವ ಭಾರ ಸಹಿಸಬೇಕು

ಕವಿತೆ ಉಳಿಯಬೇಕೆಂದರೆ
ಅದೊಂದು ಕೋಟೆಯಂತಿರಬೇಕು
ಮನುಷ್ಯನ ಅಂತಿಮ ವಿಜಯದ
ಬಾವುಟದಂತಿರಬೇಕು

ನಿನಗಾಗಿ ಕಣ್ಣೀರು ಸುರಿಸುವವರಿಗೆ ನೀನು ಋಣಿ
ಈ ಶತಮಾನದ ಹಸಿದವರೆಲ್ಲ ಮಾರ್ಕ್ಸ್‌ನಿಗೆ ಋಣಿ

ನಾನು ಅಕ್ಟೋಬರಿನಲ್ಲಿ ಹುಟ್ಟಿದೆ
ಕ್ರಾಂತಿಯೂ ಅಕ್ಟೋಬರಿನಲ್ಲಿ ಜನ್ಮ ತಾಳಿತು
ಎಂದೇ ಕತ್ತಲು ನನ್ನ ಕಂಡು ಭಯಗೊಳ್ಳುತ್ತದೆ

ರಷಿಯಾ ಅಥವಾ ಚೀನಾ ಅಷ್ಟೇ ಅಲ್ಲ
ಕ್ರಾಂತಿ ಎಂದೂ ಶಾಶ್ವತ...

ಶತ್ರುವಿನ ತುಪಾಕಿಗೆದುರಾಗಿ
ಸೇನೆಯ ಶಿಸ್ತಿನ ಸಾಲುಗಳಲ್ಲಿ ಚಲಿಸುತ್ತಿದೆ
ಸೈನಿಕ ಒಂದೇ ಸಮ ಮುಂದುವರಿಯುತ್ತಾನೆ
ಪಕ್ಕದವ ನೆಲ ಕಚ್ಚಿದರೂ
ಯಾವ ಸೈನಿಕನೂ ಕೇಳಲಾರ, ಏಕೆ ಈ ಸಾವು
ಏಕೆ ಈ ಯುದ್ಧ?
ಅರ್ಥವಿಲ್ಲದ ಪದಗಳಿರುವ ಕವಿತೆಯಂತೆ...

ಸಾಗರದಂತೆ ಇರುವ ಮನುಷ್ಯನಿಂದ
ಸತ್ಯ ದೂರ ನಡೆದು ಇಲ್ಲವಾದರೆ...
ನನಗೆ ಭಯವಾಗುತ್ತಿದೆ
ಸಾಗರವೇ ಬತ್ತಿಹೋದೀತು
ಪರ್ವತಗಳೇ ಹಾರಿಹೋದಾವು
ಮರಗಳೂ ಹೂವರಳಿಸದ ದಿನಗಳೂ
ದೂರವಿಲ್ಲ ಎಂದೇ ತೋರುತ್ತಿದೆ

ಅನು : **ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕಾವಲಕ್ಕಿ ಅಂಚೆ
ಹೊನ್ನಾವರ ತಾಲೂಕು, ಉತ್ತರ ಕನ್ನಡ ಜಿಲ್ಲೆ - ೫೮೧ ೩೩೪

ನಮ್ಮದು ಶುದ್ಧ ಸಾಹಿತ್ಯ ಪತ್ರಿಕೆ, ಹಾಗಾಗಿ ಪ್ರಕಟಿಸಲಾಗುವುದಿಲ್ಲ ಎಂದು ಸಾಹಿತ್ಯಿಕ ಪತ್ರಿಕೆಗಳಿಂದಲೂ, ಅದೇ ಆರೋಗ್ಯ ಪುರವಣಿಗಳಿಂದ ಇದು ವೈದ್ಯಕೀಯ ಲೇಖನವಲ್ಲ, ಪ್ರಕಟಿಸಲಾಗದಿದ್ದಕ್ಕೆ ವಿಷಾದಿಸುತ್ತೇವೆ ಎಂದೂ ತಿರಸ್ಕರಿಸಲ್ಪಡುತ್ತವೆ. ಕಥೆಗಾರನ, ಕವಿಯ ನೋವು-ನಲಿವು ಹೊರಗೆ ಹರಿದು ಕಥೆ-ಕಾವ್ಯವಾದರೆ ಅದೇ ರೋಗಿಯ - ಆತನ ಕುಟುಂಬದವರ, ವೈದ್ಯನ ನೋವು-ನಲಿವು ಅವರಲ್ಲಿಯೇ ಉಳಿಯತ್ತದೆ! ಸಾವಿರಾರು ಜನರಿಗೆ ಮಾದರಿಯಾಗಬಹುದಾದ, ಸಾಂತ್ವನ ನೀಡಬಹುದಾದ, ನೋವಿನಲ್ಲಿರುವವರು ನಾವೊಬ್ಬರೇ ಅಲ್ಲ ಎಂದು ಅರಿವಾಗಬಹುದಾದ ಸಾಧ್ಯತೆ ಇಲ್ಲವಾಗುತ್ತದೆ.

ವೈದ್ಯಕೀಯ ಸಾಹಿತ್ಯದ ಇನ್ನೊಂದು ಆತಂಕ ತರುವ ಬೆಳವಣಿಗೆಯೆಂದರೆ ಯಾರೂ ವೈದ್ಯಕೀಯ ಸಾಹಿತ್ಯವನ್ನು ಬರೆಯಬಹುದಾದ ಇವತ್ತಿನ ಪರಿಸ್ಥಿತಿ. ಅಂತರ್ಜಾಲದಿಂದ ಹರಿದು ಬರುವ ಮುಕ್ತ ಮಾಹಿತಿ ಇಂದು ಎಲ್ಲರನ್ನೂ ಲೇಖಕರನ್ನಾಗಿಸಿದೆ. ಮಾಹಿತಿಯ ಸರಿ-ತಪ್ಪುಗಳ ಬಗ್ಗೆ ಗಮನ ಹರಿಸುವ ಸಮಯ ಯಾರಿಗೂ ಇಲ್ಲ. ಗೊಂದಲ-ನರಳುವಿಕೆಗಳಿಂದ ಓದುಗ ಸರಿ-ತಪ್ಪು ಯಾವುದನ್ನೂ ಪಾಲಿಸುವ ಅಪಾಯ ಹೆಚ್ಚಾಗುತ್ತಿದೆ. ವಿವಿಧ ವೈದ್ಯಕೀಯ ಪದ್ಧತಿಗಳ ಬಗೆಗಿನ ಪರ-ವಿರೋಧ ಧೋರಣೆಗಳು, ಸ್ವಂತ ಅಭಿಪ್ರಾಯಗಳು, ಪರಾಮರ್ಶನೆಯ ಉಲ್ಲೇಖವಿಲ್ಲದ ಲೇಖನಗಳು, ಅನುಭವವಿಲ್ಲದಿದ್ದರೂ ಆ ವಿಷಯದ ಬಗ್ಗೆ ಅಂತರ್ಜಾಲದಲ್ಲಿ ಒಂದಷ್ಟು ಓದಿ ಬರೆಯುವ ಅಭ್ಯಾಸ ‘ವೈದ್ಯಕೀಯ ಸಾಹಿತ್ಯ’ವನ್ನು ಮಲಿನಗೊಳಿಸುತ್ತಿವೆ.

ಇನ್ನು ವೈದ್ಯಕೀಯ ಸಾಹಿತ್ಯದ ಓದುಗವೃಂದ. ಮನುಷ್ಯನಾದ ಮೇಲೆ ಆರೋಗ್ಯದ ಸಮಸ್ಯೆಗಳಿಂದ ನರಳಲೇಬೇಕಷ್ಟೆ. ಅಂದ ಮೇಲೆ ಆರೋಗ್ಯದ ಪುರವಣಿಗಳೆಂದ ಮೇಲೆ ‘ನೋಡೋಣ ತಲೆನೋವಿಗೆ ಹೊಸದೇನು ಬರೆದಿರಬಹುದು’ ಎಂದು ಕಣ್ಣು ಹಾಯಿಸುವವರು ಬಹಳಷ್ಟು ಜನ. ಅದರ ಮೇಲೆ ಕಾಯಿಲೆಯ ಚಿಕಿತ್ಸೆ ಈ ಲೇಖನದಲ್ಲಿ ಬರೆದಿರುವಂತೆ ಪಾಲಿಸಿ ನೋಡೇಬಿಡೋಣ ಎಂದು ಪ್ರಯೋಗಿಸುವವರು ಇನ್ನಷ್ಟು ಜನ. ಜೀವನ ಶೈಲಿಯ ಕುರಿತಾದ ಲೇಖನಗಳನ್ನಂತೂ ಓದಿ ತಾವೂ ಒಂದಷ್ಟು ಮಾತನಾಡಲು, ಶಾಸ್ತ್ರವಾಗಿ ಅದನ್ನು ಹೇಳಲು ಕಲಿಯುವಷ್ಟು ಮಂದಿ ಅದನ್ನು ಪ್ರಾಯೋಗಿಕವಾಗಿ ಅಳವಡಿಸಿಕೊಳ್ಳುವವರಿಲ್ಲ!

ಹಾಗಿದ್ದರೆ ವೈದ್ಯಕೀಯ ಸಾಹಿತ್ಯಕ್ಕೊಂದು ನೀತಿ ಸಂಹಿತೆಯ ಅಗತ್ಯ ಇದೆ ಎನಿಸುವುದಿಲ್ಲವೇ? ಕನ್ನಡದ ಸಾರಸ್ವತ ಲೋಕದ ಹಿರಿಯರು, ಪತ್ರಕರ್ತ ವೃಂದ, ವೈದ್ಯಕೀಯ ಜಗತ್ತು ಇದಕ್ಕೆ ಮುಂದಾಗಬೇಕು. ‘ಸ ಹಿತಯೋಃ ಸಾಹಿತ್ಯಃ’ ಎನ್ನುವುದಾದರೆ ಹಿತವನ್ನು ಯಾವುದೇ ರೀತಿಯಲ್ಲಿ ಉಂಟುಮಾಡಿದಲ್ಲಿ ಅದು ಸಾಹಿತ್ಯ ತಾನೆ? ಹಾಗೆಂದ ಮೇಲೆ ಸಾಹಿತ್ಯದ ಅಡಿಯಲ್ಲಿ ರೋಗಿ ವೈದ್ಯರ ಅನುಭವ ಕಥನಗಳು - ಆತ್ಮಕಥೆಗಳು - ಸಂಶೋಧನೆಗಳ ಕುರಿತಾದ ಲೇಖನಗಳೂ ಪರಿಗಣಿಸಲ್ಪಡಬೇಕು. ವೈದ್ಯರಾಗಲೀ, ವೈದ್ಯರಲ್ಲದವರಾಗಲೀ ವೈದ್ಯಕೀಯ ಲೇಖನಗಳನ್ನು ಬರೆದಾಗ ಅವುಗಳ ಸತ್ಯಾಸತ್ಯತೆ, ಅತಿಯಾದ ಬೆದರಿಸುವಿಕೆ/ಆಶ್ವಾಸನೆಗಳ ಬಗೆಗೆ ಎಚ್ಚರ ಇವುಗಳನ್ನು ಪರಿಶೀಲಿಸಲು ಆರೋಗ್ಯ ಪುರವಣಿಗಳು ಮುಂದಾಗಬೇಕು. ಹಾಗೆಯೇ ಕಥೆ-ಕಾದಂಬರಿಗಳಲ್ಲಿ ವೈದ್ಯಕೀಯ ವಿಷಯಗಳು, ಅದರಲ್ಲಿಯೂ ಮನೋವೈದ್ಯಕೀಯ ಸಂಗತಿಗಳು ಬರಬಹುದಾದ ಸಂದರ್ಭಗಳಲ್ಲಿ ಲೇಖಕರು ಬರೆದ/ಸೃಷ್ಟಿಸಿದ ಸಂದರ್ಭಗಳು ಅತಿ ರಂಜನೀಯವಾಗಿ, ಸತ್ಯಕ್ಕೆ ದೂರವಾಗಿ, ಹಲವು ವೈದ್ಯಕೀಯ ಲೇಖನಗಳು ತಿಳಿಸಿರಬಹುದಾದ ವೈಜ್ಞಾನಿಕ ಸತ್ಯಗಳನ್ನು ಹಾಳುಗೆಡುವಂತೆ ಮಾಡದಿರುವ ಎಚ್ಚರ ಪ್ರತಿಯೊಬ್ಬ ಸಾಹಿತಿಗೆ ಅತ್ಯವಶ್ಯ.

ತಿಳಿಯಾದ ಕನ್ನಡದಲ್ಲಿ, ಆಸಕ್ತಿಪೂರ್ಣವಾಗಿ, ಸತ್ಯನಿಷ್ಠವಾಗಿ, ಆದರೆ ಅತಿ ತಾಂತ್ರಿಕತೆಯನ್ನು ಬದಿಗಿಟ್ಟು, ವೈದ್ಯಕೀಯ ಲೇಖನಗಳನ್ನು ಬರೆಯುವ ಬಗ್ಗೆ ಸಾಹಿತ್ಯ ಸಂಘಟನೆಗಳು, ಪತ್ರಿಕೆಗಳು ಯುವ ವೈದ್ಯರಿಗೆ ಕಮ್ಮಟಗಳನ್ನು ಏರ್ಪಡಿಸುವುದು ಸೂಕ್ತ. ನಾಗೇಶ್ ಹೆಗಡೆ, ಡಾ|| ಸಿ. ಆರ್. ಚಂದ್ರಶೇಖರ್, ಡಾ|| ಚಂದ್ರಪ್ಪ ಗೌಡರಂಥ ಹಿರಿಯ ಸಾಹಿತಿಗಳು ಎಲ್ಲ ವೈಜ್ಞಾನಿಕ-ವೈದ್ಯಕೀಯ ಲೇಖಕರಿಗೆ ಮಾದರಿಯಾಗಬೇಕು. ‘ವೈದ್ಯಕೀಯ ಸಾಹಿತ್ಯ’ ಸಾಹಿತ್ಯವೇ ಹೌದೋ ಅಲ್ಲವೋ ಎಂಬ ಚರ್ಚೆಗಿಂತ, ಸಾಹಿತ್ಯ ಸಂಘಟನೆಗಳ ಪ್ರಶಸ್ತಿಗಳಿಗೆ ಅವುಗಳನ್ನು ಪರಿಗಣಿಸುತ್ತಾರೆಯೋ ಇಲ್ಲವೋ ಎಂಬುದಕ್ಕಿಂತ ಮುಖ್ಯವೆನೆಂದರೆ ಅಸಂಖ್ಯಾತರು ಈ ‘ಸಾಹಿತ್ಯ’ವನ್ನು ಓದುತ್ತಾರೆ, ಅದರ ಸಂದೇಶಗಳನ್ನು ಪಾಲಿಸುತ್ತಾರೆ ಎಂಬುದು ಸತ್ಯ. ಹಾಗಾಗಿಯೇ ವೈದ್ಯಕೀಯ ಸಾಹಿತ್ಯದ ಬಗೆಗಿನ ಆಳವಾದ ಚಿಂತನೆ ಈ ಜುಲೈ ೧ರ ‘ವೈದ್ಯರ ದಿನ’ದಂದು ಜರುಗಬೇಕಿದೆ.

**ಡಾ|| ಕೆ. ಎಸ್. ಪವಿತ್ರ**
೧ನೇ ಮುಖ್ಯರಸ್ತೆ, ರಾಜೇಂದ್ರನಗರ
ಶಿವಮೊಗ್ಗ - ೫೭೭ ೨೦೪

# ಜಾತಿ ಆಧಾರದ ಮೀಸಲಾತಿಯ ಪ್ರಸ್ತುತತೆ

ಡಾ|| ತಿಪ್ಪೇಸ್ವಾಮಿ ಡಿ. ಎಸ್.

ಜಾತಿವ್ಯವಸ್ಥೆಯ ಅನ್ಯಾಯವನ್ನು ನಿರ್ಮೂಲನಗೊಳಿಸಲು ಮೀಸಲಾತಿ ಒಂದು ಸಾಧನವಾಗಿರುವಂತೆಯೇ, ಜಾತಿಪದ್ಧತಿ ವಿಧಿಸಿದ ಅಸಮರ್ಥತೆಗಳಿಗೆ ಬಲಿಯಾಗಿರುವ ಬಹುಸಂಖ್ಯಾತರಿಗೆ ಸಾಮಾಜಿಕ ನ್ಯಾಯ ಒದಗಿಸುವುದೇ ಮೀಸಲಾತಿಯ ಉದ್ದೇಶ. 'ಮೀಸಲಾತಿ ನಮ್ಮ ಮಾನವ ಹಕ್ಕು' ಎಂದು ಕರೆಯಲಾಗಿದೆ. ೨೬-೧-೧೯೫೦ರಲ್ಲಿ ಸಂವಿಧಾನ ರಚನೆಯ ನಂತರ ಈ ಮೀಸಲಾತಿ ಕೇವಲ ೧೦ ವರ್ಷ (೧೯೫೦ರಿಂದ ೧೯೬೦ರ ವರೆಗೆ)ಗಳ ಕಾಲ ಇರಲಿ, ಮುಂದಿನವರು ಮುಂದುವರೆಸಬೇಕೆನ್ನಿಸಿದರೆ ಮುಂದುವರೆಸಲಿ, ಇಲ್ಲದಿದ್ದರೆ ಅದು ತನ್ನಷ್ಟಕ್ಕೆ ತಾನು ರದ್ದಾಗುತ್ತದೆ ಎಂದು ಸಂವಿಧಾನ ರಚನಾಕಾರರು ತೀರ್ಮಾನಿಸಿದ್ದರು. ಮುಂದೆ ಬಾಬು ಜಗಜೀವನರಾಮ್ ಅವರು ಈ ಮೀಸಲಾತಿ ನಿಬಂಧನೆಯನ್ನು ಶಿಕ್ಷಣ ಮತ್ತು ಸರಕಾರಿ ಹುದ್ದೆಗಳಿಗೂ ವಿಸ್ತರಿಸಿ, ಆಡಳಿತಾತ್ಮಕ ಆಜ್ಞೆಯನ್ನು ಹೊರಡಿಸಿದರು. ಲೋಕಸೇವಾ ಆಯೋಗಗಳ ಮುಖಾಂತರ ಸರಕಾರಿ ಸೇವೆಗಳಿಗೆ ನೌಕರರನ್ನು ಆಯ್ಕೆಮಾಡಿಕೊಳ್ಳುವಾಗ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳಿಗೆ ಸೂಕ್ತವಾದ ಪ್ರಾತಿನಿಧ್ಯ ನೀಡುವ ಕಾನೂನನ್ನು ಜಾರಿಗೊಳಿಸಲಾಯಿತು.

ಮೀಸಲಾತಿ ಜಾರಿಗೆ ಬಂದ ಮೇಲೆ ಪ್ರಾರಂಭದಲ್ಲಿ ಇಪ್ಪತ್ತು ವರ್ಷಗಳವರೆಗೆ ಅದರ ಬಗೆಗೆ ಅಂತಹ ವಿರೋಧಗಳೇನೂ ಕಂಡುಬರಲಿಲ್ಲ. ಇದಕ್ಕೆ ಮುಖ್ಯ ಕಾರಣ ಆ ಅವಧಿಯಲ್ಲಿ (೧೯೫೦-೧೯೭೦) ದಲಿತರಷ್ಟೇ ಅಲ್ಲ, ಬಹುಪಾಲು ಹಿಂದುಳಿದ ವರ್ಗಗಳ ಜನರು ಅನಕ್ಷರಸ್ಥರಾಗಿದ್ದರು. ಮೀಸಲಾತಿ ಪಡೆಯುವ ಅಭ್ಯರ್ಥಿಗಳು ನಿಗದಿತ ಶೈಕ್ಷಣಿಕ



ಅರ್ಹತೆಗಳನ್ನು ಹೊಂದದೆ, ಯಾವುದೇ ಸರಕಾರಿ ಹುದ್ದೆಯನ್ನು ಪಡೆಯುವುದು ಸಾಧ್ಯವಿರಲಿಲ್ಲ. ಕೆಲವು ಹುದ್ದೆಗಳು ದಲಿತರಿಗಾಗಿ ಮೀಸಲಿರಿಸಲ್ಪಟ್ಟಿವೆ ಎಂದು ಜಾಹಿರಾತುಗಳಲ್ಲಿ ಪ್ರಕಟಗೊಂಡರೂ, ಅಭ್ಯರ್ಥಿಗಳು ದೊರಕುತ್ತಿಲ್ಲವೆಂಬ ಸಬೂಬು ಹೇಳಿ ಹುದ್ದೆಗಳನ್ನು ಮೇಲುಜಾತಿಯ ಜನಗಳೇ ಪಡೆದುಕೊಳ್ಳುತ್ತಿದ್ದರು. ಆದರೆ ಎಪ್ಪತ್ತರ ದಶಕದ ನಂತರ ನಿಧಾನಕ್ಕೆ ಶಿಕ್ಷಣ ಪಡೆದುಕೊಂಡ ದಲಿತ ಅಭ್ಯರ್ಥಿಗಳು ಲಭ್ಯವಾಗತೊಡಗಿದಂತೆ ಅವರಿಗೆ ಮೀಸಲಿಟ್ಟ ಹುದ್ದೆಗಳನ್ನು ತುಂಬಲೇಬೇಕಾದ ಅನಿವಾರ್ಯತೆಯೊದಗಿತು. ದಲಿತರು ಅಧಿಕಾರಿಗಳಾಗಿ ಕುರ್ಚಿಗಳಲ್ಲಿ ಆಸೀನರಾಗುವುದನ್ನು ನೋಡಿ ಸಹಿಸುವುದು ಸವರ್ಣೀಯರಿಗೆ ಕಷ್ಟವಾಯಿತು. ಸವರ್ಣೀಯರ ಹೊಲ, ಗದ್ದೆಗಳಲ್ಲಿ ಕಡಿಮೆ ಕೂಲಿಗೆ ಹಗಲಿರುಳೂ ದುಡಿಯುತ್ತಿದ್ದ ದಲಿತರು ಈಗ ಸರಕಾರಿ ಕೆಲಸಗಳಲ್ಲಿ ಸೇರುವಂತಾದರೆ ತಮ್ಮ ಗತಿ ಏನಾದೀತೆಂದು ಅವರು ಯೋಚಿಸತೊಡಗಿದರು. ದಲಿತರು ದೇವಸ್ಥಾನಗಳಲ್ಲಿ ಪ್ರವೇಶ ಮಾಡುವುದು, ಕೆರೆ, ಬಾವಿಗಳಿಂದ ನೀರು ಉಪಯೋಗಿಸುವುದು, ಹೋಟೆಲ್‌ಗಳಲ್ಲಿ ಪ್ರವೇಶ ಮಾಡುವುದು ಮೊದಲಾದ ನಾಗರಿಕ ಹಕ್ಕುಗಳಿಗಾಗಿ ಹೋರಾಟ ನಡೆಸಲು ಮುಂದಾದರು. ಇದನ್ನು ಸಹಿಸದ ಸವರ್ಣೀಯರು ಮೀಸಲಾತಿ ಸೌಲಭ್ಯವಿರುವುದರಿಂದ ಹೀಗೆ ದಲಿತರು ವರ್ತಿಸುತ್ತಿದ್ದಾರೆಂದು ಭಾವಿಸಿ, ಮೀಸಲಾತಿ ವಿರುದ್ಧ ಗುಸು ಗುಸು ಆರಂಭವಾಯಿತು. ರಾಷ್ಟ್ರದ ಹಿತಾಸಕ್ತಿಯ ಅಂಶವನ್ನು ಮುಂದೆ ಮಾಡಿ, ಇದರಿಂದ ಅರ್ಹತೆಯನ್ನು ಕಡೆಗಣಿಸಲಾಗುತ್ತಿದೆ, ಪ್ರತಿಭೆ ನಾಶವಾಗುತ್ತಿದೆ, ಗುಣಮಟ್ಟ ಕುಸಿಯುತ್ತಿದೆ ಎಂಬ ವಾದಗಳನ್ನು ಮುಂದಿಟ್ಟು, ಮೀಸಲಾತಿಯ ವಿರುದ್ಧ ಚಳವಳಿಗಳನ್ನು ನಡೆಸತೊಡಗಿದರು.

೧೯೮೦ರ ಸುಮಾರಿಗೆ ಮೊದಲು ಗುಜರಾತಿನಲ್ಲಿ ಆರಂಭವಾದ ಮೀಸಲಾತಿ ವಿರೋಧಿ ಚಳವಳಿ, ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ಕರ್ನಾಟಕ ಹೀಗೆ ದೇಶದ ಹಲವು ಭಾಗಗಳಲ್ಲಿ ವ್ಯಾಪಿಸಿ ಪ್ರಚಾರ ಪಡೆಯಿತು. ಜಾತಿ ಆಧಾರಿತ ಮೀಸಲಾತಿ ಬೇಡ, ಆರ್ಥಿಕವಾಗಿ ಹಿಂದುಳಿದವರಿಗೆ ಮೀಸಲಾತಿ ಇರಲಿ, ಎಂಬ ಹೇಳಿಕೆಗಳು ಪತ್ರಿಕೆಗಳಲ್ಲಿ ವರದಿಯಾದವು. ಈ ಮೀಸಲಾತಿ ವಿರೋಧಿ ಅಲೆ ಕೆಲವೇ ಪಟ್ಟಭದ್ರ ಹಿತಾಸಕ್ತಿ ಜನಗಳ ಕುತಂತ್ರದಿಂದ ಉದ್ಭವಿಸಿತ್ತು. ಇವರೆಲ್ಲ ಸಮಾಜದಲ್ಲಿ, ಸರಕಾರಿ ಸೇವೆಗಳಲ್ಲಿ, ಪ್ರತಿಷ್ಠಿತ ಸ್ಥಾನಗಳಲ್ಲಿದ್ದುದರಿಂದ ಮಾಧ್ಯಮಗಳಲ್ಲಿ ಈ ಸುದ್ದಿ ಹೆಚ್ಚು ಪ್ರಚಾರ ಪಡೆಯಿತು. ಆದರೆ ಮೀಸಲಾತಿಗೆ ಅರ್ಹರಾಗಿದ್ದ ಸಮುದಾಯಗಳು, ಮೇಲುವರ್ಗದವರು ನಡೆಸುತ್ತಿದ್ದ ಇಂತಹ ಚಳವಳಿಗಳ ವಿರುದ್ಧ ಮೀಸಲಾತಿ ಪರ ಚಳವಳಿಗಳನ್ನು ಪರ್ಯಾಯವಾಗಿ ನಡೆಸತೊಡಗಿದವು.

ಮೀಸಲಾತಿ ಪರ ಮತ್ತು ವಿರುದ್ಧದ ಈ ಚಳವಳಿಗಳೊಂದಿಗೆ ರಾಜಕೀಯ ಹಸ್ತಕ್ಷೇಪವೂ ಸೇರಿಕೊಂಡಿತು. ಪ್ರತಿಶತ ೫೦ರಷ್ಟಿದ್ದ ಕೆಳಜಾತಿ ಜನಗಳು ಚುನಾವಣೆಗಳಲ್ಲಿ ನಿರ್ಣಾಯಕ ಮತದಾರರಾಗಿದ್ದುದರಿಂದ ಮೀಸಲಾತಿ ಮುಂದುವರಿಕೆಗೆ ಕಾಂಗ್ರೆಸ್ ಪಕ್ಷ ಬದ್ಧವಾಯಿತು. ೧೯೭೭ರಲ್ಲಿ ಕೇಂದ್ರದಲ್ಲಿ ಮೊದಲ ಬಾರಿಗೆ ಅಧಿಕಾರಕ್ಕೆ ಬಂದ ಭಾರತೀಯ ಜನತಾ ಪಕ್ಷವು ಈ ದೃಷ್ಟಿಯಿಂದ ಹಿಂದೆ ಬೀಳಲಿಲ್ಲ. ಮೀಸಲಾತಿ ಸೌಲಭ್ಯವನ್ನು ಹಿಂದುಳಿದ ವರ್ಗಗಳಿಗೂ ವಿಸ್ತರಿಸುವ ಉದ್ದೇಶದಿಂದ ೧೯೮೦ರಲ್ಲಿ ಮಂಡಲ್ ಆಯೋಗ ರಚನೆಯಾಯಿತು. ೧೯೯೦ರಲ್ಲಿ ವಿ. ಪಿ. ಸಿಂಗ್ ಸರ್ಕಾರ ಮಂಡಲ್ ವರದಿಯ ಆಂಶಿಕ ಜಾರಿಗೆ ಒಪ್ಪಿಗೆ ಇತ್ತಾಗ, ಭಾರತೀಯ ಜನತಾ ಪಕ್ಷ ತಾನು ನೀಡಿದ್ದ ಬೆಂಬಲವನ್ನು ವಾಪಸ್ ಪಡೆಯಿತು. ಆಗ ಅಧಿಕಾರದಲ್ಲಿದ್ದ ಈ ಪಕ್ಷವು ಕೆಳಜಾತಿಗಳಿಗೆ ಮೀಸಲಾತಿಯನ್ನು ಮುಂದಿನ ೧೦ ವರ್ಷಗಳಿಗೆ ಮುಂದುವರಿಸಿತ್ತು. ಅಷ್ಟೇ ಅಲ್ಲ ಇತ್ತೀಚೆಗೆ ಮಹಿಳೆಯರಿಗೆ ಪ್ರತಿಶತ ೩೩ ಮೀಸಲಾತಿ ಸೌಲಭ್ಯವನ್ನು ನೀಡಲು ಸಂಸತ್ತಿನಲ್ಲಿ ಚರ್ಚೆ ನಡೆದಿದೆ. ಆದರೆ ಇದರಲ್ಲಿ ಹಿಂದುಳಿದ ವರ್ಗ ಮತ್ತು ಕೆಳವರ್ಗದ ಮಹಿಳೆಯರಿಗೆ ಮೀಸಲಾತಿಗೆ ಪ್ರಮಾಣವನ್ನು ನಿಗದಿಗೊಳಿಸಲು ರಾಜಕೀಯ ಪಕ್ಷಗಳು ಹಿಂದೇಟು ಹಾಕುತ್ತಿವೆ. ಹೀಗೆ ಎಲ್ಲ ರಾಜಕೀಯ ಪಕ್ಷಗಳು ಅಧಿಕಾರ ಪಡೆಯಲು ಮೀಸಲಾತಿ ಪರ ನಿಲುವನ್ನು

ಬಹಿರಂಗದಲ್ಲಿ ಪ್ರಕಟಿಸುತ್ತಿವೆ ನಿಜ, ಆದರೆ ಅಂತರಂಗದಲ್ಲಿ ಮೀಸಲಾತಿ ಕುರಿತು ಮಲತಾಯಿ ಧೋರಣೆ ತಾಳಿವೆ.

ರಾಜಕೀಯ ಉದ್ದೇಶಗಳಿಗಾಗಿ ಮೀಸಲಾತಿ ಮುಂದುವರಿಯುವುದು ಸರ್ಕಾರಗಳಿಗೆ ಅನಿವಾರ್ಯವಾದಾಗ, ವಿರೋಧಿಸಿ ಫಲವಿಲ್ಲವೆಂದರಿತ ಮೇಲುಜಾತಿಯವರು ಈ ಸೌಲಭ್ಯವನ್ನು ಪಡೆಯಲು ಹೊಂಚು ಹಾಕತೊಡಗಿದವು. ಪರಿಶಿಷ್ಟಜಾತಿ/ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಅಸ್ಪೃಶ್ಯ ಜಾತಿಗಳನ್ನು ಮುಖ್ಯವಾಗಿ ಲಕ್ಷ್ಯದಲ್ಲಿರಿಸಿಕೊಳ್ಳಲಾಗಿತ್ತು.




ಏಕೆಂದರೆ ಬಡತನದ ಪ್ರಶ್ನೆ ಎಲ್ಲಾ ಜಾತಿಗಳಲ್ಲಿದ್ದರೂ ಅಸ್ಪೃಶ್ಯತೆ ಎಂಬುದು ಒಂದು ಅಮಾನುಷ ಪದ್ಧತಿಯಾಗಿದ್ದರಿಂದ, ಈ ಅನಿಷ್ಟ ಪದ್ಧತಿಯಿಂದ ಅಸ್ಪೃಶ್ಯರನ್ನು ಬಿಡುಗಡೆಗೊಳಿಸಲು ಮೀಸಲಾತಿ ಸೌಲಭ್ಯ ತೀರಾ ಅಗತ್ಯವೆಂದು ಭಾವಿಸಲಾಗಿತ್ತು. ಮೀಸಲಾತಿ ಸೌಲಭ್ಯದ ಮಹತ್ವವನ್ನರಿತ ಇತರ ಹಿಂದುಳಿದ ಜನಾಂಗದವರು ಪರಿಶಿಷ್ಟ ಪಟ್ಟಿಯಲ್ಲಿ ತಮ್ಮನ್ನೂ ಸೇರಿಸುವಂತೆ ರಾಜಕೀಯ ಒತ್ತಡ ತಂದವು.

ಕರ್ನಾಟಕದ ಸಂದರ್ಭದಲ್ಲಿ ಲಂಬಾಣಿಗರು, ಕೊರವರು, ಭೋವಿಗಳು ಮೊದಲಾದವರೆಲ್ಲ ಆರ್ಥಿಕವಾಗಿ ತುಂಬ ದುಃಸ್ಥಿತಿಯಲ್ಲಿರುವುದು ನಿಜವಾದರೂ, ಸಮಾಜದಲ್ಲಿ ಇವರನ್ನು ಸ್ಪೃಶ್ಯರೆಂದು ಪರಿಗಣಿಸಲಾಗಿದೆ. ಇವರನ್ನು ಪರಿಶಿಷ್ಟರ ಪಟ್ಟಿಗೆ ಸೇರಿಸಿರುವುದಕ್ಕೆ ಅಸ್ಪೃಶ್ಯರಲ್ಲಿಯೂ ಅಸಮಾಧಾನವಿದೆ. ಸಾಮಾಜಿಕವಾಗಿ ಬಲಿಷ್ಠರೆಂದು ಪರಿಗಣಿತರಾಗಿರುವ ಲಿಂಗಾಯತ ಮತದ ಜಂಗಮರು, ಬೇಡ ಜಂಗಮರೆಂದು, ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಲ್ಪಟ್ಟಿದ್ದಾರೆ. ಸಮಾಜದಲ್ಲಿ ನಾವು ಮೇಲಿನವರು ಎಂದು ಜಾತಿ ಪ್ರತಿಷ್ಠೆಯಿಂದ ನಡೆದುಕೊಳ್ಳುವ ಮೇಲುಜಾತಿ ಜನಗಳು ಮೀಸಲಾತಿ ಸೌಲಭ್ಯ ಪಡೆಯುವುದಕ್ಕಾಗಿ ನಾವು ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ, ಹಿಂದುಳಿದವರೆಂದು ಸುಳ್ಳು ದಾಖಲೆ ಪತ್ರ ಸೃಷ್ಟಿಸಿ ಮೀಸಲಾತಿ ಸೌಲಭ್ಯವನ್ನು ಕೊಳ್ಳೆ ಹೊಡೆಯುತ್ತಿದ್ದಾರೆ. ಅಸ್ಪೃಶ್ಯರಲ್ಲಿ ಮಾದಿಗ ಜನಾಂಗವು ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ನಮಗೆ ಸಿಗಬೇಕಾದ ಪ್ರಮಾಣದಲ್ಲಿ ಮೀಸಲಾತಿ ದೊರಕಿಲ್ಲ, ಎಲ್ಲವನ್ನು ಹೊಲೆಯರೇ ಅನುಭವಿಸುತ್ತಿದ್ದಾರೆಂದು ವಾದಿಸಿ ಮಾದಿಗರಿಗಾಗಿ ಪ್ರತ್ಯೇಕ ಮೀಸಲಾತಿ ಪ್ರಮಾಣ ನಿಗದಿಯಾಗಬೇಕೆಂದು ಹೋರಾಟ ಮಾಡುತ್ತಿದ್ದಾರೆ. ಮೀಸಲಾತಿಯಿಂದ ಸುಧಾರಣೆ ಸಾಧ್ಯವೆಂದರಿತ ಇತರ ಹಿಂದುಳಿದ ಜಾತಿಗಳು ಮತ್ತು ಬಲಿಷ್ಠ ಜಾತಿಗಳು ಕೂಡಿಯೇ ಮೀಸಲಾತಿ ಸೌಲಭ್ಯ ಪಡೆಯಲು ಪೈಪೋಟಿಗಿಳಿದಿವೆ.

ಜಾತಿಯನ್ನು ಹೋಗಲಾಡಿಸುವ ಉದ್ದೇಶದಿಂದ ಸಂವಿಧಾನದಲ್ಲಿ ಜಾತ್ಯತೀತ ದೃಷ್ಟಿಯನ್ನು ಇರಿಸಿಕೊಳ್ಳಲಾಗಿದ್ದರೂ, ಜಾತಿ ವ್ಯವಸ್ಥೆಯು ದಿನದಿಂದ ದಿನಕ್ಕೆ ಇನ್ನಷ್ಟು ಗಟ್ಟಿಗೊಳ್ಳತೊಡಗಿದೆ. ಮೈಸೂರ್ ಸ್ಟೇಟ್ ಆರ್ಯ ವೈಶ್ಯರ ಮಹಾಸಂಘ (೧೯೧೫), ಬಲಿಜಗರ ಸಂಘ (೧೯೨೦), ಅಂಜುಮನ್-ಇ-ಇಸ್ಲಾಮಿಕ್ ಅಸೋಸಿಯೇಷನ್ (೧೯೨೨), ದೇವಾಂಗ ಸಂಘ (೧೯೨೪), ಇಂಡಿಯನ್ ಕ್ರಿಶ್ಚಿಯನ್ ಅಸೋಸಿಯೇಷನ್ (೧೯೨೪), ತಿಗಳರ ಸಂಘ (೧೯೨೪), ಮಾದವರ ಸಂಘ (೧೯೨೪), ಮರಾಠಾ ಸಮಾಜ (೧೯೨೪), ಕಣಿಯರ ಸಂಘ (೧೯೨೪), ಮೈಸೂರು ಸೀಮೆಯ ಲಂಬಾಣಿಗರ ಸಂಘ (೧೯೨೪), ಜ್ಯೋತಿನಗರ ವೈಶ್ಯ ಮಹಾಜನ ಸಂಘ (೧೯೨೬) ಮೊದಲಾದವು ಜಾತಿಯ ನೆಲೆಯಲ್ಲಿ ಜೋರಾಗಿ ನಡೆಯುತ್ತಿದ್ದು, ಮೀಸಲಾತಿಯೂ ಸೇರಿದಂತೆ ಇತರ ಅವಕಾಶಗಳನ್ನು ಪಡೆಯಲು ಜಾತಿ ಜಾತಿಗಳ ನಡುವೆ ಪೈಪೋಟಿ ಏರ್ಪಟ್ಟಿದೆ. ಇದರಿಂದ ನಿಜವಾದ ಸಂತ್ರಸ್ತರು ಮೀಸಲಾತಿ ಪಡೆಯುವಲ್ಲಿ ಅಸಹಾಯಕರಾಗಿ, ಸಾಮಾಜಿಕವಾಗಿ ಬಲಿಷ್ಠವಾಗಿರುವ ಗುಂಪುಗಳು, ಈ ಸೌಲಭ್ಯದ ಸಿಂಹಪಾಲನ್ನು ಅನುಭವಿಸುವಂತಾಗಿದೆ. ಮೇಲಾಗಿ ವೃತ್ತಿಗಳನ್ನು ಆಯ್ಕೆಮಾಡಿಕೊಳ್ಳಲು ಮೇಲ್ವರ್ಗದ ಜನಗಳಿಗೆ ಹೆಚ್ಚಿನ ಸ್ವಾತಂತ್ರ್ಯ ಮತ್ತು ಅವಕಾಶಗಳು ಲಭ್ಯವಿದ್ದು, ಕೆಳವರ್ಗದ ಜನರು ಅವರ ಮುಂದೆ ಕೈಕಟ್ಟಿ ನಿಲ್ಲಬೇಕಾದ ಪರಿಸ್ಥಿತಿಯಿದೆ.

ಸಮಾಜದಲ್ಲಿ ಕೀಳೆಂದು ಪರಿಗಣಿಸಲ್ಪಟ್ಟ ಬೀದಿ ಕಸ ಗುಡಿಸುವ, ಚರಂಡಿ ಮತ್ತು ಪಾಯಖಾನೆಗಳನ್ನು ಸ್ವಚ್ಛಗೊಳಿಸುವ ಕೆಲಸಗಳನ್ನು ಪ್ರತಿಶತ ೧೦೦ರಷ್ಟು ಕೆಳಜಾತಿಯ ಜನಗಳೇ ಮಾಡುತ್ತ ಬಂದಿದ್ದಾರೆ. ಇಂತಹ ಕೆಲಸಗಳನ್ನು ಮಾಡಲು ಮೇಲುಜಾತಿಯ ಜನಗಳಾರೂ ಮುಂದು ಬರುತ್ತಿಲ್ಲ. ಮೇಲ್ವರ್ಗದವರ ದೃಷ್ಟಿ ಬಿಳಿ ಕಾಲರಿನ ವೃತ್ತಿಗಳ ಮೇಲಿದೆ. ಸಮಾಜದಲ್ಲಿ ಅಧಿಕಾರಯುತವೂ, ಪ್ರತಿಷ್ಠಿತವೂ ಮತ್ತು ತುಂಬ ಲಾಭದಾಯಕವಾಗಿರುವ ವೃತ್ತಿಗಳನ್ನು ಪೂರ್ಣವಾಗಿ ತಾವೇ ಪಡೆಯಬೇಕೆಂಬುದು ಇವರ ಇರಾದೆಯಾಗಿದೆ. ಕೆಳ ಜಾತಿ ಜನಗಳು ತಮ್ಮ ಪಾಲಿಗೆ ಮೀಸಲಾಗಿರುವ ಹುದ್ದೆಗಳನ್ನು ಪಡೆಯಲು ಸಂವಿಧಾನ ಬದ್ಧವಾಗಿ ಅರ್ಹರಾಗಿದ್ದಾಗಲೂ, ಅದನ್ನು ತಪ್ಪಿಸಲು ಬೇಕಾದ ಎಲ್ಲ ಅಡ್ಡಿಗಳನ್ನು ಮೇಲ್ವರ್ಗದ ಜನ ಒಡ್ಡುತ್ತ ಬಂದಿದ್ದಾರೆ.

ಜಾತಿ ಪದ್ಧತಿಯ ಆಚರಣೆಯಿಂದಾಗಿ ಇಡೀ ಸಮಾಜವು ಒಡೆದು ಛಿದ್ರಛಿದ್ರವಾಗಿದೆ. ಅವಿದ್ಯಾವಂತರಿಗಿಂತಲೂ ವಿದ್ಯಾವಂತರೇ ಹೆಚ್ಚು ಜಾತಿವಾದಿಗಳಾಗುತ್ತಿದ್ದಾರೆ. ಇದರಿಂದ ಇಡೀ ದೇಶದಲ್ಲಿ ಅನೈಕ್ಯತೆ ಉಂಟಾಗಿ ಕೋಮುಗಲಭೆಗಳು ದಿನನಿತ್ಯದ ಸುದ್ದಿಯಾಗಿವೆ. ನಮ್ಮ ರಾಜಕೀಯ ನಾಯಕರು, ಬುದ್ಧಿಜೀವಿಗಳು ಮತ್ತು ಮಂತ್ರಿಮಹೋದಯರೆಲ್ಲ ತಮ್ಮ ತಮ್ಮ ಜಾತಿಯ ನಾಯಕರುಗಳಾಗಿ ಸಾರ್ವಜನಿಕ ವೇದಿಕೆಗಳಲ್ಲಿ ಯಾವ ಸಂಕೋಚವೂ ಇಲ್ಲದೆ ಭಾಗವಹಿಸುತ್ತಿದ್ದಾರೆ. ಡಾ|| ಬಿ. ಆರ್. ಅಂಬೇಡ್ಕರ್ ಅವರು ಸರಿಯಾಗಿಯೇ ಗುರುತಿಸಿದಂತೆ ''ಭಾರತೀಯರಿಗೆ ಸಾರ್ವಜನಿಕ ಅಭಿಪ್ರಾಯವೆಂಬುದೇ ಇಲ್ಲ, ಅವರ ನಿಷ್ಠೆ ಏನಿದ್ದರೂ ತಮ್ಮ ತಮ್ಮ ಜಾತಿಗಳಿಗೆ ಅಥವಾ ಮತಗಳಿಗೆ ಮಾತ್ರ ಸೀಮಿತವಾಗಿದೆ.'' ಇದು ಒಟ್ಟಾರೆಯಾಗಿ ನಮ್ಮ ರಾಷ್ಟ್ರದ ಅಭಿವೃದ್ಧಿ ಕುಂಠಿತಗೊಳ್ಳಲು ಕಾರಣವಾಗಿದೆ ಎಂಬುದನ್ನು ನಾವಾರೂ ಗಂಭೀರವಾಗಿ ಯೋಚಿಸುತ್ತಿಲ್ಲ. ಚುನಾವಣೆಯಲ್ಲಿ, ಸಂಪುಟ ರಚನೆಯಲ್ಲಿ ಜಾತಿಯನ್ನು ಮುಖ್ಯವಾಗಿ ಇರಿಸಿಕೊಳ್ಳುವುದರಿಂದ ಜಾತಿವಾದಕ್ಕೆ ಹೆಚ್ಚಿನ ಕುಮ್ಮಕ್ಕು ದೊರೆತಂತಾಗಿದೆ. ಕೆಳಜಾತಿ ಜನಗಳು ಜಾತಿ ವ್ಯವಸ್ಥೆಯಿಂದ ಬಿಡುಗಡೆಗೊಳ್ಳಲು ಯೋಚಿಸುತ್ತಿದ್ದರೆ, ಮೇಲುಜಾತಿ ಜನಗಳು ಜಾತಿಯನ್ನು ಉಳಿಸಿಕೊಳ್ಳಲು ಕಟಿಬದ್ಧರಾಗಿದ್ದಾರೆ. ಇದರಿಂದ ಒಟ್ಟಾರೆಯಾಗಿ ಸಮಾಜವು ಹಲವಾರು ಗಂಭೀರ ಸಮಸ್ಯೆಗಳಿಗೆ ಸಿಲುಕಿದೆ. ಜಾತಿ ವ್ಯವಸ್ಥೆಗೆ ಮೊದಲ ಬಲಿಯಾಗಿ ಹೆಣ್ಣು ಸಿಲುಕಿಕೊಂಡಿದ್ದಾಳೆ. ಹೆಣ್ಣಿನ ಬಿಡುಗಡೆಯಾಗದ ಹೊರತು ದಲಿತರ ವಿಮೋಚನೆಯಾಗಲಾರದು. ಶೋಷಿತರನ್ನು ವಿಮೋಚನೆಗೊಳಿಸದೆ ದೇಶವನ್ನು ಸುರಕ್ಷಿತಗೊಳಿಸಲು ಸಾಧ್ಯವೇ ಇಲ್ಲ. ಈ ಹಿನ್ನೆಲೆಯಲ್ಲಿ ನಮ್ಮ ಸರ್ಕಾರ ಮೀಸಲಾತಿಗೆ ಸಂಬಂಧಿಸಿ ದೇಶದ ಹಿತದೃಷ್ಟಿಯಿಂದ ಕೆಲವು ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ.

ರಾಜ್ಯದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಜನರನ್ನೇ ತೆಗೆದುಕೊಂಡರೆ ಜಾತಿಯಿಂದ ಮೀಸಲಾತಿ ಪಡೆದ ಒಬ್ಬ ವ್ಯಕ್ತಿ ಅದೇ ಜಾತಿಯ ಜನರನ್ನು ಗುಲಾಮರನ್ನಾಗಿ ಮಾಡಿಕೊಂಡು, ತನ್ನ ಹಿತಾಸಕ್ತಿಗೆ ಅವರನ್ನು ಬಳಸಿಕೊಳ್ಳುತ್ತಿದ್ದಾನೆ. ಇನ್ನುಳಿದ ಅದೇ ಜಾತಿಯ ಜನರಿಗೆ ಅವನಿಗೆ ದೊರೆತಂತಹ ಮೀಸಲಾತಿ ಸೌಲಭ್ಯಗಳು ದೊರೆಯುತ್ತಿಲ್ಲ. ಇದನ್ನು ಸರ್ಕಾರ ಈಗ ಗಂಭೀರವಾಗಿ ವಿಚಾರಿಸಬೇಕಾಗಿದೆ. ದಲಿತರಿಗೆ ಮೀಸಲಾಗಿರುವ ಪ್ರಮಾಣದಲ್ಲಿ ಸ್ಪೃಶ್ಯ ಜಾತಿಗಳನ್ನು ಸೇರಿಸಕೂಡದು.

ಅಸ್ಪೃಶ್ಯ ಜಾತಿಗಳಿಗೂ ಜನಸಂಖ್ಯಾ ಆಧಾರದ ಮೇಲೆ ಪ್ರತ್ಯೇಕ ಮೀಸಲಾತಿ ಜಾರಿಗೊಳಿಸಬೇಕು. ಇತರ ಶೂದ್ರ ಮತ್ತು ಹಿಂದುಳಿದ ವರ್ಗಗಳಿಗೆ ಆಯಾ ಜಾತಿಗಳ ಜನಸಂಖ್ಯಾವಾರು ಮೀಸಲು ಸ್ಥಾನಗಳನ್ನು ನಿಗದಿಗೊಳಿಸಬೇಕು. ಅಂತರ್‌ಜಾತಿ ವಿವಾಹ ಮಾಡಿಕೊಳ್ಳುವವರಿಗೆ ಹೆಚ್ಚಿನ ಆದ್ಯತೆಯ ಮೇಲೆ ಮೀಸಲಾತಿ ಸೌಲಭ್ಯ ದೊರಕಬೇಕು. ಮೀಸಲಾತಿ ಪಡೆಯಲು ಪ್ರತಿಯೊಂದು ಕುಟುಂಬಕ್ಕೆ ಒಂದೇ ಅವಕಾಶವಿರಬೇಕು.

ರಾಷ್ಟ್ರದ ಎಲ್ಲ ಜಾತಿಗಳಲ್ಲೂ ಸಮಾನತೆಯನ್ನು ತರಬೇಕು. ಎಲ್ಲಿಯವರೆಗೆ ಸಾರ್ವಜನಿಕ ಸ್ಥಳಗಳಾದ ಪೂಜಾ ಗೃಹಗಳು, ಉಪಾಹಾರ ಮಂದಿರಗಳು, ಕೆರೆ, ಬಾವಿಗಳು ಮುಕ್ತವಾಗಿ ಎಲ್ಲರಿಗೂ ತೆರೆಯುವುದಿಲ್ಲವೋ, ಎಲ್ಲಿಯವರೆಗೆ ಈ ದೇಶದ ಪ್ರತಿಯೊಬ್ಬ ಪ್ರಜೆಗೂ ದುಡಿಯುವ ಹಕ್ಕನ್ನು ಕೊಡುವುದಿಲ್ಲವೋ ಅಲ್ಲಿಯವರೆಗೂ ಜಾತಿ ಆಧಾರದ ಮೀಸಲಾತಿ ಪ್ರಸ್ತುತವಾಗಿ ನಿಲ್ಲುತ್ತದೆ.

**ಡಾ|| ತಿಪ್ಪೇಸ್ವಾಮಿ ಡಿ. ಎಸ್.**
ವಿ. ಎಂ. ಎಸ್. ಆರ್. ವಸ್ತ್ರದ ಕಲಾ, ವಿಜ್ಞಾನ ಹಾಗೂ
ವಿ. ಎಸ್. ಬೆಳ್ಳಿಹಾಳ ವಾಣಿಜ್ಯ ಕಾಲೇಜು, ಹುನಗುಂದ, ಬಾಗಲಕೋಟೆ ಜಿಲ್ಲೆ

# ಗರ್ಭಪಾತ ಎಂಬ ಹಕ್ಕು

## ಒಂದು ವಿಶ್ಲೇಷಣೆ



ಆಧುನಿಕತೆ ಹಲವು ರಂಗಗಳಲ್ಲಿ ಪ್ರಗತಿಯನ್ನು ಸಾಧ್ಯವಾಗಿಸಿದರೂ, ಒಂದು ಮೌಲ್ಯವಾಗಿ ಅದರ ಸ್ಥಾನ ಅಸ್ಪಷ್ಟವಾದದ್ದು. ಸಮಾಜದ ರಚನೆ, ಆಚರಣೆಯಲ್ಲಿರುವ ಮೌಲ್ಯಗಳು, ವರ್ಗ, ಜಾತಿ, ಲಿಂಗ ಮುಂತಾದುವುಗಳ ನೆಲೆಯಲ್ಲಿ ರೂಪಿಸಲ್ಪಟ್ಟ ವ್ಯಕ್ತಿ ಇತ್ಯಾದಿಗಳ ಮೇಲೆ ಆಧುನಿಕತೆಯ ಪರಿಣಾಮ ಅತ್ಯಲ್ಪವಾದದ್ದು. ಪ್ರಾಯಶಃ ಇಲ್ಲಿ ಆಳವಾಗಿ ಬೇರೂರಿರುವ ಮನುಷ್ಯನಿರ್ಮಿತ ನೇತ್ಯಾತ್ಮಕ ಅಂಶಗಳು ಆಧುನಿಕತೆಯೊಂದಿಗೆ ಮುಖಾಮುಖಿಯಾದಾಗ ಈ ವ್ಯಂಗ್ಯ ಕಣ್ಣಿಗೆ ರಾಚುತ್ತದೆ. ಆಧುನಿಕತೆಯೊಂದಿಗೆ ಸಾಮಾಜಿಕ ವ್ಯವಸ್ಥೆಯಲ್ಲೂ ಏಳಿಗೆಯಾದೀತು ಎಂದು ಆಶಿಸಿದ್ದರೆ, ನಮ್ಮ ಸುತ್ತಲಿನ ಹಿಂಸೆ, ಅಸಮಾನತೆ, ಜಾತಿ, ಲಿಂಗ, ವರ್ಣಾಧಾರಿತ ಶ್ರೇಣೀಕರಣ ಇದಕ್ಕೆ ತೀರ ವ್ಯತಿರಿಕ್ತವಾದ ಚಿತ್ರಣವನ್ನು ಕಟ್ಟಿಕೊಡುತ್ತವೆ. ಕೇವಲ ಮಹಿಳೆಯರನ್ನೇ ಮುಖ್ಯ ಭೂಮಿಕೆಯಲ್ಲಿರಿಸಿ ಈ ವಿಷಯಗಳನ್ನು ಮತ್ತೊಮ್ಮೆ ಪರಾಮರ್ಶಿಸಿದರೆ, ಸಾಮಾಜಿಕ ಸತ್ಯ ಮತ್ತು ಆಶಯಗಳ ನಡುವೆ ಇರುವ ಕಂದಕ ಮತ್ತಷ್ಟು ನಿಚ್ಚಳವಾಗಿ ತೋರುತ್ತದೆ. ಆಧುನಿಕ ಜಗತ್ತು, ಇಂದಿನ ಮಹಿಳೆಯ ಬದುಕನ್ನು ತೋರಿಕೆಗೆ ಸಹನೀಯವಾಗಿಸಿದರೂ, ನಮ್ಮ ನಡುವೆಯೇ ನೆಲೆ ನಿಂತಿರುವ ಪುರುಷ ಪ್ರಧಾನ ವ್ಯವಸ್ಥೆ ತನ್ನ ಇಕ್ಕಳದ ಹಿಡಿತವನ್ನು ಈ ಹೊಸ ಜಗತ್ತಿನಲ್ಲಿ ಇನ್ನಷ್ಟು ಬಿಗಿಯಾಗಿಸಿದೆ. 'ಸ್ತ್ರೀ' ಎಂಬ ಅಂಶವೇ ವ್ಯವಸ್ಥೆಯ ಕಾರ್ಖಾನೆಯಲ್ಲಿ ನಿರ್ಮಾಣಗೊಳ್ಳುತ್ತದೆ ಎಂಬ ಸತ್ಯ ಇತ್ತೀಚಿನ ಚಿಂತಕರ ಕೊಡುಗೆ. ಹೇಗೆ ನಿರ್ಮಾಣಗೊಂಡರೂ ಸದಾ ಲಿಂಗ ಅಸಮಾನತೆ, ಹಿಂಸೆ, ಗುಲಾಮಿಕೆಯ ಸುಳಿಯಲ್ಲಿಯೇ ಆಕೆ ಸಿಲುಕಿರುವುದು ಸದ್ಯದ ದುರಂತ. ಇಂದಿನ ಮಹಿಳೆ ಎದುರಿಸುವ ಸವಾಲುಗಳಿಗೆ ಸಾರ್ವಜನಿಕ ಮತ್ತು ಖಾಸಗಿ ಬದುಕುಗಳೆಂಬ ವ್ಯತ್ಯಾಸವಿಲ್ಲ, ತಾರತಮ್ಯ ಮತ್ತು ಹಿಂಸೆ ಎಷ್ಟು ಸಾರ್ವತ್ರಿಕವಾಗಿದೆಯೋ ಅಷ್ಟೇ ತೀವ್ರವಾಗಿ ಆಕೆಯ ಬದುಕಿನ ಹಲವು ಮಜಲುಗಳು ಅನ್ಯರ ನಿಯಂತ್ರಣದಲ್ಲಿವೆ. ಕೇವಲ ವ್ಯಕ್ತಿಗಳ ಹಂತದಲ್ಲಿಯೇ ಆರಂಭವಾಗುವ ಈ ನಿಯಂತ್ರಣವು ಧರ್ಮ, ಕುಟುಂಬ ಮತ್ತು ಇತರೆ ಸಾಂಸ್ಥಿಕ ರೂಪಗಳನ್ನು ತಾಳುತ್ತದೆ. ಇದು ಕೇವಲ ಕಾನೂನು ಮತ್ತು ಸಂವಿಧಾನಕ್ಕೆ ಮೊರೆಹೋಗುವ ಮುಖಾಂತರ ಬಗೆಹರಿಯುವ ಸಮಸ್ಯೆ ಅಲ್ಲ, ಕಾನೂನು, ಪುರುಷ ಪ್ರಧಾನ ವ್ಯವಸ್ಥೆಯ ಅತ್ಯಂತ ಸೂಕ್ಷ್ಮ ತಂತ್ರಗಾರಿಕೆಗಳಿಗೆ ಕುರುಡಾಗಿಯೇ ಉಳಿಯುತ್ತದೆ. ಇಂದಿಗೂ ಸ್ತ್ರೀ ತನ್ನ ದೇಹದ ಮೇಲಿನ ಹಕ್ಕುಗಳಿಗೆ ಹೋರಾಡಬೇಕಾಗಿರುವುದು ಇದಕ್ಕೆ ಉತ್ತಮವಾದ ನಿದರ್ಶನ.

ರಿಪ್ರೊಡಕ್ಟಿವ್ ರೈಟ್ಸ್‌ಗಳಿಗಾಗಿ ನಡೆಯುತ್ತಿರುವ ಹೋರಾಟ ಮಹಿಳೆಯರ ವಿರುದ್ಧದ ಹಿಂಸೆಯಷ್ಟು ಗಮನ ಸೆಳೆಯದೇ

**ಸಮಾಜದ ಕಾಳಜಿ ಒಬ್ಬ ಮಹಿಳೆ ಎಷ್ಟು ಸಮರ್ಥವಾಗಿ ತನ್ನ ಸ್ವಾತಂತ್ರ್ಯವನ್ನು ಅನುಭವಿಸಬಹುದು, ಎಷ್ಟು ಆರೋಗ್ಯವಾಗಿ ಜೀವಿಸಬಹುದು ಎನ್ನುವುದರ ಮೇಲಿರಬೇಕೇ ಹೊರತು ಇನ್ನೂ 'ಹುಟ್ಟಿಲ್ಲದ' ಭ್ರೂಣದ ಬಗೆಗಲ್ಲ, ಅಮೂರ್ತವಾಗಿರುವ ಭ್ರೂಣದ ಮೂಲಕ ಹೆಣ್ಣನ್ನು ಮತ್ತೆ ಮತ್ತೆ ಅಡಿಯಾಳಾಗಿಸುವ ಪುರುಷ ಪ್ರಧಾನ ವ್ಯವಸ್ಥೆಗೆ ಸೆಡ್ಡು ಹೊಡೆಯುವ ಈ ರಿಪ್ರೊಡಕ್ಟಿವ್ ರೈಟ್ಸ್ ಮತ್ತು ರಿಪ್ರೊಡಕ್ಟಿವ್ ಜಸ್ಟಿಸ್ ಹೋರಾಟಗಳು ಸ್ತ್ರೀಯರಿಗೆ ಹೊಸ ಜಗತ್ತಿನ ಭರವಸೆಗಳು. ಒಂದೇ ದನಿಯಲ್ಲಿ ತಮ್ಮ ಹೋರಾಟದ ಮೂಲೋದ್ದೇಶಗಳನ್ನು ಹೇಳಲಾಗದಿದ್ದರೂ, ಆಧುನಿಕ ಸಮಾಜದಲ್ಲಿ ಸ್ತ್ರೀವಾದ ಎತ್ತುತ್ತಿರುವ ಪ್ರಶ್ನೆಗಳು ಬಹು ಮುಖ್ಯವಾದುವು. ವ್ಯವಸ್ಥೆ ತಾಯ್ತನವು ಸ್ತ್ರೀತ್ವದ ನಿರ್ವಿವಾದಿತ ಅಂಗ ಎಂದು ಘೋಷಿಸಿರುವ ಈ ಹೊತ್ತಿನಲ್ಲಿ ಗರ್ಭಪಾತವನ್ನು ಹಕ್ಕು ಎಂದು ವಾದಿಸಿ ಹಲವಾರು ಮೂಲಭೂತ ಪ್ರಶ್ನೆಗಳನ್ನು ಮತ್ತೆ ಚರ್ಚೆಗೆ ಒಳಪಡಿಸಿರುವುದು ಸ್ತ್ರೀವಾದದ ಬಹು ದೊಡ್ಡ ಸಾಧನೆ.**

ಹೋದರೂ ಇತ್ತೀಚಿನ ದಿನಗಳಲ್ಲಿ ಸ್ವಲ್ಪ ಮಟ್ಟಿಗಾದರೂ ಚರ್ಚೆಗೆ ಗ್ರಾಸವಾಗಿದೆ. ತಾನು ಗರ್ಭ ಧರಿಸಬೇಕೇ, ಬೇಡವೇ ಎನ್ನುವುದು ಒಂದು ಹಂತದ ಪ್ರಶ್ನೆಯಾದರೆ, ಮಹಿಳೆ ಬಯಸಿದಾಗ ಗರ್ಭಪಾತದ ಹಕ್ಕು ಆಕೆಗಿರಬೇಕು ಎನ್ನುವುದು ಇನ್ನೊಂದು ಹಂತದ ಪ್ರಶ್ನೆ. ಸ್ತ್ರೀವಾದದ ಆಶಯಗಳು ವ್ಯಕ್ತಿ ಕೇಂದ್ರಿತವಾಗಿ ತೋರಿದರೂ, ರಿಪ್ರೊಡಕ್ಟಿವ್ ರೈಟ್ಸ್‌ಗಳ ಹೋರಾಟ ಪಾಶ್ಚಿಮಾತ್ಯ ಚಿಂತನೆಯ ತುಣುಕುಗಳಂತೆ ಕಂಡರೂ, ಇಂದಿನ ಸಾಮಾಜಿಕ ಭೂಮಿಕೆಯಲ್ಲಿ, ಪ್ರತಿ ದೇಶದೊಳಗೂ ಅವು ಎಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿದೆ. ಇತ್ತೀಚೆಗೆ ಐರ್ಲೆಂಡಿನಲ್ಲಿ ನಡೆದ ದುರ್ಘಟನೆ ನಮ್ಮೆದುರು ಹಲವಾರು ಪ್ರಶ್ನೆಗಳಿಗೆ ಎಡೆಮಾಡಿಕೊಡುತ್ತದೆ. ಭಾರತ ಮತ್ತು ಇತರೆ ಹಲವು ದೇಶಗಳಲ್ಲಿ ಗರ್ಭಪಾತ ಪೂರ್ಣ ಹಕ್ಕಾಗಿಲ್ಲ, ಕಾನೂನು ಗರ್ಭಪಾತವನ್ನು ಮಹಿಳೆಯ ಹಕ್ಕು ಎಂದು ಪರಿಗಣಿಸದೆ, ಅದು ಇಡೀ ಸಮಾಜಕ್ಕೆ ಸಂಬಂಧಿಸಿದ ವಿಷಯವೆಂಬಂತೆ ಪರಿಗಣಿಸಿರುವುದು ದುರಂತವೇ ಸರಿ. ಗರ್ಭಪಾತವನ್ನು ಕೇವಲ ಆಯ್ಕೆಯ ವಿಚಾರ ಎಂದು ಚರ್ಚಿಸುವುದರಿಂದ ಹಲವಾರು ಅನಾನುಕೂಲಗಳಿದ್ದರೂ, ಪ್ರಸ್ತುತ ಸಮಸ್ಯೆಯನ್ನು ಬೇರೆ ರೂಪದಲ್ಲಿ ಅನಾವರಣಗೊಳಿಸಲು ಸಾಧ್ಯವಿಲ್ಲ. ಅಮೆರಿಕಾದ ಉಚ್ಚ ನ್ಯಾಯಾಲಯ 'ರೋ ವಿರುದ್ಧ ವೇಡ್' ಎಂಬ ವಿವಾದದ ಸಂಬಂಧದಲ್ಲಿ ನೀಡಿದ ತೀರ್ಪಿನಲ್ಲಿ ಗರ್ಭಪಾತವನ್ನು ಹಕ್ಕು ಮತ್ತು ಆಯ್ಕೆಯ ಪ್ರಶ್ನೆಯನ್ನಾಗಿಸಿ ರೂಪಿಸಿದ ಮೇಲಂತೂ ಜಗತ್ತಿನೆಲ್ಲೆಡೆ ಇದು ಆಯ್ಕೆ ಮತ್ತು ವ್ಯಕ್ತಿ ಸ್ವಾತಂತ್ರ್ಯದ ವಿಷಯವಾಗಿಯೇ ಚರ್ಚೆಯಾಗುತ್ತಿದೆ. ಹಕ್ಕುಗಳ ವಿಚಾರ ಬಂದಾಗ ನಾವು 'ಆಯ್ಕೆ'ಯನ್ನು ರೂಪಿಸುವ ಸಾಮಾಜಿಕ ಮತ್ತು ಆರ್ಥಿಕ ಅಂಶಗಳ ಬಗ್ಗೆ ಎಚ್ಚರದಿಂದಿರಬೇಕು. ಪಾಶ್ಚಿಮಾತ್ಯ ದೇಶದ ಮೇಲ್ವರ್ಗದ ಒಬ್ಬ ಮಹಿಳೆ ಗರ್ಭಪಾತವನ್ನು ಹಕ್ಕಾಗಿ ಪರಿಗಣಿಸುವಾಗ ಭೂಮಿಕೆಯಲ್ಲಿರುವ ವಿಚಾರಗಳು, ಸಬ್ ಸಹಾರನ್ ದೇಶದಲ್ಲಿರುವ ಬಡ ಮಹಿಳೆಗೆ ಮುಖ್ಯವಾಗದೇ ಹೋಗಬಹುದು. ಹೀಗಾಗಿ ಸ್ತ್ರೀವಾದಿ ಚಿಂತನೆ ಮುಖ್ಯವಾಹಿನಿಯಲ್ಲಿ ಕಳೆದುಹೋಗದೆ, ರಿಪ್ರೊಡಕ್ಟಿವ್ ರೈಟ್ಸ್‌ಗಳ ಬಗೆಗಿನ ಹೋರಾಟವನ್ನು ರಿಪ್ರೊಡಕ್ಟಿವ್ ಜಸ್ಟಿಸ್ ಎಂಬ ನ್ಯಾಯದ ಪರಿಕಲ್ಪನೆಯೊಳಗೆ ರೂಪುಗೊಳಿಸಲು ಸಜ್ಜಾಗಿದೆ. ಆದರೆ ಇಂದು, ನಮ್ಮ ಹೋರಾಟವಿನ್ನೂ ತನ್ನ ಪ್ರಾಥಮಿಕ ಸವಾಲುಗಳಿಗೆ ಪೂರ್ಣವಾಗಿ ಉತ್ತರಿಸಲು ಸಾಧ್ಯವಾಗಿಲ್ಲವೇನೋ ಎಂಬ ಅನುಮಾನ ಮೂಡುತ್ತಿದೆ. ಕಾನೂನು ಕೂಡ ಪುರುಷ ಪ್ರಧಾನ ವ್ಯವಸ್ಥೆಯ ಅಂಗವಾಗಿರುವ ಕಾರಣ, ಅದರೊಳಗೆ ನ್ಯಾಯ, ಹಕ್ಕು, ಆಯ್ಕೆಗಳ ಬಗೆಗಿನ ಸಂಭಾಷಣೆ ಸಾಧ್ಯವಾಗದೇ ಹೋಗಬಹುದು.

ಸಮಾಜ, ಧರ್ಮ, 'ನೈತಿಕತೆ' ಮುಂತಾದವುಗಳಿಂದಲೇ ರೂಪುಗೊಂಡಿರುವ ಕಾನೂನಿನಲ್ಲಿ ಮತ್ತು ಸುತ್ತಲಿನ ಸಾಮಾಜಿಕ ಪರಿಸರದಲ್ಲಿ ಮೂಲಭೂತ ಸೈದ್ಧಾಂತಿಕ ಬದಲಾವಣೆಗಳಾಗದ ಹೊರತು ಗರ್ಭಪಾತವನ್ನು ಆಯ್ಕೆಯ ವಿಷಯವನ್ನಾಗಿ ಚರ್ಚಿಸುವುದು ಉಪಯುಕ್ತವೆನಿಸಲಾರದು. ಆದರೂ, ಮಹಿಳೆಗೆ ತನ್ನ ದೇಹದ ಮೇಲಿರುವ ಸ್ವಾತಂತ್ರ್ಯವನ್ನು ನಿರಾಕರಿಸುವುದು, ಅತ್ಯಂತ ಹೇಯವಾದ ಕಾರ್ಯ. ಇಲ್ಲಿಯವರೆಗೆ ಭ್ರೂಣವನ್ನು 'ಪರಿಪೂರ್ಣ ವ್ಯಕ್ತಿ' ಎಂದು ಪರಿಗಣಿಸುವುದರಿಂದ ಹಿಡಿದು, ತಾಯಿಯ ಆರೋಗ್ಯಕ್ಕೆ ಯಾವುದು ಒಳ್ಳೆಯದು ಎನ್ನುವುದರ ಬಗ್ಗೆ ತೀರ್ಮಾನಿಸಬೇಕಾದವರು ವೈದ್ಯರು ಎನ್ನುವ ತನಕ ಮಹಿಳೆಯ ಸ್ವಾತಂತ್ರ್ಯವನ್ನು ಇಂಚಿಂಚಾಗಿಯೇ ಕಸಿದುಕೊಳ್ಳಲಾಗುತ್ತಿದೆ. ಗರ್ಭಪಾತ ಕಾನೂನುಬದ್ಧವಾಗಿರುವ ಹಲವು ದೇಶಗಳಲ್ಲೂ ಇದು ಆಯ್ಕೆಯ ವಿಷಯವಾಗಿಲ್ಲ. ಹಲವಾರು ನಿಯಮಾವಳಿಗಳು, ಕಟ್ಟಳೆಗಳನ್ನು ದಾಟಿದ ಮೇಲಷ್ಟೇ ಇಲ್ಲಿ ಗರ್ಭಪಾತಕ್ಕೆ ಅನುವು ಮಾಡಲಾಗುತ್ತದೆ. ಕೆಲವೆಡೆಯಂತೂ, ಪತಿ ಒಪ್ಪಿಗೆಯ ಸಹಿ ಹಾಕಿದ ಮೇಲಷ್ಟೇ ಗರ್ಭಪಾತಕ್ಕೆ ಅವಕಾಶ ನೀಡಲಾಗುತ್ತದೆ. ಆದರೆ, ತಾಯಿಯ ಜೀವ ಹೋಗುತ್ತದೆಂದಾಗಲೂ ಗರ್ಭಪಾತಕ್ಕೆ ಅವಕಾಶ ನೀಡಲಾರದಷ್ಟು ವ್ಯವಸ್ಥೆ ನಿರ್ದಯಿಯಾಗಿದೆಯೆಂದು ಯಾರೂ ಊಹಿಸಿರದ ಕಾರಣ ಐರ್ಲೆಂಡಿನ ಘಟನೆ ಮಾಧ್ಯಮಗಳಲ್ಲಿ ಸುದ್ದಿ ಮಾಡಿತು. ತನ್ನ ಬಸಿರನ್ನು ತಾನು ಉಳಿಸಿಕೊಳ್ಳಬೇಕೇ, ಬೇಡವೇ ಎಂಬ ಹಕ್ಕನ್ನೇ ಮಹಿಳೆಗೆ ನೀಡದಿರುವುದು ಇನ್ನಷ್ಟು ದೊಡ್ಡ ದುರಂತ ಎಂದು ಯಾರಿಗೂ ಅನ್ನಿಸದೇ ಇರುವುದು ವಿಷಾದದ ಸಂಗತಿ. ಐರ್ಲೆಂಡಿನ ಸಂಪ್ರದಾಯವಾದಿ ಸಮಾಜ ಮತ್ತು ಕಾನೂನಿಗೆ ರಿಪ್ರೊಡಕ್ಟಿವ್ ರೈಟ್ಸ್‌ಗಳೊಂದಿಗಿನ ತಿಕ್ಕಾಟ ಹೊಸತೇನಲ್ಲ. ಈ ಹಿಂದೆ, ಹಲವಾರು ಬಾರಿ ಐರೋಪ್ಯ ಮಾನವ ಹಕ್ಕು ನ್ಯಾಯಾಲಯದ ಮುಂದೆ (ಇಸಿಎಚ್ಆರ್) ಗರ್ಭಪಾತದ ಪ್ರಶ್ನೆ ಬಂದು ನಿಂತದ್ದಿದೆ. ಓಪನ್ ಡೋರ್ ಕೌನ್ಸೆಲಿಂಗ್ ಆ್ಯಂಡ್ ಡಬ್ಲಿನ್ ವೆಲ್ ವಿಮೆನ್ ವಿರುದ್ಧ, ಐರ್ಲೆಂಡ್ ಮತ್ತು ಎ. ಬಿ. ಆ್ಯಂಡ್ ಸಿ. ವಿರುದ್ಧ ಐರ್ಲೆಂಡ್ ಮೊಕದ್ದಮೆಗಳಲ್ಲಿ ನ್ಯಾಯಾಲಯವು ಗರ್ಭಪಾತದ ಹಕ್ಕನ್ನು ಮಾನವ ಹಕ್ಕೆಂದು ಪರಿಗಣಿಸಿದರೂ, ಇಲ್ಲಿಯ ತನಕ ಐರ್ಲೆಂಡ್ ಮತ್ತಿತರ ಐರೋಪ್ಯ ದೇಶಗಳ ಕಾನೂನಿನಲ್ಲಿ ಯಾವುದೇ ಗುರುತರವಾದ ಬದಲಾವಣೆಗಳಾಗಿಲ್ಲ. ಕೈರೋ ಘೋಷಣೆಯಲ್ಲಿ ಮೊದಲ ಬಾರಿಗೆ ರಿಪ್ರೊಡಕ್ಟಿವ್ ರೈಟ್ಸ್‌ಗಳ ಬಗೆಗಿನ ವ್ಯಾಖ್ಯಾನ ದೊರೆತರೂ, ಅದರ ಅಂಗೀಕಾರ ಇನ್ನೂ ಎಲ್ಲೂ ಸಾಧ್ಯವಾಗಿಲ್ಲ. ಸಾಕಷ್ಟು ಮುಂದುವರಿದಿರುವ ದೇಶಗಳಲ್ಲೇ ಈ ಪರಿಸ್ಥಿತಿಯಾದರೆ, ಇನ್ನು ಬಡರಾಷ್ಟ್ರಗಳು ಎದುರಿಸಬೇಕಾದ ಸವಾಲುಗಳೆಷ್ಟು ಗುರುತರವಾದುದೆಂದು ನಾವು ಗಮನಿಸಬೇಕು.

ಒಬ್ಬ ವ್ಯಕ್ತಿಯ ಸ್ವಾತಂತ್ರ್ಯ ಮತ್ತು ದೈಹಿಕ ಸಮಗ್ರತೆಯ ಕುರಿತಂತೆ ಒಂದು ಹಂತದ ನಂತರ ಸರ್ಕಾರ ಮತ್ತು ಸಮಾಜ ಮೂಗು ತೂರಿಸುವುದು ಸಹ್ಯವಾಗಲಾರದು. ಗರ್ಭಪಾತದ ವಿಚಾರದಲ್ಲೂ ಇದು ಮುಖ್ಯವಾಗುತ್ತದೆ. ಮಹಿಳೆಗೆ ಆಯ್ಕೆಯ ಪ್ರಶ್ನೆ ಬಂದಾಗ ಯಾವ ಕರ್ತೃತ್ವವನ್ನೂ ನೀಡದಿರುವುದು ಮಾನವ ಘನತೆಗೆ ಮಾಡುವ ಅವಮಾನ. ಸರ್ಕಾರ, ಗರ್ಭಪಾತವನ್ನು ಕಾನೂನುಬದ್ಧಗೊಳಿಸಬೇಕೇ, ಬೇಡವೇ ಎಂದು ಚಿಂತಿಸುವ ಬದಲು, ಸಾಧ್ಯವಾದಷ್ಟು ಇಲ್ಲಿನ ಆಸ್ಪತ್ರೆ, ಸಮಯಕ್ಕೆ ತಕ್ಕಂತಹ ಚಿಕಿತ್ಸೆ ಮುಂತಾದ ಮೂಲಭೂತ ಸೌಕರ್ಯಗಳೆಡೆಗೆ ಗಮನ ಹರಿಸಬೇಕು. ಇಲ್ಲಿ ಸಮಯಕ್ಕೆ ಸರಿಯಾದ ವೈದ್ಯಕೀಯ ನೆರವು ಸಿಗದೆ ನೂರಾರು ಗರ್ಭಿಣಿ ಮಹಿಳೆಯರು ಸಾವನ್ನಪ್ಪುತ್ತಿರುವಾಗ, ಗರ್ಭಪಾತವನ್ನು ನಿಷೇಧಿಸಿದರೆ, ಅವರು ಅವೈಜ್ಞಾನಿಕ ವಿಧಾನಗಳ ಮೊರೆಹೊಕ್ಕು ಇನ್ನಷ್ಟು ಅಪಾಯವನ್ನು ತಂದುಕೊಳ್ಳುವ ಸಾಧ್ಯತೆಯೇ ಹೆಚ್ಚು. ಸ್ತ್ರೀಯ ದೇಹವು ಸಂಸ್ಕೃತಿ, ಪರಂಪರೆಗಳ ಭಾರವನ್ನು ಹೊರುವ ಬಂಡಿಯಲ್ಲ; ಪುರುಷ ಪ್ರಧಾನ ವ್ಯವಸ್ಥೆಯ ನಿರೀಕ್ಷೆಗಳನ್ನು ಈಡೇರಿಸುವ ಸಾಧನವಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ತನ್ನ ದೇಹ ಮತ್ತು ಮನಸ್ಸುಗಳ ಮೇಲೆ ಸಂಪೂರ್ಣ ಹಿಡಿತವಿರುವಂತೆಯೇ ಒಬ್ಬ ಮಹಿಳೆಯೂ ತನ್ನ ದೇಹದ ಬಗೆಗಿನ ಆಯ್ಕೆ ಹೇಗಿರಬೇಕೆಂದು ಸ್ವಂತ ತೀರ್ಮಾನ ತೆಗೆದುಕೊಳ್ಳಲು ಅವಕಾಶವಿರಬೇಕು. ಹಿಂಸೆ ಎಂದರೆ, ಎಲ್ಲರ ಗಮನ ಸೆಳೆಯುವ ರಕ್ತಪಾತ, ಕೊಲೆ, ಮನೆಯಿಂದ ಹೊರಗೆ ನಡೆಯುವ ದೌರ್ಜನ್ಯ ಮುಂತಾದುವುಗಳೇ ಆಗಬೇಕೆಂದೇನಿಲ್ಲ. ಖಾಸಗಿ ಎನಿಸುವಂತಹ ವಲಯದಲ್ಲಾಗಲಿ, ಮನೆಯೊಳಗಡೆ ಅಥವಾ ತೀರ ವ್ಯಕ್ತಿಗತ ನೆಲೆಯಲ್ಲೇ ಆಗಲಿ ಹಿಂಸೆ ನೆಲೆಯೂರಿರುತ್ತದೆ. ಒಬ್ಬ ಮಹಿಳೆಯ ಆಯ್ಕೆಯ ಸ್ವಾತಂತ್ರ್ಯವನ್ನು ಕಸಿದುಕೊಂಡು, ಆಕೆಯನ್ನು ಕೇವಲ ಹೆಸರಿಲ್ಲದ ಸಾಂಸ್ಕೃತಿಕ ಪ್ರತಿನಿಧಿ, ಅಹಮಿಕೆಯ ಸಂಕೇತ ಅಥವಾ ಸಮಾಜದ ಆಕಾಂಕ್ಷೆಗಳನ್ನು ಹೊತ್ತುಕೊಳ್ಳುವ ವಾಹಿನಿಯನ್ನಾಗಿಸುವುದು ಅತ್ಯಂತ ಕ್ರೂರವಾದ ನಡವಳಿಕೆ. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ವಾಯತ್ತತೆಗಿಂತ ಮೊದಲು ಮಹಿಳೆಗೆ ತನ್ನ ದೇಹದ ಮೇಲೆ ಸಂಪೂರ್ಣ ಹಿಡಿತ ಸಾಧಿಸುವುದು ಸಾಧ್ಯವಾಗಬೇಕು. ಸಮಾಜದ ಕಾಳಜಿ ಒಬ್ಬ ಮಹಿಳೆ ಎಷ್ಟು ಸಮರ್ಥವಾಗಿ ತನ್ನ ಸ್ವಾತಂತ್ರ್ಯವನ್ನು ಅನುಭವಿಸಬಹುದು, ಎಷ್ಟು ಆರೋಗ್ಯವಾಗಿ ಜೀವಿಸಬಹುದು ಎನ್ನುವುದರ ಮೇಲಿರಬೇಕೇ ಹೊರತು ಇನ್ನೂ 'ಹುಟ್ಟಿಲ್ಲದ' ಭ್ರೂಣದ ಬಗೆಗಲ್ಲ. ಅಮೂರ್ತವಾಗಿರುವ ಭ್ರೂಣದ ಮೂಲಕ ಹೆಣ್ಣನ್ನು ಮತ್ತೆ ಮತ್ತೆ ಅಡಿಯಾಳಾಗಿಸುವ ಪುರುಷ ಪ್ರಧಾನ ವ್ಯವಸ್ಥೆಗೆ ಸೆಡ್ಡು ಹೊಡೆಯುವ ಈ ರಿಪ್ರೊಡಕ್ಟಿವ್ ರೈಟ್ಸ್ ಮತ್ತು ರಿಪ್ರೊಡಕ್ಟಿವ್ ಜಸ್ಟಿಸ್ ಹೋರಾಟಗಳು ಸ್ತ್ರೀಯರಿಗೆ ಹೊಸ ಜಗತ್ತಿನ ಭರವಸೆಗಳು. ಒಂದೇ ದನಿಯಲ್ಲಿ ತಮ್ಮ ಹೋರಾಟದ ಮೂಲೋದ್ದೇಶಗಳನ್ನು ಹೇಳಲಾಗದಿದ್ದರೂ, ಆಧುನಿಕ ಸಮಾಜದಲ್ಲಿ ಸ್ತ್ರೀವಾದ ಎತ್ತುತ್ತಿರುವ ಪ್ರಶ್ನೆಗಳು ಬಹುಮುಖ್ಯವಾದುವು. ವ್ಯವಸ್ಥೆ ತಾಯ್ತನವು ಸ್ತ್ರೀತ್ವದ ನಿರ್ವಿವಾದಿತ ಅಂಗ ಎಂದು ಘೋಷಿಸಿರುವ ಈ ಹೊತ್ತಿನಲ್ಲಿ ಗರ್ಭಪಾತವನ್ನು ಹಕ್ಕು ಎಂದು ವಾದಿಸಿ ಹಲವಾರು ಮೂಲಭೂತ ಪ್ರಶ್ನೆಗಳನ್ನು ಮತ್ತೆ ಚರ್ಚೆಗೆ ಒಳಪಡಿಸಿರುವುದು ಸ್ತ್ರೀವಾದದ ಬಹು ದೊಡ್ಡ ಸಾಧನೆ.

ಸಾಕ್ಷಿ
ನಂ. ೩೧, 'ವೆಂಕಟೇಶ್ವರ ನಿಲಯ', ೨ನೇ ಮುಖ್ಯರಸ್ತೆ
೫ನೇ ಅಡ್ಡರಸ್ತೆ, ೧೨ನೇ ಬ್ಲಾಕ್, ನಾಗರಭಾವಿ ಬಡಾವಣೆ
ಬೆಂಗಳೂರು - ೫೬೦ ೦೭೨







# “ಬಹುಮುಖಿ” ನಾಮದೇವ ಕಾಗದಗಾರ...





ರಾಣೇಬೆನ್ನೂರಿನ ಕಲಾವಿದ ನಾಮದೇವ ಕಾಗದಗಾರ ಲೇಖಕ ಮಾತ್ರವಲ್ಲ ಕಲಾ ಸಂಘಟಕ ಕೂಡಾ. ತನ್ನ ಸಮಾನ ಮನಸ್ಕ ಗೆಳೆಯರನ್ನು ಕಟ್ಟಿಕೊಂಡು ಕಲಾಚಟುವಟಿಕೆಗಳನ್ನು ನಡೆಸುತ್ತಿದ್ದಾರೆ. ತನ್ನ ಸುತ್ತಮುತ್ತಲ ಜಲಜೀವನದ ಬಗ್ಗೆ ಚಿತ್ರ ಬರೆಯುವ ಕಲಾತ್ಮಕ ದೃಷ್ಟಿಯುಳ್ಳಾತ. ನಾಮದೇವ ಕಾಗದಗಾರ ಜನಜೀವನದ ಮಗ್ಗಲುಗಳನ್ನು ತನ್ನದೇ ದೃಷ್ಟಿಕೋನದಿಂದ ಕಂಡುಕೊಂಡಿದ್ದು ಅಮೂರ್ತ ರೇಖೆಗಳಿಂದ, ಇದರ ಪರಿಣಾಮಗಳನ್ನು ತನ್ನ ಮನದೊಳಗೆ ಬಾಚುತ್ತಾ ರೇಖೆಗಳಿಂದ ಗೀಚುತ್ತಾ ಕಲಾಕೃತಿಗಳನ್ನು ನಿರ್ಮಿಸುತ್ತಿದ್ದವರು. ಸಮಕಾಲೀನ ಮತ್ತು ಅಮೂರ್ತ ಕಲೆಗಳಿಗಿಂತ ಭಿನ್ನವಾಗಿಯೂ ಯೋಚಿಸಿ ನೈಜ ಹಾಗೂ ಸಾಂಪ್ರದಾಯಿಕ ಚಿತ್ರಗಳನ್ನು ರಚಿಸುವಲ್ಲಿ ಆಸಕ್ತಿ ವಹಿಸುತ್ತಾರೆ.

**ಸವಿತಾ ಮಲ್ಲಾಡದ,** ‘ಶ್ರೀಹರಿ’, ೩ನೇ ಕ್ರಾಸ್, ೧ನೇ ಮೇನ್, ಅಶೋಕ ನಗರ, ರಾಣೇಬೆನ್ನೂರು - ೫೮೧೧೧೫







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil
© All rights reserved. Reproduction in whole or in part without permission is prohibited.

**HOSATHU** Kannada Monthly / JUNE 2013 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)


# ಗೋಲ್ಡನ್ ಗ್ಲೋ
# ಹೊಸ ಸಂತೂರ್‌ನದ್ದು

## ನಿಮಗಿದು ಸಿಕ್ಕಿದೆಯ?

ಸಂತೂರ್ ಈವಾಗ ಹೊಸ ಪರಿಮಳ ಮತ್ತು ಹೊಸ ಆಕಾರದೊಂದಿಗೆ ಬಂದಿದೆ, ಮತ್ತು ಸಂವರ್ಧಿತ ಸ್ನಾನದ ಅನುಭವ. ಇದು ವಿಶ್ವಾಸಾರ್ಹ ಪ್ರಾಕೃತಿಕ ಸಾರಗಳಾದ, ಸ್ಯಾಂಡಲ್ ಮತ್ತು ಟರ್ಮರಿಕ್‌ನಿಂದ ಸಮೃದ್ಧವಾಗಿದೆ, ಇವು ತ್ವಚೆಯ ಆಳದ ವರೆಗೆ ಸೇರಿ ನಿಮಗೆ ನೀಡುತ್ತೆ ದೀರ್ಘಕಾಲ ಬಾಳಿಕೆಯ ಚಿನ್ನದ ಕಾಂತಿ ತ್ವಚೆಯನ್ನು ಸುಂದರ ಹಾಗೂ ತಾರುಣ್ಯಪೂರ್ಣವಾಗಿರಿಸಲು ಲಕ್ಷಾಂತರ ಮಹಿಳೆಯರು ಹೊಸ ಸಂತೂರ್‌ನ್ನು ಆರಿಸಿಕೊಂಡಿರೋದರಲ್ಲಿ ಆಶ್ಚರ್ಯವೇನಿಲ್ಲ.




DRAFTFCB + ULKA 250993

ಹೊಸ ಸಂತೂರ್ ಟ್ರೈಮಾಡಿ
ಪಡೆಯಿರಿ ದೀರ್ಘಕಾಲ ಬಾಳಿಕೆಯ ಚಿನ್ನದ ಕಾಂತಿ

ನಿಮ್ಮ ಮೊಬೈಲ್ ಫೋನ್ browser ನಲ್ಲಿ www.2dscan.com ಗೆಹೋಗಿ ಫ್ರೀ ಸ್ಕ್ಯಾನಿಂಗ್ app.ನ್ನು ಡೌನ್‌ಲೋಡ್ ಮಾಡಿ.ನಿಮ್ಮ ಮೋಬೈಲ್ ಕ್ಯಾಮೆರಾವನ್ನು ಗ್ರಾಫಿಕ್ ಮೇಲೆ ಪಾಯಿಂಟ್ ಮಾಡಿ ಸಂತೂರ್ ಆ್ಯಡ್‌ನ್ನು ನೋಡಿ.



ತಾರುಣ್ಯಪೂರ್ಣ ತ್ವಚೆಯ ರಹಸ್ಯ

SANTOOR

Like our page at www.facebook.com/SantoorLounge